# ಕಳ್ಳರ ಕೂಟ.

ದೇವುಡು ಬರೆದುದು.

(ಎರಡನೆಯ ಮುದ್ರಣ)

ಪ್ರಕಾಶಕರು

ಕೃಷ್ಣಾ ಕಂಪೆನಿ,

ಬಳೇಪೇಟೆ, ಬೆಂಗಳೂರು ಸಿಟಿ.

೧೯೩೮

ಬೆಲೆ ೬ ಆಣೆ.

# ಎರಡನೆಯ ಮುದ್ರಣಕ್ಕೆ ಮುನ್ನುಡಿ.



ವಾಚಕರ ವಿಶ್ವಾಸದಿಂದಲೂ, ಪ್ರಕಾಶಕರ ಪ್ರೀತಿಯಿಂದಲೂ "ಕಳ್ಳರ ಕೂಟ" ವು ಎರಡನೆಯ ಮುದ್ರಣವನ್ನು ಕಂಡಿತು. ಉಭಯರ ಈ ಸೌಜನ್ಯಕ್ಕೆ ನಾನು ಬಹಳವಾಗಿ ಋಣಿಯಾಗಿರುವೆನು

ಉದಯಭಾರತದಲ್ಲಿ ಈ ಪುಸ್ತಕವನ್ನು ವಿಮರ್ಶೆಮಾಡುತ್ತಾ "ಈ ಪುಸ್ತಕಕ್ಕೆ ಪವಿತ್ರ ಪ್ರೇಮವೆಂದು ಹೆಸರಿದ್ದರೆ ಚೆನ್ನಾಗಿತ್ತು" ಎಂದಿದ್ದಾರೆ. ಕೃಷ್ಣಮೂರ್ತಿಯ ತಮೋಗುಣದ ಮೋಹ, ರಾಮಸ್ವಾಮಿಯ ರಜೋಗುಣದ ಕಾಮ, ಇವುಗಳನ್ನು ಸುಂದರಿಯ ಸತ್ವಗುಣದ ಪ್ರೇಮವು ಗೆದ್ದಿರುವುದೆಂಬುದರಿಂದ ಇದನ್ನು "ಪವಿತ್ರ ಪ್ರೇಮ" ವೆಂದೂ ಹೇಳಬಹುದು. ಆದರೆ ಈ ಕಥೆಯಲ್ಲಿ ಬರುವವರೆಲ್ಲರೂ ಒಂದಲ್ಲ ಒಂದು ತೆರದ ನ್ಯೂನತೆಯುಳ್ಳವರು ಎಂಬುದನ್ನು ನೋಡಿದರೆ "ಕಳ್ಳರ ಕೂಟ" ವೇ ಸರಿಯೆನ್ನಿಸಬಹುದೆಂದು ನನ್ನ ನಂಬಿಕೆ. ಅಲ್ಲದೆ ಆದರ್ಶದ ದಪ್ಪಮಾತುಗಳನ್ನು ಕಂಡವರೆಲ್ಲರೂ ಆಡುತ್ತಿರುವ ಈ ಕಾಲದಲ್ಲಿ, ಮಾನವರೆಲ್ಲರೂ ಒಂದಲ್ಲ ಒಂದು ವಿಧವಾದ ಕೊರತೆಯುಳ್ಳವರೇ ಎಂಬುದನ್ನು ಮನಗಾಣುವುದೂ ಕೂಡ ಅತ್ಯಗತ್ಯವಾಗಿದೆ. ನಮ್ಮಲ್ಲಿ ಅಲ್ಪಸ್ವಲ್ಪ ಲೋಪವಿದ್ದವರನ್ನೂ ಕಳ್ಳರೆನ್ನುವ ವಾಡಿಕೆಯುಂಟು. ಹೀಗೆ ಲೋಕವು ಕಳ್ಳರಕೂಟವಾದರೂ ಸುಖವಾಗಿರಲು ಸಾಧ್ಯವಿದೆಯೆಂದು ನನ್ನ ಭಾವನೆ. ಆ ಭಾವನೆಯನ್ನು ಈ ಸಣ್ಣ ಕಥೆಯು ಪುಷ್ಟೀಕರಿಸುವುದೆಂದು ನನ್ನ ನಂಬಿಕೆ.

ಮೂಲಗ್ರಂಥಕ್ಕೂ ಇವಕ್ಕೂ ಇರುವ ಸಂಬಂಧವೆಂತಹುದು ಎಂದು ಒಬ್ಬರು ಗೆಳೆಯರು ಕೇಳಿರುವರು. ಹೆಸರಿನಲ್ಲಿಯೂ ಉದ್ದೇಶದಲ್ಲಿಯೂ ಇರುವ ಸಾದೃಶ್ಯವೊಂದೇ ಈ ಎರಡಕ್ಕೂ ಇರುವ ಸಂಬಂಧ ಮಿಕ್ಕೆಲ್ಲದರಲ್ಲೂ ಅದು ಅದೇ ಇದು ಇದೇ.

ಇತಿ ಲೇಖಕ,

**ದೇವುಡು.**

# ಮೊದಲನೆಯ ಮುದ್ರಣಕ್ಕೆ ಮುನ್ನುಡಿ.

ಒದಾಗರಲ್ಲಿ ಓದಿನಾನೆಯು ಹೆಚ್ಚಾಗಿಂದು ಬರೆದ ಕಥೆಯಿದಕ್ಕೆ ಪ್ರಸಿದ್ಧ ಜರ್ಮನ್ ಕವಿಯಾದ ಗೀಟೆಯ "*Fellow Culprits*" ನಾಟಕವು ಬೀಜವು. ಎರಡು ಮೂರು ಸನ್ನಿವೇಶಗಳು ವಿನಾ ಮಿಕ್ಕುದೆಲ್ಲವೂ ಸ್ವತಂತ್ರವಾಗಿಯೇ ಕಲ್ಪಿತವಾದುದು. ಇದಕ್ಕೆ ಪ್ರೋತ್ಸಾಹವು ದೊರೆತರೆ ಇನ್ನೂ ಇಂತಹ ಕಥೆಗಳನ್ನು ಬರೆಯಬೇಕೆಂದಿರುವೆನು.

ಇತಿ ಲೇಖಕ,

**ದೇವುಡು.**

# ಕಳ್ಳರ ಕೂಟ



## ಮೊದಲನೆಯ ಭಾಗ

---

### ಹುಚ್ಚನೇ ಹೌದೇ?

---

### ಪ್ರಥಮ ಪರಿಚ್ಛೇದ

---

ದಫೇದಾರ ನರಸಿಂಗರಾಯನು ಬಹು ಬುದ್ಧಿವಂತ. ಅನೇಕ ಕಳ್ಳರನ್ನು ಹಿಡಿದುಕೊಟ್ಟು, ಮೇಲಿನ ಅಧಿಕಾರಿಗಳಲ್ಲಿ ಪ್ರೀತಿ ಗೌರವಗಳನ್ನು ಸಂಪಾದಿಸಿದ್ದನು. ಆದರೂ ಈ ಹಾಳು ಜನರ ಬಾಯಿ ಸುಮ್ಮನಿರದು. ಜೇಷ್ಟ ಆಷಾಢದ ಹೊಳೆಯು ಎರಡೂ ದಡಗಳನ್ನು ಮೀರಿ ಹರಿದುಬಿಡುವಂತೆ ಒಮ್ಮೊಮ್ಮೆ ಅಂಕೆಯನ್ನು ಮೀರಿ ನಡೆದು "ಅವನೋ ದಫೇದಾರ ನರಸಿಂಗ! ಕಳ್ಳ! ಕಳ್ಳರು ಕಾಣದ ಹಾಗೆ ಮನೆ ದೋಚಿದರೆ, ಅವನು ಕಂಡಹಾಗೆ ದೋಚುತ್ತಾನೆ. ಅವನು ಹಗಲುಕಳ್ಳ. ಕಳ್ಳನಾದರೂ ಯಾರಾದರೂ ಕಂಡರೆ ಓಡಿಹೋಗುತ್ತಾನೆ. ಇವನು ಯಾರನ್ನಾದರೂ ಕಂಡರೆ ಹುಡುಕುವುದು ಇನ್ನಷ್ಟು ಬಲ" ಎಂದು ಮುಂತಾಗಿ ಹೇಳಿಬಿಡುವರು. ಬಹು ಕಷ್ಟಪಟ್ಟು, ಕಟ್ಟಿದ ಕೃಷ್ಣರಾಜಸಾಗರದ

ಕಟ್ಟೆಯನ್ನು ಪ್ರವಾಹವು ಅಂಜಿಸಿ ಅಧಿಕಾರಿಗಳನ್ನು ದರ್ಶನಕ್ಕೆ ಬರಮಾಡಿಕೊಳ್ಳುವಂತೆ ಒ ನ್ನೊ ಮ್ಮೆ ಈ ಕಿಂವದಂತಿಯೂ ಬಲವಾಗಿ "ನಿಜವೇ?" ಎಂದು ವಿಚಾರಿಸಲು, ಸಾವಿರ ರೂಪಾಯಿ ಸಂಬಳದ ಅಧಿಕಾರಿಗಳನ್ನೇ ಎಷ್ಟೋಸಲ ಬರಮಾಡಿಕೊಳ್ಳುವುದು. ಅವರೆಲ್ಲರೂ ನರಸಿಂಗರಾಯನು ದಕ್ಷನೆಂದೂ ಪ್ರಾಮಾಣೀಕನೆಂದೂ ಕೈಕುಯ್ದು ಬರೆದುಕೊಟ್ಟಿರುವಾಗ, ಬಡವರ ಕೂಗು, ಅವನೆಷ್ಟು ನರಹತ್ಯಗಳನ್ನು ತಿಂದು ತೇಗಿರುವನೆಂದರೇನು? ದೊಡ್ಡ ಅಧಿಕಾರಿಗಳು Mr. Narasiga Rao ಅನ್ನುವಾಗ, ಹೊಟ್ಟೆಗಿಲ್ಲದವರು ನರಸಿಂಗ ಅಂದರೇನು? ಅವನು ಹೇಳುವುದಿಷ್ಟೆ. "ಹಲ್ಕಾ ಜನಗಳು" "ಕೈಗೆ ಸಿಕ್ಕಲಿ" ಇದರಮೇಲೆ ಮಾತಿಲ್ಲ. ನಾವಿಷ್ಟು ಮಾತ್ರ ಬಲ್ಲೆವು. ಇದು ಬರಿಯ ಮಾತಲ್ಲ. ಎಷ್ಟೋ ಜನ ನಿರಪರಾಧಿಗಳು ಜೈಲಿನಲ್ಲಿ ಶ್ರೀಮಾನ್ ಧಫೇದಾರ......ನ ಹೆಸರು ಹೇಳಿಕೊಂಡು, ಆ! ಮರೆತೆವು, ಅವನ ಗುಣಾವಳಿಯನ್ನು ಪಾಡುತ್ತ ಇರುವುದನ್ನು ನಾವು ಕೇಳಿದ್ದೇವೆ. ಆದರೆ ನಮಗೂ ದಿಗಿಲು. ಅದಕ್ಕಾಗಿ ಸುಮ್ಮನಿರುವುದು.

ನರಸಿಂಗರಾಯನಿಗೆ ಏನೋ ದೇವರು ಕೊಟ್ಟಹಾಗೆ ೧೪|| ರೂ|| ಸಂಬಳ ಬರುತ್ತಿದ್ದರೂ, ಆಸ್ತಿಯೇನೋ ೧೦-೧೫ ಸಾವಿರ ದಷ್ಟಿತ್ತು. ಪಾಪ! ೨೦ ವರ್ಷದ ಹಿಂದೆ ಅವರಿವರ ಕೈಕಾಲು ಹಿಡಿದು ಕೆಲಸಕ್ಕೆ ಸೇರಿದಾಗ, ಆ ಮಹಾತ್ಮನ ಆಸ್ತಿಯೆಲ್ಲವೂ ಆಕಾಶತತ್ವದಲ್ಲಿ ಅವ್ಯಕ್ತವಾಗಿದ್ದಿತು. ಆ ಸರಕಾರದವರ ಅನುಗ್ರಹವು ಇವನಿಗೆ ಪ್ರಾಪ್ತವಾಗಿ ಮೊದಲ ತಿಂಗಳು ೭ ರೂ|| ಸಂಬಳವು ಕೈಗೆ ಬಂದಿತು. ಅದರ ಜತೆಯಲ್ಲಿಯೇ ನರಸಿಂಗರಾಯನ ಆಸ್ತಿಯು ವ್ಯಕ್ತವಾಗುತ್ತ ಬಂದಿತು. ನರಸಿಂಗರಾಯನನ್ನೇ ಯಾರಾದರೂ ಆಸ್ತಿಯ ವಿಚಾರವಾಗಿ ಕೇಳಿದರೆ ಇನ್ನೂ ಉಪನಿಷತ್ತು ಶಾಂತಿ ಆಗಲಿಲ್ಲವೆನ್ನುವನು. ಸ್ವಲ್ಪ ಮಂದಬುದ್ಧಿಗಳಾದ ನಮ್ಮಂತವರು ಅದೇನೆಂದು ಕೇಳಿದರೆ, ಸೇದುತ್ತಿದ್ದ ಚುಟ್ಟವನ್ನು ಸೊಟ್ಟ

ಗಿಟ್ಟು, ಹಾಕಿಕೊಂಡು ಮೆರೆವ ಆ "ಹೊರಳಿಸಿದ ಚಿನ್ನ" ದ ಕನ್ನಡಕದ ಮಧ್ಯದಿಂದ, ಮೃತ್ಯುವಿನ ದಾಯಾದಿಯಂತೆ, ಮಹಾಸ್ನಿಗ್ಧವಾದ ದೃಷ್ಟಿಯಿಂದ ನೋಡುತ್ತ, ಸುಮಾರು ೬ ಧಡಿಯ ತೂಗಬಹುದಾದ ಆ ತೋಳಿನಿಂದ ಕಾಲುಗಂಟೆ ಕಿವಿಹಿಂಡಿ, ಕೇಳಿದವನನ್ನು ಹತ್ತಿರ ಎಳೆದುಕೊಂಡು ಸಣ್ಣಗೆ ಬೆನ್ನಿನಮೇಲೆ ಸ್ವಲ್ಪ ಬಾಸುಂಡೆ ಬರುವಂತೆ ತಟ್ಟಿ, ಗುದ್ದಿ " ಪೂರ್ಣ ! ಗೊತ್ತಿಲ್ಲ!" ಎಂದುಬಿಡುವನು. ಹಾಗೆಂದರೆ ೨೦ ಎಂದು ಅವನ ಅರ್ಥವಂತೆ! ಆ ವಿಧವಾದ ಆತನ ಮೆಚ್ಚಿಕೆಗೆ ಪಾತ್ರರಾದವರ ಮನೋಭಾವವು ಹೇಗಾದರೂ ಇರಲಿ. ನೋಡಿದವರಿಗೆ ತಪ್ಪದೆ ನಾಲ್ಕರ ಛಳಿ ಬರುತ್ತಿದ್ದಿತು. ಅಷ್ಟೇನು? ಈತನ ಶಹಬಾಸುಗಿರಿಗಳನ್ನು ಹುಡುಗರು ಸ್ವಲ್ಪ ಗ್ರಹಚಾರ ಕಡಮೆಯಾಗಿ ಯಾವತ್ತಾದರೂ ಕಂಡರೆ, ಅಂದು ತಾಯಿತಂದೆಗಳಿಗೆ ಹನುಮಂತರಾಯನ ಗುಡಿಯಲ್ಲಿ "ಗುಳಿಮದ್ದು" ಕಟ್ಟಿಸುವುದಕ್ಕೆ ಒಂದು ಆಣೆ ಖರ್ಚು. ಆದರೂ, ಅಲ್ಲಿಂದ ಮುಂದೆ ದಫೇದಾರನ ಹೆಸರೆತ್ತಿದರೆ ಆ ಹುಡುಗರ ತುಂಟಾಟವೇ ಮುಗಿದು ಹೋಗುತ್ತಿದ್ದಿತು.

ಇಂತಹ ಪುಣ್ಯಾತ್ಮನು ಇವತ್ತು ವರುಣದ ಛತ್ರದ ಕಡೆ ಹೋಗುತ್ತಿದ್ದನು. ಮೈಸೂರಿನಿಂದ ಹೊರಟಾಗ ಸುಮಾರು ಒಂದು ಘಂಟೆ. ಕೃಷ್ಣವರ್ಣದ ಆ ಹಿಡಂಬ ಸುಂದರಾಕೃತಿಯು ಮಧ್ಯಾಹ್ನದ ಬಿಸಿಲಿನಲ್ಲಿ ಬೆಂದು ಸ್ವಲ್ಪ ವಿವರ್ಣವಾಗಿದ್ದಿತು. ಆದರೂ ಆ ಗಟ್ಟಿ ಬಣ್ಣಕ್ಕೇನೂ ಲೋಪವಿರಲಿಲ್ಲ. ಬೆವರು ಮಾತ್ರ, ಬೆಟ್ಟದಿಂದ ಮಳೆ ಹುಯ್ದು ಮಾರನೇ ದಿನ ಹಗಿನು ಇಳಿದು ಬರುವಂತೆ ತಲೆ ಕತ್ತು ಕಣ್ಣು ಮೊಗ ಎಲ್ಲದರಿಂದಲೂ ಸುರಿದುಹೋಗುತ್ತಿದ್ದಿತು. ಆತನನ್ನು ಹೊತ್ತಿದ್ದ ಆ "ಬೈಕು" ಸಹ, ಸ್ವಲ್ಪ ಧೂಳಿ ಧೂಸರವಾಗಿ, ವರ್ಣಾಂತರವನ್ನು ಹೊಂದಿ, ಸ್ವಾಮಿಯ ಮನೋಭಾವವನ್ನೇ ಸೂಚಿಸುತ್ತಿದ್ದಿತು. ದಾರಿಯಲ್ಲಿ ಯಾರೂ ಸಿಕ್ಕಲಿಲ್ಲವಲ್ಲ ಎಂಬುದೊಂದೇ, ಇವನಿಗೆ ಮಹಾಕೋಪವನ್ನುಂಟುಮಾಡಿದ್ದಿತು. ಯಾರಿಗೂ ಅದೃಷ್ಟ ತೀರಿರಲಿಲ್ಲ. ಏನು ಮಾಡುವುದು ?

ಈ ವ್ಯಕ್ತಿಯು ಊರ ಸಮೀಪಕ್ಕೆ ಬಂದಹಾಗೆಲ್ಲಾ, ಆ ಛತ್ರದ ಮಗ್ಗುಲ ತೋಪಿನಿಂದ ಗಳಿಗೆಗೊಂದು ಸಲ ಒಂದು ಕಲ ಕಲ ಶಬ್ದವು ಕೇಳಿಸಿ, ತಟ್ಟನದು ನಿಂತು ನಿಶ್ಶಬ್ದವಾಗಿ, ಮತ್ತೆಯೂ ಹಾಗೇ ಕೇಳಿಸುವುದು ಹೆಚ್ಚಾಯಿತು. ದಫೇದಾರನೂ ಆತುರ ಪಟ್ಟು ಏನಿರಬಹುದೋ ನೋಡೋಣವೆಂದು ಕುತೂಹಲದಿಂದ ಬೇಗ ಬೇಗ ಬೈಸಿಕಲ್ಲು ಒತ್ತುತ್ತಿದ್ದನು. ಅಂತೂ ಬೈಸಿಕಲ್ಲು ಬಂದು ತೋಪಿನ ಬಳಿ ನಿಂತಿತು. ಕೂಡಲೆ ರಾಯನು ಸದ್ದಿಲ್ಲದೆ ಬಳಸಿಹೋಗಿ ಅಲ್ಲಿ ನಿಂತನು.

ಹರಕುಬರಕು ಬಟ್ಟೆಯಿಂದ ಹುಚ್ಚಾಗಿ ಸಿಂಗರಿಸಿಕೊಂಡು, ಬಾಯಿಗೆ ಬಂದುದನ್ನೆಲ್ಲಾ 'ಹಾಡು ಮಾಡಿಕೊಂಡು, ಹುಚ್ಚನೊಬ್ಬನು ನಿಂತಿದ್ದಾನೆ. ಅವನ ಸುತ್ತಲೂ, ಆ ಗ್ರಾಮದ ಹುಡುಗರೆಲ್ಲರೂ, ಸುತ್ತುಕೊಂಡಿದ್ದಾರೆ. ಅವನು ಒಮ್ಮೊಮ್ಮೆ ಅಳುತ್ತಾನೆ. ಮತ್ತೊಮ್ಮೆ ನಗುತ್ತಾನೆ. ಅವರ ವಿಶೇಷವೇನೆಂದರೆ ಅವನ ನಗುವು ಅಳುವಿನಂತೆ. ಸಾಲದೆ ಅವನು ಮಧ್ಯೆಮಧ್ಯೆ ಹಾಡುಗಳನ್ನು ಹೇಳುವನು. ಆ ಹಾಡಿನ ಅರ್ಥವು ತಿಳಿಯಲಿ ತಿಳಿಯದೆ ಹೋಗಲಿ, ಹುಡುಗರು ನಕ್ಕುಬಿಡುವರು. ಅವರು ತಿಳಿದಿರುವುದು ಅಷ್ಟೆ. ಹುಚ್ಚನಿಗೆ ಕಲ್ಲುಪೆಟ್ಟುಬಿದ್ದು ನೋವಿಗೆ ಅವನು ಅತ್ತರೆ, ಹುಡುಗರಿಗೆ ನಗು. ಅವನು ಅಸ್ತವ್ಯಸ್ತವಾಗಿ ಮಾತನಾಡಿದರೆ ಆಗಲೂ ನಗು. ಅಂತು ಹುಡುಗರ ಮನಸ್ಸಿನಲ್ಲಿ ಹುಚ್ಚಿಗೂ ನಗುವಿಗೂ ನಿಕಟ ಸಂಬಂಧ. ಹುಚ್ಚನು ಬಂದರೆ ಜತೆಯಲ್ಲಿ ನಗುವೂ ಬರಬೇಕು. ಅಷ್ಟೆ! ಹುಡುಕಿನೋಡುವುದಾದರೆ ಅವರೂ ಹುಚ್ಚರೆ!

ಇಂತಹ ಹುಚ್ಚನ ಮತ್ತು ಅವನ ಅನುಯಾಯಿಗಳ ಗುಂಪಿನಲ್ಲಿ ದಫೇದಾರನು ಹೋಗಿ ನಿಂತನು. ಕೂಡಲೆ ಆ ಹುಡುಗರ ಗುಂಪಿನಲ್ಲಿ ತುಂಬಿ ತುಳುಕುತ್ತಿದ್ದ ಸಂತೋಷವು ಬತ್ತಿ ಬಯ

ಲಾಯಿತು. ಈತನೂ ತನ್ನ ಸ್ವಭಾವಾನುಗುಣವಾಗಿ ಕಯ್ಯಲ್ಲಿದ್ದ ಚಾಟಿ—ಛೀ, ಅಲ್ಲ. Whip ಚಾಟಿಯೆಂದರೆ ಗಾಡಿ ಹೊಡೆಯು ವುದು Whip ಅಂದರೆ ದೊಡ್ಡದೊಡ್ಡ ಮನುಷ್ಯರು ಕಯ್ಯಲ್ಲಿ ಹಿಡಿದು ಆಡಿಸಲು, ಮತ್ತು ನಾಯಿ ಕುದುರೆ, ಆಳು, ಕಾಳು, ಇವ ರನ್ನು ಹೊಡೆಯಲೂ ಉಪಯೋಗಿಸುವ ನವನಾಗರಿಕತೆಯ ದಿವ್ಯಾ ಯುಧ—ಈ Whip ನಿಂದ, ಹುಚ್ಚನನ್ನು ಅನುಗ್ರಹಿಸಲು ಯತ್ನಿಸಿದನು. ಹುಚ್ಚನು ಆ ಕೂಡಲೆ ಜಾಣನಾಗಿ, ತಟ್ಟನೆ ಅದರ ಮಾರ್ಗದಿಂದ ಹಿಂದೆ ಸರಿದು, ಭೀಕರವಾದ ವಿಕಟಸ್ವರ ದಿಂದ "ನರಸಿಂಗರಾಯ!" ಎಂದನು. ಆ ವ್ಯಕ್ತಿಯ ಧ್ವನಿವೈ ಚಿತ್ರವೋ ಅಥವಾ ಆಕಾರ ವಿಶೇಷವೋ ವ್ಹಿಪ್ಪಾಯುಧವು ನಿಷ್ಫಲ ವಾಯಿತು. ಅಂತೂ ನರಸಿಂಗರಾಯನು ಅಪ್ರತಿಭನಾಗಿ ಒಂದು ಗಳಿಗೆ ನಿಂತಿದ್ದು ಒಂದು ಕತ್ತರಿ ಸಿಗರೇಟು ಸೇದಿಬಿಟ್ಟು, "This is not a K. D." ಎಂದು ಹೇಳಿಕೊಂಡು ಹೊರಟು ಹೋದನು.

ಇಷ್ಟು ಹೊತ್ತೂ ಹುಡುಗರೂ ಅವಾಕ್. ಎಲ್ಲರೂ ನರ ಸಿಂಗರಾಯನನ್ನು ನೋಡಿ ಬೆಪ್ಪಾಗಿ, ಅವನ ಬಾಯಿಂದ ಹೊರ ಡುವ ಸಿಗರೇಟು ಹೊಗೆಯ ಅಂದವನ್ನು ನೋಡುತ್ತಾ, ಎಲ್ಲ ವನ್ನೂ ಮರೆತು ನಿಂತುಬಿಟ್ಟಿದ್ದರು. ದಫೇದಾರನ ಬೆನ್ನು ಕಂಡ ಕೂಡಲೆ ಹುಚ್ಚನು ಮತ್ತೆ ನಗುತ್ತಾ ತನ್ನ ಹಾಡನ್ನು ಹಾಡಿದನು. ಆದರೆ ಭಕ್ತಕದಂಬವೀಸಲ, ತಮ್ಮ ಅನುಮೋದನವನ್ನು ಸಂಪೂ ರ್ಣವಾಗಿ ತೋರಿಸಲಿಲ್ಲ. ಕೂಡಲೇ ಹುಚ್ಚನು ದೊಡ್ಡದಾಗಿ ಅಳುತ್ತಾ ಮುಂದೆ ಹೊರಟನು. ಅವನ ಹಾಡು ವಿಚಿತ್ರ ವಾಗಿದ್ದಿತು.

" ನನ್ನಂಥಮಂದಿಯ | ನಡುವಿದ್ದುನೋಡುವೆ ||
ನನ್ನ ಕೇಳುವರಿಲ್ಲ | ನಾನೊಬ್ಬರ ಕೇಳುವುದಿಲ್ಲ ||
" ಅಯ್ಯೋ "

೨. ಅಳುವಿನ ನಡುವೊಮ್ಮೆ ನಗುವಿನಬೆಳಕು |
ಕತ್ತಲನಡುವೊಮ್ಮೆ ಹಣತೆಯ ಬೆಳಕು || ಅಯ್ಯೋ ||

೩. ಹಚ್ಚನೆ ಹಸುರನು ಬೆಳ್ಳನೆಬಸವನು |
ನುಣ್ಣಗೆ ತಿಂದಿದೊ ಸಣ್ಣಗೆತೂಗುವನು || ಅಯ್ಯೋ ||

೪. ಅಳದಿರೆತಿಳಿಯದು ನಗುವಿನನಲವು | ಅದಕಾಗಿ
ಅಳುವುದೆ ಕೆಲಸವು ಬೆಳಗಿಂದ ಮೊದಲಾಗಿ
|| ಅಯ್ಯೋ ||

೫. ಬಣ್ಣಾನೆ ಸೀರೆಯುಟ್ಟ ಚೆಂದುಳ್ಳ ಚೆಲುವೆಯು |
ಹಣ್ಣಾದ ಕಿತ್ತಲೆ ಬಣ್ಣದ ಮುದ್ದಿನ ನುಣ್ಣನ
ಕೆನ್ನೆಯ ನೊಮ್ಮೆಯು ಮುದ್ದಿಸಲಿಲ್ಲವಯ್ಯೋ ||

---

## ದ್ವಿತೀಯ ಪರಿಚ್ಛೇದ

---

### ಹುಚ್ಚನ ಹಾಡು ಹೃದಯ ವಿದ್ರಾವಕವಾಗಿದ್ದಿತು.

---

ಹುಚ್ಚನು ಮುಂದುಮುಂದಕ್ಕೆ ಹೋದನು. ಅಲ್ಲಿ ಒಂದು ಛತ್ರ. ಆ ಛತ್ರದ ಬಾಗಿಲಲ್ಲಿ ನಿಂತು, ಹುಚ್ಚನು ತನ್ನ ಅನುಯಾಯಿಗಳಲ್ಲಿ ಒಬ್ಬನನ್ನು ಕರೆದು "ಆಶ್ರಮ ಯಾರದೊ? ಇಲ್ಲಿರುವವರು ಯಾರೋ?" ಎಂದನು. ದಫೆದಾರನ ದರ್ಶನದಿಂದುಂಟಾದ ಭೀತಿಯು ತಪ್ಪಿದ್ದ ಹುಡುಗರಲ್ಲೊಬ್ಬನು "ಇಲ್ಲಿ ಯಾರು ಇರೋದು? ಗೊತ್ತಿಲ್ಲವೆ? ಛತ್ರದ ಪಾರುಪತ್ತೇಗಾರ್ರು ವೆಂಕಟರಮಣಯ್ಯನವರು. ಅವರ ಮಗಳು ಸುಂದರಮ್ಮ." ಎಂದರು. ಆಗ ಆ ಹುಡುಗರ ನಡುವೆ ತಿಳಿದವನೊಬ್ಬನಿದ್ದಿದ್ದ

ಆ ಕೂಡಲೆ ಆ ಹುಚ್ಚನ ಮುಖದಲ್ಲಿ ವ್ಯತ್ಯಾಸವನ್ನು ಚನ್ನಾಗಿಯೂ ಕಾಣಬಹುದಾಗಿದ್ದಿತು.

ಹುಚ್ಚನು ಅರ್ಧ ನಗುತ್ತ, ಅರ್ಧ ಅಳುತ್ತಾ ತನ್ನ ಹಾಡನ್ನು ಹೇಳತೊಡಗಿದನು.

“ ಅಳುತಳುತ ಹೋದರೆ ಯೇನಾಯ್ತು ! |
ನಗುವಿನ ನಡುವಿದ್ದರೇನಾಯ್ತು ! ||
ನಕ್ಕು ಅಳಬೇಕು ! | ಅತ್ತುನಗಬೇಕು ” || ಅಯ್ಯೋ ||

ಎಂದು ಹಾಡಿದನು. ಹುಚ್ಚನ ಕಂಠವು ಸ್ವಭಾವವಾಗಿ ಸರಳವಾದುದು. ಆದರೂ ಈಗ ಸ್ವಲ್ಪ ವರಟಾಗಿದ್ದಿತು. ಹಾಗೆ ವರಟಾಗಿಯೇ ಹಾಡು ಹೇಳುತ್ತಾ ಛತ್ರದೊಳ ನುಗ್ಗಿದನು. ಹುಚ್ಚನ ಹಿಂದೆ ಬಂದ ಹುಡುಗರ ಗದ್ದಲವು ಅಲ್ಲಿದ್ದವರನ್ನು ಈಚೆಗೆ ಬರಮಾಡಿತು. ಎಲ್ಲರೂ ಬಂದರೂ. ಒಬ್ಬಳು ಸುಮಾರು ೧೬ ವರ್ಷದ ಹುಡುಗಿಯೊಬ್ಬಳು ಮಾತ್ರ ಒಂದು ಕಿರುಮನೆಯ ಬಾಗಿಲನ್ನು ಅರ್ಧಸರಿದು, ಹೊಸಲ ಮೇಲೆಯೇ ನೋಡುತ್ತ ನಿಂತಿದ್ದಳು. ಹುಚ್ಚನು ವಿಕಟವಾಗಿ ನಗುತ್ತಾ, ಸುತ್ತಲೂ ನೋಡಿ, ಎಲ್ಲರನ್ನೂ ಬಿಟ್ಟು, ನೇರವಾಗಿ ಆ ಹುಡುಗಿಯ ಬಳಿಗೆ ಹೋಗಿ ನಿಂತನು.

ಹುಚ್ಚನಿಗೆ ಕತ್ತು ಬಿಗಿದುಕೊಂಡು ಮಾತೇ ಹೊರಡಲಿಲ್ಲ- ನೋಡಿದರೆ ಕಣ್ಣಲ್ಲಿ ಎರಡು ತೊಟ್ಟು ನೀರೂ ಇದ್ದಂತಿದ್ದಿತು. ಅಂತೂ ಬಹು ಪ್ರಯಾಸದಿಂದ, ಹೊರಡದ ಶಬ್ದವನ್ನು ಹೊರಡಿಸಿ “ ನನಗೆ ಹಸಿವು, ಅನ್ನಕೊಟ್ಟರೆ ಹಾಡು ಹೇಳುತ್ತೇನೆ ” ಎಂದನು. ಹುಡುಗಿಯೂ ಆ ಶಬ್ದವನ್ನು ಕೇಳಿ ನೆಟ್ಟ ನೋಟದಿಂದ ಹುಚ್ಚನನ್ನು ನೋಡುತ್ತಾ ನಿಂತುಬಿಟ್ಟಳು. ಕಾಲನ್ನು ಕೀಲಿಸಿದಂತಾಗಿ, ಮುಂದೆ ಹೋಗಲಾರದೆ ನಿಂತಿರಲು, ಹುಚ್ಚನು ಮತ್ತೆ ಹಾಡನ್ನೆತ್ತಿ

ದನು. ಈಗಿನ ಹಾಡು ಹಿಂದಿನಂತೆ ವಿಕಟಸ್ವರದಲ್ಲಿರಲಿಲ್ಲ. ಸಣ್ಣ ಧ್ವನಿಯಲ್ಲಿ ಮರ್ಮಾಂತಿಕವಾದ ವೇದನೆಯಿಂದ ಕೂಡಿದ್ದಿತು.

ಅಳುವಿನ ನಡುವೊಮ್ಮೆ ನಗುವಿನ ಬೆಳಕು |
ಕತ್ತಲೆ ನಡುವೊಮ್ಮೆ ಹಣತೆಯ ಬೆಳಕು || ಅಯ್ಯೋ ||

ಹುಡುಗಿಯ ಯೋಚನೆಯು ತೀರಿತು. ಅಗಿಯುತ್ತಿದ್ದ ಅಡಕೆಲೆಯನ್ನು ಹಾಗೆಯೇ ದವಡೆಯಲ್ಲಿಟ್ಟುಕೊಂಡು, ಬಾಗಿಲನ್ನು ಹೊರಗೆಳೆದು ಕೊಂಡು ಹೊರಟು ಹೋದಳು. ಅವಳ ನಡಗೆಯನ್ನು ನೋಡಿದರೆ, ತನಗೆ ಬೇಕಾದವರು ಯಾರೋ ತನ್ನನ್ನು ನೋಡುತ್ತಿರುವರೆಂಬ ನಂಬುಗೆಯಿಂದ ನಡೆವಂತಿದ್ದಿತು. ನಡೆಗೆಯಲ್ಲಿ ಚಾಂಚಲ್ಯವಿಲ್ಲ. ಸ್ಥೈರ್ಯವಿದೆ. ಹೋಗಲಿಷ್ಟವಿಲ್ಲದೆ ಇಲ್ಲ ಆದರೆ ಜಾಗ್ರತೆಯ ನಡೆಯಲ್ಲ ತನಗಿಷ್ಟವಿರುವಾಗ ಅರೆ ನಿದ್ದೆಯಲ್ಲಿ ತೂಗಾಡದೆ ನಡೆವ ನಡೆ ಅಂತೂ ಒಟ್ಟಿನಲ್ಲಿ ಹುಡುಗಿಯ ಸರ್ವಾಂಗವೂ ಗಾಂಭೀರ್ಯವನ್ನು ತೋರಿಸುತಿದ್ದಿತು. ಆದರೆ ಅದು ಸ್ವಾಭಾವಿಕವಾದುದಲ್ಲ; ತನ್ನ ಹೃದಯದ ಭಾವವನ್ನು ಹೊರಗೆ ಬಿಟ್ಟು ಕೊಡಲಾರದ ಲೋಭದಂತಹ ಗಾಂಭೀರ್ಯ.

ಸ್ವಲ್ಪ ಹೊತ್ತಿನೊಳಗೆ ಹುಡುಗಿಯು ಬಂದಳು. ಮೊಸರನ್ನವನ್ನು ಕಲೆಸಿ, ಅದರ ಮೇಲೆ ಒಂದು ಚೂರು ಉಪ್ಪಿನಕಾಯಿಯನ್ನಿಟ್ಟು ತಂದಿದ್ದಾಳೆ. ಕಣ್ಣಿನ ಕೊನೆಯ ಒಂದು ತೊಟ್ಟು ನೀರು ಹಾಗೆಯೇ ನಿಂತಿದೆ. ಬಿಗಿದ ಕತ್ತಿನಿಂದ ಉಗುಳು ನುಂಗಿಕೊಳ್ಳುತ್ತಾ "ಎಲ್ಲಿ ತಿನ್ನುವೆ ?" ಎಂದು ಕೇಳಿದಳು. ಹುಡುಗಿಯು ನಡುವಿಗೆ ಬಿಗಿದುಕೊಂಡಿರುವ ಸೆರಗೂ, ಅವಳ ಮುಖಮುದ್ರೆಯೂ ಈಷದ್ದುಃಖದ್ಯೋತಕವಾದ ಅವಳ ನೋಟವೂ ಹುಚ್ಚನನ್ನು ಹಗ್ಗದಿಂದ ಕಟ್ಟಿದಂತೆ ಮಾಡಿಬಿಟ್ಟವು. ಇದುವರೆಗೂ ಮುಖದ ಮೇಲಿರದ ಒಂದು ಭಾವವು ಬಂದು, "ಮೂರು ದಿನದಿಂದ ಅನ್ನವಿಲ್ಲ.

ಈಗ ಸಿಕ್ಕಿತು. ಎಲ್ಲಾದರೂ ತಿನ್ನೋದು." ಎಂದು ಅನ್ನವನ್ನು ಊಸಿಕೊಂಡನು. ಎರಡು ಕೈಗಳಲ್ಲಿ ಅದನ್ನು ಹಿಡಿದುಕೊಂಡು ಬಾಯಿಂದ ಸ್ವಲ್ಪ ಸವಿದು "ಆಹಾ! ಸುಂದರ! ಸುಂದರ! ಬಹು ಸೊಗಸಾಗಿದೆ. ನಿನ್ನಹಾಗೆ ಇದೆ" ಎಂದು ವಿಕಟವಾಗಿ ನಕ್ಕು ಬಿಟ್ಟು ಕೂಡಲೆ ಕುಳಿತುಕೊಂಡು ದೊಡ್ಡದಾಗಿ ಬಿಕ್ಕಿಬಿಕ್ಕಿ ಅತ್ತು ಬಿಟ್ಟನು. ಕೊನೆಗೆ ಆ ಹುಡುಗಿಯ ಮುಖವನ್ನು ವಕ್ರವಾಗಿ ವಿಚಿತ್ರವಾದ ದೃಷ್ಟಿಯಿಂದ ನೋಡುತ್ತಾ ಆ ಅನ್ನವನ್ನು ಮತ್ತೊಮ್ಮೆ ಸವಿಯುತ್ತಾ "ಆ! ಬಲು ಸುಂದರ! ಅನ್ನವನ್ನು ಐದು ಘಂಟೆಗೆ ಕೆರೆಯ ಹತ್ತಿರ ನಿನ್ನ ಹೆಸರು ಹೇಳಿಕೊಂಡು ತಿನ್ನು ವೆನು" ಎಂದು ಮೇಲಕ್ಕೆದ್ದನು.

ಹತ್ತಿರಿದ್ದವರಲ್ಲಿ ಯಾರೋ "ನಿತ್ಯ ಅನ್ನಕೊಡುತ್ತಾಳೆ. ಅವಳನ್ನು ಮದುವೆಮಾಡಿಕೊ." ಎಂದರು. ಹುಚ್ಚನು ಅದಕ್ಕೆ ಅಳುತ್ತಾ "ನಾನೇ ಹೆಂಡತಿ ಅವಳೇ ಮಾಡಿಕೊಳ್ಳಲಿ" ಎಂದನು. ಅರ್ಥವಿಲ್ಲದ ಮಾತೂ ಹುಡುಗಿಗೆ ಅರ್ಥವಾಗುವಂತೆ ಕಂಡಿತು. ಅವಳು ಅಲ್ಲಿ ನಿಲ್ಲದೆ ಹೊರಟು ಹೋದಳು. ಬಾಗಿಲು ದಪ್ಪಸದ್ದಿ ನೊಡನೆ ಮುಚ್ಚಿಕೊಂಡಿತು. ಯಾರಾದರೂ ಬಾಗಿಲ ಸಂದಿ ಯಿಂದ ನೋಡಿದ್ದರೆ, ಹುಡುಗಿಯು ಮೊಗವಡಿಯಾಗಿ ಹಾಸಿಗೆಯ ಮೇಲೆ ಬಿದ್ದುಕೊಂಡು ಅಳುತ್ತಿದ್ದುದನ್ನು ನೋಡಬಹುದಾಗಿದ್ದಿತು.

---

## ತೃತೀಯ ಪರಿಚ್ಛೇದ

---

ಸಾಯಂಕಾಲ ನಾಲ್ಕುಗಂಟೆ. ಹುಚ್ಚನು ಎಂದಿನಂತೆ ಹಾಡುವುದಿಲ್ಲ. ಸುಮ್ಮನೆ ಕುಳಿತಿದ್ದವನು ಇದ್ದಕ್ಕಿದ್ದ ಹಾಗೆಯೇ ಸಣ್ಣನಗು ನಕ್ಕು, ಹಾಗೆಯೇ ನಿಟ್ಟುಸಿರು ಬಿಟ್ಟು ಕುಳ್ಳಿರುವನು. ಅವನ ಹಿಂದಿನ ಚರ್ಯೆಯಿಂದ ಹುಚ್ಚನೆಂದು ಬಂದು ಅವನನ್ನು

ಮುತ್ತಿದ್ದ ಹುಡುಗರು ಇಂದು ಅವರೇನುಮಾಡಿದರೂ ಸುಮ್ಮನಿ ರುವುದನ್ನು ಕಂಡು ಒಬ್ಬೊಬ್ಬರಾಗಿ ಹೊರಟುಹೋದರು. ಹುಚ್ಚನು ಕುಳಿತಿದ್ದ ಹುಣಸೇಮರವು ತಾಳಿಂದ ತುದಿಯವರೆಗೂ ಹೂ ಬಿಟ್ಟದ್ದಿತು. ಒಂದೊಂದು ಸಲ ಗಾಳಿಯು ಬಂದಾಗಲೂ ಆ ಮರವು ಸಣ್ಣಗೆ ಪುಷ್ಪವೃಷ್ಟಿಯನ್ನು ಮಾಡುವುದು. ನೆರಳು ಹುಚ್ಚ ನಿದ್ದ ಸ್ಥಳದಿಂದ ಹಿಂದಕ್ಕೆ ಹೊರಟುಹೋಗಿದೆ. ಬಿಸಿಲಿಗೆ ಸಿಕ್ಕಿ ಮೈಯ್ಯಲ್ಲಿ ಬೆವರು ಧಾರಾಳವಾಗಿ ಸೋರುತ್ತಿದೆ. ಆದರೂ ಹುಚ್ಚನಿಗೆ ಮೈಮೇಲೆ ಪ್ರಜ್ಞೆಯಿಲ್ಲ. ಅನ್ನದಗಂಟು ಮಗ್ಗುಲ ಲ್ಲಿದೆ. ಅವನಿಗೆ ನಿದ್ರೆಯಿಲ್ಲ. ಕಣ್ಣು ತೆರೆದಿವೆ. ಮೈಕವಿಲ್ಲ. ಚೆನ್ನಾಗಿ ಎಚ್ಚರವಿದ್ದು ರೆಪ್ಪೆ ಬಡಿಯುತ್ತಿದ್ದಾನೆ. ಆದರೂ ಹೊರ ಗಿನ ಜ್ಞಾನವಿಲ್ಲ.

ಇದ್ದ ಹಾಗೆಯೇ ಒಂದು ಕೆಂಜಗವು ಮೇಲಿಂದ ಗಾಳಿಗುದುರಿ ಹುಚ್ಚನೆಂಬ ಅಭಿಮಾನವಿಲ್ಲದೆ ಬಲವಾಗಿ ಕಚ್ಚಿಬಿಟ್ಟಿತು. ಹುಚ್ಚನು ಭಾವನಾತರಂಗಿಣಿಯಲ್ಲಿ ಈಜುತ್ತಿದ್ದವನು ಈಚೆಗೆ ಬರಬೇಕಾ ಯಿತು. ಬಂದು ನೋಡಿದರೆ ಆಗಲೇ ೫ ಗಂಟೆಯಾಗಿರಬಹುದು. ಬಿಂಬವು ಪಶ್ಚಿಮ ಕ್ಷಿತಿಜದ ಹತ್ತಿರ ಹತ್ತಿರ ಬಂದು ಸೂರ್ಯನ ಪ್ರತಾಪವು ಕುಗ್ಗಿದೆ. ಬಿಂಬವನ್ನು ಸ್ವಲ್ಪ ಕಷ್ಟಪಟ್ಟರೆ ಕಣ್ಣಿನಿಂದಲೇ ನೋಡಬಹುದು. ಆಗಲೇ ಕೆಂಪುಬಣ್ಣವು ಹುಟ್ಟಿ ಪಶ್ಚಿಮ ದಿಗಂತವನ್ನು ವ್ಯಾಪಿಸುತ್ತಿದೆ. ಸಂಧ್ಯಾ ಸೂರ್ಯನ ಕಿರಣರಾಶಿಯು ಮೇಘ ಮಂಡಲದ ಮೇಲೆ ವಿಚಿತ್ರವಾದ ಬಣ್ಣಗ ಳಿಂದ ಚಿತ್ರಿಸುತ್ತಿದೆ. ಸುತ್ತಲೂ ಮರಗಳೆಲ್ಲ ಚಿನ್ನದ ಮುಲಾಮು ಆದಂತೆ ಶೋಭಿಸುತ್ತಿವೆ. "ಇದಿಷ್ಟು ನೋಡದೆ ಕುಳಿತಿದ್ದ ನಾನು ಹುಚ್ಚನಲ್ಲದೆ ಮತ್ತೇನು?" ಎಂದುಕೊಂಡು ಹುಚ್ಚನಲ್ಲಿಂ ದೆದ್ದು ಕೆರೆಯ ಕಡೆಗೆ ಹೋದನು. ಇವನಲ್ಲಿಗೆ ಹೋಗುವುದ ರೊಳಗಾಗಿ ಊರಿನ ಹೆಂಗಸರು ಕೆರೆಯಿಂದ ಹಿಂತಿರುಗಿದ್ದುದನ್ನು ಕಂಡು ಹುಚ್ಚನಿಗೆ ದಿಗಿಲಾಯ್ತು. ಅವಳೂ ಬಂದು ಹೊರಟು ಹೋಗಿದ್ದರೆ ?

ಹುಚ್ಚನು ಹುಚ್ಚಾಗಿ ಕಾಣಿಸಿಕೊಳ್ಳುವುದೂ ಬೇಕಾಗಿದ್ದಿತು. ಹೆಂಗುಸರೆಲ್ಲರೂ ಹೊತ್ತಿರುವ ನೀರಿನ ಕೊಡದ ಭಾರವನ್ನೂ ಲಕ್ಷಿಸದೆ ತನ್ನನ್ನು ನೋಡಲು ನಿಂತುಕೊಂಡರೆಂದು ಕಂಡು, ಹುಚ್ಚನು ಒಂದು ದೊಡ್ಡ ಕಲ್ಲು ತೆಗೆದುಕೊಂಡು ವಿಕಾರವಾಗಿ ಕೂಗಿಕೊಳ್ಳುತ್ತ, ದಾಪುಗಾಲು ಹಾಕಿಕೊಂಡು ನಡೆಯಲು ಮೊದಲು ಮಾಡಿದನು. ಕೂಡಲೇ ಹೆಂಗಸರು ಏನೋ ಹೊಸ ವಿಪತ್ತು ಎಂದು ಹೇಳದೆ ಕೇಳದೆ ಹೊರಟುಹೋದರು. ತನ್ನ ಉಪಾಯಕ್ಕೆ ತಾನೇ ನಗುತ್ತಾ ಹುಚ್ಚನು ಕೆರೆಗೆ ಹೋದನು.

ಸಾಯಂಕಾಲ ೬ ಗಂಟೆಯಾಗಿ ಹೋಗಿದೆ. ಹುಡುಗಿಯು ಬರುವಳೆಂಬ ನಂಬಿಕೆಯು ಹುಚ್ಚನನ್ನು ಅಲ್ಲಿಯೇ ನಿಲ್ಲಿಸಿಕೊಂಡಿದೆ. ಹುಚ್ಚನು ಈಗ ಹುಚ್ಚಾಗಿಲ್ಲ. ಶಾಂತನಾಗಿದ್ದಾನೆ. ಇದುವರೆಗೂ ಮೊಗದ ಮೇಲೆ ಮಾತ್ರ ಕಾಣುತ್ತಿದ್ದ ಹುಚ್ಚು ಹೋಗಿ ಒಳಗಿನ ಕ್ಷೋಭವು ಒಡೆದು ಕಾಣುತ್ತಿದೆ. ಊರ ದಾರಿಯನ್ನೇ ಎದುರು ನೋಡುತ್ತ ಕುಳಿತಿದ್ದಾನೆ. ಒಮ್ಮೊಮ್ಮೆ ನಿರಾಶೆಯು ದರ್ಪದಿಂದ ಆಹತನಾದರೂ, ಮತ್ತೆ, ಸಪ್ರತ್ಯಯನಾಗಿ ಕಾದು ಕುಳಿತಿದ್ದಾನೆ. ಸಂಜೆಯೂ ಆಯಿತು. ಸೂರ್ಯಬಿಂಬವು ಅಸ್ತವಾಯಿತು. ಹಕ್ಕಿಯ ಗದ್ದಲವು ತಾನೇತಾನಾಯಿತು. ಇನ್ನೂ ಹುಡುಗಿಯು ಬರಲಿಲ್ಲ.

---

## ಚತುರ್ಥ ಪರಿಚ್ಛೇದ

---

ಸಂಜೆಯ ಮುಸುಕು ಹಬ್ಬುತ್ತಾ ಬಂತು. ದೂರಕ್ಕೆ ಕಣ್ಣು ಕಾಣಿಸದೆ ಹೋಯಿತು. ಹುಚ್ಚನು ನಿರಾಶೆಯಿಂದ ಹುಚ್ಚಾಗಿ ಒದ್ದಾಡುತ್ತಾ ಇದ್ದಾನೆ. ಕೊನೆಗೆ ಮರದಡಿಯಲ್ಲಿ ಕಾಲಿನಸಪ್ಪು. ಸೀರೆಯ ನೆರಿಯ ನಿರಿಮುರಿ. ಯಾರೋ ಹೆಂಗಸು ಬರುವಂತಿದೆ ಅವಳೇನೋ ?

ಹುಚ್ಚನ ಕಣ್ಣು ಅಂಗೈಯಗಲವಾಗಿ ನೋಡಿತು. ಒಂದೇ ಸಲಕ್ಕೆ ಮೇಲೆ ಮೇಲೆ ಕವಿದು ಬರುತ್ತಿದ್ದ ಆ ಕಾವಳದಲ್ಲಿ, ಎದುರಿರುವ ಸ್ಥಳವನ್ನೆಲ್ಲಾ ಒಮ್ಮೆಗೇ ಹುಡುಕಿಬಿಟ್ಟಿತು. ಅವಳೇಯೊ? ಅವಳೇ ಎನ್ನುವಂತಿದೆ! ಹೌದು! ಅವಳೇ! ಹುಚ್ಚನ ಹೃದಯವು ಒಟ್ಟಿಗೆದ್ದು ಬಾಯಿಗೆ ಬಂದುಬಿಟ್ಟಂತಾಗಿದೆ. ಆ ಸಾಯಂಕಾಲದಲ್ಲೂ ಮೈಯಲ್ಲಾ ಬೆವರಿ ಹೋಗಿದೆ. ಏನೋ ಆಗಿ ಸುಮ್ಮನೆ ನಿಂತುಬಿಟ್ಟಿದ್ದಾನೆ. ಹುಡುಗಿಯೂ ಹಿಂದೆ ಮುಂದೆ ನೋಡಿಕೊಳ್ಳುತ್ತಾ, ಕಣ್ಣೀರು ವರಿಸಿಕೊಳ್ಳುತ್ತಾ ಒಂದೊಂದು ಹೆಜ್ಜೆಯಾಗಿ ಮುಂದುವರಿಯುತ್ತಿದ್ದಾಳೆ. ಕಂಕುಳಲ್ಲಿರುವ ಬರಿಯ ಬಿಂದಿಗೆಯೂ ಭಾರವಾದಂತೆ ಕಾಣುತ್ತಿದೆ. ನಿಲ್ಲುವುದಕ್ಕೆ ಕೈಲಾಗದು. ಮುಂದೆ ಹೋಗದಿರಲಾರಳು. ಅಂತೂ ಪರಪ್ರೇಷಿತೆಯಂತೆ, ಭೂತಾವಿಷ್ಟೆಯಂತೆ ಮುಂದುವರಿಯುತ್ತಿದ್ದಾಳೆ. ಕೊನೆಗೆ, ಇನ್ನು ಹತ್ತು ಹಜ್ಜೆ ಇದೆ. ಅಲ್ಲಿ ನಿಂತಿದ್ದವನನ್ನು ನೋಡಿದಳು. ತಡೆಯುವುದು ಅಸಾಧ್ಯವಾಗಿ ದುಃಖವು ಬಂದುಬಿಟ್ಟಿತು. ಹುಡುಗಿಯು ದೊಡ್ಡದಾಗಿ ಅತ್ತುಬಿಟ್ಟಳು. ಕೈಯ್ಯ ಕೊಡವು ಬಿದ್ದು ಹೋಗಿ, ಸಮೀಪದಲ್ಲಿದ್ದ ಸೋಪಾನ ಪಂಕ್ತಿಯ ಮೇಲುರುಳಿಕೊಂಡು ಹೋಗಿ ಕೆರೆಗೆ ಬಿದ್ದುಬಿಟ್ಟಿತು. ಹುಚ್ಚನೂ ಕಣ್ಣೀರು ಕರೆಯುತ್ತಿದ್ದನು. ಅವನೂ ಅದನ್ನು ನೋಡಲಿಲ್ಲ. ಅಥವಾ ನೋಡಿದರೂ ಗಮನಿಸಲಿಲ್ಲ. ಮರ್ಮಾಂತಿಕವಾದ ವೇದನೆಯಿಂದ ಅಳುತ್ತಿರುವ ಈ ಪ್ರಾಣಿಗಳು ಆ ಬಿಂದಿಗೆಯನ್ನು ಗಮನಿಸುವುದೂ ಉಂಟೇನು?

ಕೊನೆಗೆ ಸುಂದರಿಯೇ ಮೊದಲು ಮಾತನಾಡಿದಳು. ಇಬ್ಬರೂ ಒಬ್ಬರ ಮುಂದೆ ಒಬ್ಬರು ಕುಳಿತಿದ್ದಾರೆ. ಅತ್ತು ಅತ್ತು ಕಣ್ಣು ಕೆಂಪಗೆ ಆಗಿಹೋಗಿದೆ. ಮೂಗಿನಲ್ಲಿ ಸಿಂಬಳವು ಸುರಿಯುತ್ತದೆ. ಇಬ್ಬರೂ ನೀರವ. ಹೀಗಿದ್ದಾಗ ಹುಡುಗಿಯು ಮಾತನಾಡಿದಳು. "ರಾಮೂ! ಇದೇಕೆ ಹೀಗಾಗಿಬಿಟ್ಟೆ? ನಿನಗಾಗಿ......." ಹುಡುಗಿ

ಯು ಸುಮ್ಮನಾದಳು ಮತ್ತೆ "ರಾಮೂ! ನೋಡಿ ಬಹಳ ದಿನ ವಾಯಿತು, ನೋಡಬೇಕೆಂದು ಇದ್ದೆ. ನೋಡಿದುದಾಯಿತು. ಇದೇ ಕೊನೆ. ಇನ್ನು ಒಬ್ಬರನ್ನೊಬ್ಬರು ಮರೆತುಬಿಡೋಣ" ಎಂದಳು ರಾಮುವಿಗೆ ಮತ್ತೆ ಮಿತಿಮೀರಿದ ದುಃಖವು ಬಂದಿತು. ಹೇಗೆ ಹೇಗೋ ಸಂವರಣ ಮಾಡಿಕೊಂಡು "ಇದಕ್ಕಾಗಿಯೇ ನಾನು ನಿನ್ನನ್ನು ಹುಡುಕಿ ಬಂದುದು?" ಎಂದನು. ಹುಡುಗಿಯು ಕೂಡಲೇ ಧೀರಳಾಗಿ ಮನಸ್ಸಿನ ಆವೇಗವನ್ನು ದೂರವಿಟ್ಟು, ಈಷತ್ಕ್ರೋಧದಿಂದ "ತಪ್ಪು ನನ್ನದಲ್ಲ" ಎಂದು, ಹಾಗೆಯೇ ಮತ್ತೆ ಶಾಂತಳಾಗಿ "ಕಳೆದುದನ್ನು ಕೆದಕಿ ಆಗಬೇಕಾದುದೇನು? ನಾವಿಬ್ಬರೂ ಲಕ್ಷಿಸಬೇಕಾದುದು ಧರ್ಮ, ನಾವಿಬ್ಬರೂ ಎದುರಿಗಿರುವುದರಿಂದ ಅದು ಲೋಪವಾಗಬಹುದಾದ ಸಂಭವವುಂಟು. ಆದುದರಿಂದ ನಿಲ್ಲಬೇಡ ಹೊರಟುಹೋಗು. ನಾನೂ ಹೋಗುವೆನು" ಎಂದಳು. ರಾಮುವೂ ನಿರಾಶಾಹತನಾಗಿ "ಸುಂದರ! ಹೊರಟು ಹೋಗಬೇಡ. ಧರ್ಮಲೋಪವಾಗದಂತೆ ಜಾಗ್ರತರಾಗಿರೋಣ. ಒಂದು ಘಳಿಗೆ ಕುಳಿತುಕೊ. ಒಂದು ಘಳಿಗೆ ಕುಳಿತುಕೊ" ಎಂದು ಅಂಗಲಾಚಿ ಬೇಡಿಕೊಂಡನು ಹುಡುಗಿಯ ವಿವೇಕವು ನಿಲ್ಲಲಿಲ್ಲ. ಕುಳಿತುಕೊಂಡಳು. ರಾಮು ಮತ್ತೆ ಹೃದಯದಲ್ಲಿ ಕಾಳ್ಕಿಚ್ಚು ಬೇಯುತ್ತಿದ್ದು, ಅದು ವ್ಯರ್ಥವಾಯಿತೆಂಬ ನಂಬಿಕೆಯು ಹುಟ್ಟಿ, ಕುದಿಯುತ್ತಿರುವವರಿಗೆ ಮಾತ್ರವೇ ಸಾಧ್ಯವಾದ ಒಂದು ವಿಚಿತ್ರ ದೈನ್ಯದಿಂದ ಹೇಳಿಕೊಂಡನು. "ಸುಂದರ! ತಪ್ಪು ನನ್ನದೇ ಆಗಲಿ. ಆದರೂ ತಪ್ಪಿತಸ್ಥನೆಂದು ದೂರವಾಡುವೆಯಾ? ಸುಂದರ! ನಿನ್ನ ಮನಸ್ಸು ಇತರರ ದುಃಖವನ್ನು ಗಣಿಸದಷ್ಟು ನಿಷ್ಠುರವಾಯ್ತೆ? ನನ್ನನ್ನು ಕಂಡು ಇಂದಿಗೆ ಐದು ವರುಷವಾಯಿತು. ತಪ್ಪು ನನ್ನದೇ ಆಗಲಿ! ಒಂದು ಸಲವಾದರೂ ಈ ಪಾಪಿಯು ನಿನ್ನ ಮನಸ್ಸಿನಲ್ಲಿ ಎಡೆಯನ್ನು ಹೊಂದಿರಲಿಲ್ಲವೆ? ನೀನು ನನ್ನನ್ನು ಪ್ರೇಮಾರ್ದ್ರವಾದ ದೃಷ್ಟಿಯಿಂದ ನೋಡಿರಲಿಲ್ಲವೆ? ಅದಕ್ಕಾದರೂ ಈದಿವಸ ಮತ್ತೊಮ್ಮೆ ನನ್ನೊಡನೆ ಮಾತನಾಡು.

ದೇವಿ! ನಿನ್ನನ್ನು ಹಗಲಿರುಳೂ ಧ್ಯಾನಿಸುತ್ತಿರುವುದು ಸುಳ್ಳೆಂದು ನಿನಗೆ ತೋರಿದರೆ ಈ ಹೃದಯವನ್ನು ಬಗಿದು ನೋಡು. ಅಲ್ಲಿ ನಿನ್ನ ಸುಂದರ ತಮ ಮೂರ್ತಿಯು ಪ್ರಸ್ಥಾಪಿತವಾಗಿಲ್ಲದಿದ್ದರೆ ನನ್ನನ್ನು ನಂಬಬೇಡ. ಲೋಕದಲ್ಲಿ ನಿನ್ನ ವಿನಾ ನನಗೆ ಮತ್ತೊಂದೂ ಇಲ್ಲ. ಸುಂದರ! ನೀನೂ ಕೈಬಿಡುವೆಯಾ? ಹಾಗಿದ್ದರೆ ಹೇಳು. ಇನ್ನೊಂದು ಘಳಿಗೆ ಕುಳಿತುಕೋ ನಿನ್ನನ್ನು ನೋಡುನೋಡುತ್ತಾ, ಈ ತುಂಬಿರುವ ಕೆರೆಯಲ್ಲಾದರೂ ಬಿದ್ದು ಪ್ರಾಣವನ್ನು ಬಿಟ್ಟು ಬಿಡುವೆನು." ಎಂದೆದ್ದನು. ಹುಡುಗಿಯ ಮನಸ್ಸು ಸ್ವಲ್ಪ ವ್ಯತ್ಯಸ್ತವಾಯಿತು. ಕೂಡಲೇ ಎದ್ದು ನಿಂತು "ರಾಮು! ನಾಳೆಯಲ್ಲಾದರೂ ನೋಡೋಣ. ಇಂದು ಬೇಡ. ಹೊತ್ತಾಯಿತು. ನಾನು ಹೋಗುವೆನು" ಎಂದಳು ಕೂಡಲೇ ರಾಮುವು "ನಾಳೆ ಛತ್ರದ ಮಗ್ಗುಲಲ್ಲಿರುವ ತೋಪಿನಲ್ಲಿ ಒಂದು ಗುಡಾರವಿರುವುದು. ಅಲ್ಲಿಗೆ ಬರುವೆಯಾ?" ಎಂದನು. ಸುಂದರಿಯು "ಆಗಲಿ. ರಾತ್ರಿ ಹನ್ನೊಂದು ಘಂಟೆಯಮೇಲೆ ಕಾಯುತ್ತ್ಕೊಂಡಿರು" ಎಂದು ಹೇಳಿ ಹೊರಟುಹೋದಳು. ಯುವಕನಿಗೆ ಅತೃಪ್ತಿಯಲ್ಲಿ ತೃಪ್ತಿ. ಯುವತಿಗೆ ಭೀತಿಯಲ್ಲಿ ಧೈರ್ಯ. ಆದರೂ ಯಾವುದೋ ಪ್ರಬಲದುಃಖವು ಬೇರೆ ಭಾವಗಳನ್ನೆಲ್ಲ ಮುಳುಗಿಸಿ ಬಿಟ್ಟಿದ್ದಿತು.



# ಎರಡನೆಯ ಭಾಗ



## ಜೂಜಿನ ದೊಂಬಿ

---

### ಪ್ರಥಮ ಪರಿಚ್ಛೇದ

-

ಛತ್ರದ ಪಾರುಪತ್ತೆಗಾರ ವೆಂಕಟರಮಣಯ್ಯನು ಯಾರನ್ನು ಕಂಡರೂ ಲಕ್ಷಿಸುವವನಲ್ಲ. ಆ ಊರಿನಲ್ಲಿ ತನಗಿಂತ ಮಿಗಿಲಾದ ಅಧಿಕಾರಸ್ಥರೇ ಇಲ್ಲವೆಂದು ಆತನ ನಂಬಿಕೆ. ಅಧಿಕಾರ ಗೌರವವು ಕಡಮೆಯಾಗಿದ್ದರೂ ಆತನ ಲೇವಾದೇವಿಯ ದರ್ಪವು ಒಳ್ಳೆ ಬಲ ವಾಗಿದ್ದಿತು. ಹಳ್ಳಿಯ ಲೇವಾದೇವಿಗೆ ತಕ್ಕಷ್ಟು ದಣವು ಆತನ ಲ್ಲಿದ್ದಿತು.

ಆತನಿಗೂ ನಡುನಡುವೆ ಕಷ್ಟ ಬರುತ್ತಿದ್ದಿತು. ಆಕಸ್ಮಾತ್ತಾಗಿ ಯಾರಾದರೊಬ್ಬ ಅಧಿಕಾರಿಗಳು, ವೆಂಕಟರಮಣಯ್ಯನು ದೊಡ್ಡ ವರೆನ್ನುವ ಅಧಿಕಾರಿಗಳು, ಪ್ರಾಪ್ತರಾಗುವರು. ಅದುವರೆಗೂ ಬಂದ ಹಾದಿಹೋಕರಿಗೆ ಆಗಬೇಕಾಗಿದ್ದ ಉಪಚಾರಗಳ ಒಟ್ಟಿನಲ್ಲಿ ಅರ್ಧವನ್ನು ಅವರಿಗೆ ಒಪ್ಪಿಸಿಬಿಡುವನು. ಅಧಿಕಾರಿಗಳೂ ತಮ್ಮಂ ತೆಯೇ ಇತರರಿಗೂ ನಡೆಯುವುದೆಂಬ ನಂಬಿಕೆಯಿಂದ ("ಆತ್ಮವ ತ್ಸರ್ವಭೂತಾನಿ ಯಃ ಪಶ್ಯತಿ ಸ ಪಶ್ಯತಿ" ಎಂಬ ಭಗವದ್ವಾಕ್ಯವು ಇಲ್ಲಿ ಮಾತ್ರ ಅನ್ವಯಿಸುತ್ತಿತ್ತು) ಹೊರಟು ಹೋಗುವರು. ಮಳೆ ಹುಯ್ದು ಉತ್ತರಕ್ಷಣವಲ್ಲಿ ಇಕ್ಕೆಲವನ್ನೂ ಮೀರಿ ಹರಿದು, ಇನ್ನೊಂದು ಕೊಂಚ ಹೊತ್ತಿನಲ್ಲಿಯೇ ಬತ್ತಿಹೋಗುವ ಗಿರಿನದಿ

ಯಂತೆ ಅಧಿಕಾರಸ್ಥರ ಮುಖದರ್ಶನವಾದೊಡನೆಯೇ ಉಕ್ಕಿ ಹರಿದು ಬರುತ್ತಿದ್ದ ಉಪಚಾರ ತರಂಗಿಣಿಯು, ಅವರು ಹಿಂತಿರುಗಿ ದೊಡನೆಯೇ ಬತ್ತಿಹೋಗುತಿದ್ದಿತು. ಅದಷ್ಟಾದರೂ ಆಗಲು ವೆಂಕಟ ರಮಣಯ್ಯನಿಗೆ ಅಂತರಂಗದಲ್ಲಿದ್ದ ಒಂದು ದೊಡ್ಡ ಭೀತಿಯೇ ಕಾರಣ ಯಾವನಾದರೂ ಪಾಪಭೀತನಾದ ಅಧಿಕಾರಿಯು ಬಂದಾ ನೆಂಬ ದಿಗಿಲು. ಆವರ ಆರ್ಧ ಧೈರ್ಯ. ಈಗಿನ ಕಾಲದಲ್ಲಿ ಅಂತಹವರು ಅಧಿಕಾರವನ್ನು ಹುಡುಕಿಕೊಂಡು ಹೋಗುವುದಿಲ್ಲ ವೆಂದು

ಇವನ ಅಳಿಯ ಕೃಷ್ಣಮೂರ್ತಿಯು ಆ ಮಾವನಿಗೆ ಕಡಮೆ ಯಾದವನಲ್ಲ. ಆ ಹಳ್ಳಿಯಲ್ಲಿ ಕುಳಿತುಕೊಂಡು ಸುಮ್ಮನಿರಲಾಗ ದೆಂದು ಅಲ್ಲಿ "ಕ್ಲಬ್" ಒಂದನ್ನು ಏರ್ಪಡಿಸಿರುವನು. ಅಲ್ಲಿಗೆ "ನೆಂಬರ್‌ದಾರ್" ಆಗಲು, (ಅಲ್ಲಿಯವರು ಹೇಳುವುದು ಹಾಗೆ) ದುಡ್ಡುಕಾಸು ಚನ್ನಾಗಿ ಕೈಯ್ಯಲ್ಲಿರಬೇಕೆಂಬುದೊಂದೇ ನಿಯಮ. ಜಾತಿ, ಕುಲ, ಗೋತ್ರಗಳ ತಾರತಮ್ಯವಲ್ಲಿಲ್ಲ. ಮೇಲುಕೀಳೆಂಬ ಭೇದವಿಲ್ಲ. ಎಲ್ಲರೂ ಒಂದೇ. ಜನವಾರ್ತೆಯನ್ನು ನಂಬು ವುದಾದರೆ ಅಲ್ಲಿ ಬೆಳಗಿನಿಂದ ಸಂಜೆವರೆಗೂ ಜೂಜು ನಡೆಯುತ್ತ ದೆಂದು ಹೇಳಬೇಕು. ಅಲ್ಲಿನವರನ್ನೇ ಕೇಳಿದರೆ, ಅವರು "ತಮಾಷೆ" ಯಾಗಿ ಕಾಲಹರಣಮಾಡುವರು ಅಷ್ಟೆ. ಆದರೆ ಈ "ತಮಾಷೆ" ಕಾಲಹರಣವು ಎಷ್ಟೋ ಜನರ ಮನೆ ಮುಳಿಗಿಸಿಬಿಟ್ಟಿದ್ದಿತು.

ಆ ಕ್ಲಬ್ಬಿನವರಲ್ಲಿ ಮತ್ತೊಂದು ಸ;ಗುಣವಿದ್ದಿತು. ಯಾವು ದೊಂದು ಸಭ್ಯ ಮಂಡಲಿಯವರಿಂದಲೂ ತಮಗೆ ಯಾವ ಬಿರುದೂ ಲಭ್ಯವಾಗುವುದಿಲ್ಲವೆಂದು ತಿಳಿದು, ಅಥವಾ ತಮಗೆ ಬಿರುದುಕೊಡುವ ಸೌಭಾಗ್ಯವು ಯಾವುದೂ ಸಭ್ಯಮಂಡಲಿಗಿಲ್ಲವೆಂದು ತಿಳಿದು, ಅವರು ತಮ್ಮ ತಮ್ಮಲ್ಲಿಯೇ ಬಿರುದಾವಳಿಗಳನ್ನು ಹಂಚಿಕೊಂಡಿದ್ದರು. ಸರ್ವಜ್ಞ ಕೃಷ್ಣಮೂರ್ತಿಗಳು ಪ್ರೆಸಿಡೆಂಟರು (ಇವರಿಗೆ ಎಂಟು ಸಲ ಸ್ಕೂಲ್ ಫೈನಲ್ ಹಾಲ್ ಟಿಕೆಟ್ ಬಂದಿದ್ದಿತಂತೆ) ಆಫೀಸರ್

ರಾಮರಾಯರು ವೈಸ್ ಪ್ರೆಸಿಡೆಂಟರು. (ಇವರಿಗೆ ಸುಮಾರು ೫೦ ವಯಸ್ಸು, ಯಾವ ಆಫೀಸಿಗೂ ಇವರು ಕೆಲಸಕ್ಕಾಗಿ ಅರ್ಜಿಯನ್ನು ಹಾಕಿದವಿಲ್ಲ). ಗೆಲುವುದಾರ ವೆಂಕಣ್ಣಯ್ಯನವರು (ಇವರು ಎಂದೂ ಯಾವುದರಲ್ಲೂ ಗೆದ್ದುದೇ ಇಲ್ಲ). ಸ್ಯಾಂಡೋ ಸಣ್ಣಪ್ಪಯ್ಯನವರು (ಇವರನ್ನು ಮೂರುಸಲ ಗಾಳಿ ಹೊಡೆದುಕೊಂಡು ಹೋಗಿದ್ದಿತಂತೆ). ಆರೋಗ್ಯವಂತರು ಜಿನದಾಸ ಪಂಡಿತರು (ಇವರ ಹಾಸಿಗೆ ಹಿಡಿದು ಮಲಗದ ದಿವಸವಿಲ್ಲ). ಆಚಾರ ವಿಚಾರದ ಸುಬ್ರಹ್ಮಣ್ಯಾವಧಾನಿಗಳು (ಇವರ ಮುಖ ನೋಡಿದರೆ ವಾಂತಿಗೆ ಬರುತ್ತಿದ್ದಿತಂತೆ). ಮೊದಲಾದವರು 'ಕಮಿಟೀ ಮೆಂಬರು'ಗಳು. ಅಂತೂ "ಟೈಟಲ್ ಹೋಲ್ಡರ್" ಅಲ್ಲದವರು ಅಲ್ಲಿ ಸೇರುವ ಹಾಗೇ ಇರಲಿಲ್ಲ.

ಆ ಕ್ಲಬ್ಬಿನಲ್ಲಿ ಒಂದುದಿನ ಒಂದು ವಿಶೇಷವು ನಡೆಯಿತೆಂದು ಸಮಾಚಾರ. ಮೈಸೂರಿನಿಂದ ಯಾರು ಯಾರೋ ದೊಡ್ಡಮನುಷ್ಯರು ಅಲ್ಲಿಗೆ ಅತಿಥಿಗಳಾಗಿ ಹೋಗಿದ್ದಂತೆಯೂ, ಅಂದು ಅವರ ಸಮಾಗಮನದ ಸಂತೋಷ ಸೂಚನಾರ್ಥವಾಗಿ 'ಕ್ಲಬ್ಬಿ'ನವರು ಒಂದು ದೊಡ್ಡ ಆಟವನ್ನು ಹೂಡಿದ್ದಂತೆಯೂ, ಇದು ಹೇಗೆಹೋಗೋ ಪಾರುಪತ್ತೆಗಾರನಿಗೆ ತಿಳಿದು, ಆತನು ಒಂದು ಅಳಿಯನನ್ನು ಯದ್ವಾತದ್ವಾ ವಾಚಾಮಗೋಚರವಾಗಿ ಆಡಿದಂತೆಯೂ, ಆಗ ಅಳಿಯನು "ಅವರೆಲ್ಲರೂ ದೊಡ್ಡದೊಡ್ಡಮನುಷ್ಯರು ಅವರೆದುರಿಗೆ ತನಗೆ ಅವಮಾನವಾಯ್ತೆಂ"ದು ಕ್ರುದ್ಧನಾಗಿ, ತನ್ನ ಮಾವನು ಪಾರುಪತ್ತೆಗಾರನಾಗಿರುವುದರಿಂದ ತನಗೆ ಬಂದಿರುವ ಅಪಮಾನವನ್ನು ತಪ್ಪಿಸಲು ತಾನು ಅಂತಹ ದೊಡ್ಡಮನುಷ್ಯರ ಸಹವಾಸಮಾಡಿರುವುದಾಗಿಯೂ ಹೇಳಿಕೊಂಡು, ಅವರೆಲ್ಲರನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಕುಲಗೋತ್ರಗಳನ್ನು ಹೇಳಿ ಮಾವನಿಗೆ ತೋರಿಸಿದಂತೆಯೂ ಮರುದಿನ ಬೆಳಗ್ಗೆ ಆ ದೊಡ್ಡಮನುಷ್ಯರು ತಾವು ನಿಜವಾಗಿಯೂ ದೊಡ್ಡಮನುಷ್ಯರೇ ಎಂದು ತೋರಿಸಿಕೊಳ್ಳಲು ಮೈಸೂರಿನ ಬೀದಿಯನ್ನು ನಿರ್ಮಲಮಾಡುವ ದೊಡ್ಡಕೆಲಸದಲ್ಲಿ ಪ್ರವೃತ್ತರಾಗಿದ್ದ

ರೆಂತಲೂ ವರ್ತಮಾನ. ಅಂತೂ ನಾವು ಇಷ್ಟುಮಾತ್ರ ಹೇಳುವೆವು.
ಈಗಿನ ಸಂಘಸುಧಾರಕರು ಜನಸಮೂಹದಲ್ಲಿ ನಿಂತು ಗಂಟಲು
ಕಿತ್ತುಕೊಳ್ಳುವುದಕ್ಕಿಂತಲೂ 'ಹೋಟಲ.' ಜೂಜಿನ ಮನೆಗಳನ್ನು
ದಿನ ವೊಂದಕ್ಕೆ ಹತ್ತುಹತ್ತರಂತೆ ಹೆಚ್ಚಿಸುತ್ತ ಬಂದರೆ ನಮ್ಮ
ಪುರೋಭಿವೃದ್ಧಿಗೆ ಅಡ್ಡವಾಗಿರುವ ವರ್ಣಾಶ್ರಮ ಧರ್ಮಗಳೂ
ಪರಸ್ಪರ ವೈಷಮ್ಯಗಳೂ ತಪ್ಪಿ ಸರ್ವಸಮತ್ವವು ತಾನೇ ತಾನಾಗುವು
ದರಲ್ಲಿ ಸಂದೇಹವಿಲ್ಲ.

---

## ದ್ವಿತೀಯ ಪರಿಚ್ಛೇದ

---

ಹೇಗೆಹೇಗೋ ಈ ಕ್ಲಬ್ಬಿನ ಸಮಾಚಾರವು ಮೈಸೂರು
ಪೋಲೀಸ್ ಇನ್ಸ್ಪೆಕ್ಟರಿಗೆ ತಿಳಿಯಬಂದಿತು. ಅವರು ಇದರ ತತ್ವಾರ್ಥ
ವನ್ನು ವಿಚಾರಿಸಲು ಪ್ರಸಿದ್ಧ ಪತ್ತೇದಾರನಾದ ನರಸಿಂಗರಾಯ
ನನ್ನು ಕಳುಹಿಸಿದರು. ಅವನು ಬಂದಿರುವುದು ಯಾರಿಗೂ ತಿಳಿ
ಯದು. ಅಂದು ಭಾನುವಾರವೆಂದು ಆ ಊರಿನ 'ನೆಂಬರುದಾರ್ರ'
ಜತೆಗೆ ಹೊರಗಿನ ಅತಿಥಿಗಳನ್ನೂ ಬರಮಾಡಿಕೊಂಡು, ಅಂದು
ಕ್ಲಬ್ಬಿನವರು ಮಹಾ ವೈಭವದಿಂದ ಸಂತೋಷಕೂಟವನ್ನು ನಡೆ
ಸುತ್ತಿದ್ದಾರೆ. ಅಂದು ಬರಿಯ ಕಾಫಿ ತಿಂಡಿಗಾಗಿ, ಒಂದು ಹೊತ್ತಿಗೇ
ಹತ್ತು ರೂಪಾಯಿ ಖರ್ಚಾಗಿದೆ ರೂಪಾಯಿಗಳ ಶಬ್ದವು
ಸುಮಾರು ದೂರಕ್ಕೆ ಕೇಳಿಸುತ್ತ, ಕ್ಲಬ್ಬಿನವರ ಧನಿಕತೆಯನ್ನು
ವ್ಯಕ್ತಪಡಿಸುತ್ತದೆ.

ಮಾವನು ಅಳಿಯನ ವೈಭವವನ್ನು ನೋಡಿ ಬೆರಗುಹೋಗಿ
ದ್ದಾನೆ. ಮಾವನಿಗೆ ಒಳಗೆ ಒಂದು ಯೋಚನೆಯಿದ್ದಿತು. ಯಾವ
ತ್ತಾದರೂ ಒಂದು ದಿನ ಅಳಿಯನಿಗೆ ಅದೃಷ್ಟ ಬಂದರೆ ಅಷ್ಟು

ಹಣವೂ ತನ್ನದಾಗುವುದು. ಅಲ್ಲದೆ ನಿತ್ಯವೂ ತಪ್ಪದೆ ಅಳಿಯನು ೨-೩ ರೂಪಾಯಿ ತಂದುಕೊಡುವನು. ಇನ್ನೇನಾಗಬೇಕು ?

ಸುಮಾರು ಮೂರುವರೆ ಗಂಟೆ. ಆ ವೇಳೆಗೆ ಅಳಿಯಂದಿರು ಕೃಷ್ಣಮೂರ್ತಿಗಳಿಗೆ ಬಂದಿದ್ದ ಹಣವೆಲ್ಲಾ ಕೈಬಿಟ್ಟುಹೋಗಿದೆ. ಗಳಿಗೆಗೊಂದು ಸಲ "ಸುಖದುಃಖೇ ಸಮೇಕೃತ್ವಾ ಲಾಭಾ ಲಾಭೌ ಜಯಾ ಜಯೌ" ಎಂದು ಶ್ಲೋಕವನ್ನು ಹೇಳುತ್ತಲೂ, ಮತ್ತೊಮ್ಮೆ "ಸುಮಾರು ೩೦೦ ರೂಪಾಯಿ ಬಂದಿತ್ತು. ಎದ್ದಿದ್ದರೆ ಚನ್ನಾಗಿದ್ದಿತು" ಎಂದು ಹೇಳಿಕೊಳ್ಳುತ್ತಲೂ ಆಡುತ್ತಲೇ ಕುಳಿತಿದ್ದನು. ಸುತ್ತಿನವರು "ತಾವು ಒಬ್ಬರ ಕೈಕೆಳಗೆ ಇರುವವರಲ್ಲ. ತಮಗೆ ಧಾರಾಳವಾಗಿ ಮಾತಾಡುವ ಹಕ್ಕು ಉಂಟೆ"ಂದು ತೋರಿಸಿಕೊಳ್ಳಲು ತೋರಿದುದನ್ನೆಲ್ಲ ಮಾತನಾಡುತ್ತಿದ್ದರು.

ಸಿಗರೇಟು ಬೀಡಿ ಚುಟ್ಟಾಗಳ ಹೊಗೆಯು ಆ ಆವರಣವನ್ನೆಲ್ಲಾ ವ್ಯಾಪಿಸಿ, ಅಲ್ಲಿ ಸಣ್ಣಗೆ ಮಂಜು ಮುಸುಕಿರುವಂತೆ ಕಾಣುತ್ತದೆ. ಆ ಸುಗಂಧವು ಸುತ್ತಲೂ ವ್ಯಾಪಿಸಿದೆ. ಬಿಸಾಡಿದ ತುಂಡುಗಳೆಲ್ಲವೂ ದಟ್ಟವಾಗಿ ಬಿದ್ದಿದ್ದು, ಅಂಗೈಯಗಲವೂ ಬಂಣೆಲ ಕಾಣಿಸನಂತೆ ಆಗಿದೆ. ಜೇಗಿನಿಂದಲೂ ಅದೃಷ್ಟದೇವತೆಯ ಕೋಪಕ್ಕೆ ಪಾತ್ರರಾಗಿರುವವರ ತಾರಧ್ವನಿಯೊಡನೆ ಆಕೆಯ ಕಟಾಕ್ಷಕ್ಕೆ ಪಾತ್ರರಾಗಿರುವವರ ಮಂದ್ರಗಂಭೀರ ಧ್ವನಿಯೂ, ಹಾಗೂ ಹೀಗೂ ಇರುವವರ ಅಸಮಾಧಾನದ ಮಧ್ಯಮಧ್ವನಿಯೂ ಸೇರಿ ದೊಡ್ಡ ಸಂಗೀತವನ್ನು ಮಾಡುತ್ತಿವೆ ಆಗಿಂದಾಗ್ಯೆ ಜಲ್ ಜಲ್ಲೆಂದು ಕೇಳಿಸುವ ರೂಪಾಯಿನ ಶಬ್ದವು ತಾಳವಾಗಿದೆ. ಎಲ್ಲರಿಗೂ ಜೂಜಿನ ಅಮಲು ತಲೆಗೇರಿದೆ. ಯಾವನು ಬಂದರೂ ಕೇಳುವ ಹಾಗಿಲ್ಲ. ಸರಿ! "ಆನೆ ನೀರಾಟದೊಳು ಮೀನ ಕಂಡಂಜುವುದೆ?" ಎಂದಹಾಗೆ.

ಕೊನೆಗೆ ನಂಬದುದಾರರ ಮನೋಧಾರ್ಢ್ಯವನ್ನು ಪರೀಕ್ಷೆ ಮಾಡುವ ಕಾಲವು ಬಂದಿತು. ಸುಮಾರು ನಾಲ್ಕುಗಂಟೆ ಇರಬಹುದು ಒಬ್ಬನು ವಡೆ ಮಾರುವವನು ಅಲ್ಲಿಗೆ ಬಂದನು. ಊಟಮಾಡಲು ಪುರಸತ್ತಿಲ್ಲದ ಕೆಲವರು ಕೂಡಲೆ ಅವನನ್ನು ಕೂಗಿ ಕರೆದರು. ವಡೆಯ ವ್ಯಾಪಾರವೂ ಚೆನ್ನಾಗಿ ಆಯಿತು; ಅವನಿಗೂ ವಡೆ ಚೆನ್ನಾಗಿದೆ ಎಂದು ಒಂದು ರೂಪಾಯಿ ಇನಾಮೂ ಸಿಕ್ಕಿತು. ಅವನೂ ಅದೂ ಇದೂ ಮಾತನಾಡುತ್ತ ಅಲ್ಲೆ ಕುಳಿತು ಬಿಟ್ಟನು. ಮತ್ತೊಬ್ಬನು ಕೋಡುಬಳೆ ತಂದನು. ಅದೂ ಚೆನ್ನಾಗಿದ್ದು ಎಲ್ಲಾ ಖರ್ಚಾಗಿ, ಅವನೂ ವಡೆಯವನೂ ತಮ್ಮ ತಮ್ಮ ವೃತ್ತಿಯ ವಿಚಾರವಾಗಿ ಮಾತನಾಡುತ್ತ ಕುಳಿತುಕೊಂಡರು. ಆ ವೇಳೆಗೆ ಸುಮಾರು ಐದು ಗಂಟೆಯಾಗಿರಬಹುದು. ಮನೆಗೆ ಹೋಗಿದ್ದವರೂ ಬಂದು ಬಿಟ್ಟಿದ್ದಾರೆ. ಕ್ಲಬ್ಬು ಭರ್ತಿಯಾಗಿ ಹೋಗಿದೆ. ಯಾರೂ ತಪ್ಪಿಸಿಕೊಂಡಿಲ್ಲ.

---

## ತೃತೀಯ ಪರಿಚ್ಛೇದ

---

ಆ ವೇಳೆಗೆ "ಕೃಷ್ಣಮೂರ್ತಿಗಳೇ" ಎಂದು ಕೂಗುವ ಸ್ವಲ್ಪ ಕರ್ಕಶವಾದ ಶಬ್ದವೊಂದು ಕೇಳಿಸಿತು. ಪರಿಚಿತವಾದ ಆ ಶಬ್ದವೆತ್ತಲಿಂದ ಬಂದಿತೆಂದು ನೋಡುತ್ತಿರುವಾಗಲೇ, ಸಾಮಾನ್ಯವಾಗಿ, ನೋಡಿದರೆ ಹೆದರಿಕೆಯಾಗುವ ಭೀಮ ಸ್ವರೂಪವೊಂದು, "ಕಾಕಿ" ಯೂನಿಫಾರಮ್ಮಿನಲ್ಲಿ ಇನ್ನೂ ಕರಾಳವಾಗಿ ಎದುರಿಗೆ ಬಂದು ನಿಂತಿತ್ತು. ಅವರು ಬಾಗಿಲು ಚಿಲಕ ಹಾಕದೆ ಮೈಮರೆತ ದಿನವಿಲ್ಲ. ಇಂದು ಈ ವ್ಯಕ್ತಿಯು ಒಳಗೆ ಬಂದುದು ಹೇಗೆ? ಎಲ್ಲರಿಗೂ ಆಶ್ಚರ್ಯ. ಎಲ್ಲರೂ ತುಟಿಪಿಟಿಕ್ಕೆನ್ನದೆ ಚಿತ್ರದ ಬೊಂಬೆಗ

ಳಂತೆ ಕುಳಿತಿದ್ದಾರೆ. ದುಡ್ಡಿನ ರಾಶಿಯು ಮುಂದೆ ಸುರಿದಿದೆ. ಎಲ್ಲರೂ ಸುತ್ತ ಕುಳಿತಿದ್ದಾರೆ. ಕೈಯ್ಯ ಎಲೆಗಳು ಕ್ರಮೇಣ ಜಾರಿಬಿದ್ದು ಹೋಗುತ್ತಿವೆ. ಬಲಗೈಯ್ಯ ಸಿಗರೇಟು, ಬೀಡಿ ಇತ್ಯಾದಿಗಳು ಅಲ್ಲಲ್ಲೆ ಕವರಿಹೋಗುತ್ತಿವೆ ! ಎಲ್ಲಿದ್ದವರು ಅಲ್ಲೆ !

ಈ ವೇಳೆಗೆ ಆಗಲೇ, ವಡೆಯುವನೂ ಕೋಡುಬಳೆಯುವನೂ ಹೋಗಿ ಎರಡು ಪಿಸ್ತೂಲುಗಳನ್ನು ಹಿಡಿದು ಕೊಂಡು ಆ ಕಿರುಮನೆಗಿದ್ದ ಎರಡು ಬಾಗಿಲಲ್ಲಿ ನಿಂತಿದ್ದಾರೆ. ಯಮನೆರಡಾಗಿ ಬಂದಂತೆ ಕಾಣುತ್ತದೆ. ಯಾರೂ ಏನೂ ಮಾಡುವ ಹಾಗಿಲ್ಲ; ಎದ್ದು ಹೋಗಲು ಯತ್ನಿಸಿದರು. ಆದರೆ ನಡೆಯಲಿಲ್ಲ.

ಮುಂದಿನ ಫಲಾಫಲಗಳೆಲ್ಲವೂ ಎಲ್ಲರ ಮನಸ್ಸಿಗೂ ತಟ್ಟನೆ ಹೊಳೆದು ಹೋಯಿತು. ಕೆಲವರ ಕಣ್ಣಿನಲ್ಲಿ ನೀರು ದಡಗುಟ್ಟಿಕೊಂಡು ಹರಿಯಲೂ ಹರಿಯಿತು. ಆದರೂ ಯಾರಿಗೂ ಮಾತನಾಡುವ ಧೈರ್ಯವಿಲ್ಲ. ಎಲ್ಲರೂ ನೀರವ. ಮಾಡುವ ಕೆಲಸವು ತಪ್ಪೆಂದು ತಿಳಿದಿರುವಾಗ, ಒಮ್ಮೆ ಯಾದರೂ ಅದು ಮನುಷ್ಯನನ್ನು ಕಾಡದೆ ಹೋಗುವುದೇನು ?

ಕೊನೆಗೆ ಸರಸಿಂಗರಾಯನೇ ಮಾತನಾಡಿದನು. " ಬದ್ಮಾಷ್ ? ಅಬ್ ಕ್ಯಾಬೋಲ್ತೆ ತುಂ ಸಬ್‌ಲೋಗ್ ?" ಎಂದು ಗದರಿಸಿದನು. ಆ ಗರ್ಜನೆಯು ಎಲ್ಲರ ಎದೆಯನ್ನೂ ನಡಗಿಸಿ ಬಿಟ್ಟಿತು. ಏನೂ ಯಿಲ್ಲದಾಗ ನಗುತ್ತಿರುವ ಆ ಪೋಲೀಸಿನವರ ಮುಖದಲ್ಲಿ, ಯಾವನಾದರೊಬ್ಬನು (ಅವನು ಅಪರಾಧವನ್ನೇ ಮಾಡಿರಬೇಕಾದ್ದೇ ಇಲ್ಲ), ಬಂದು ಎದುರಿಗೆ ನಿಂತರೆ ಕಿಡಿಯೇಳುತ್ತದೆ. ನೋಡುವವರ ಎದೆ ಇಬ್ಭಾಗವಾಗುತ್ತದೆ. ಮೊದಲೇ ಕಣ್ಣೀರು ಬಿಡುತ್ತಿದ್ದವರು ದೊಡ್ಡದಾಗ್ಯಿಗೊಳೋ ಎಂದು ಅತ್ತುಬಿಟ್ಟರು. ಮತ್ತೆ ಕೆಲವರು ಸುಮ್ಮನೆ ಮುಸುಕು ಹಾಕಿಕೊಂಡು ತಲೆ ತಗ್ಗಿಸಿಕೊಂಡು ಕುಳಿತರು ; ಹೊರಗೆ ಹೊರಡಬೇಕೆಂಬ ಒಬ್ಬಿಬ್ಬರ ಪ್ರಯತ್ನಗಳೂ

ಸಹ ನಡೆಯಲಿಲ್ಲ ಕೊನೆಗೆ ಬೇರೆ ಗತಿಯಿಲ್ಲದೆ ಕೃಷ್ಣಮೂರ್ತಿಯೇ ಮುಂದೆ ಬರಬೇಕಾಯಿತು. ಸಾಮದಾನಾದ್ಯುಪಾಯುಗಳನ್ನೆಲ್ಲಾ ಪ್ರಯೋಗಿಸಿದುದರ ಫಲವಾಗಿ ಕೊನೆಗೆ ನರಸಿಂಗರಾಯನಿಗೆ ಮೂರುನೂರು ರೂಪಾಯಿಯನ್ನೂ, ಅವರಿಬ್ಬರಿಗೂ ಐವತ್ತು ಐವತ್ತು ರೂಪಾಯಿಯನ್ನೂ ಕೊಡಬೇಕೆಂದು ಇತ್ಯರ್ಥವಾಯಿತು. ಬಂದಿದ್ದ ವೃತ್ಯುವು ದುಡ್ಡಿನ ಮೇಲೆ ಹೋಗಿ, ತಾವು ಉಳಿದು ಕೊಂಡೆವೆಂದು ನಿಶ್ಚಯವಾದ ಕೂಡಲೆ, ಎಲ್ಲರೂ ಚಿಗುತುಕೊಂ ಡರು. ಆರೆಗಂಟೆಯ ಮುಂದೆ ಒಬ್ಬೊಬ್ಬರು ನೂರು ರೂಪಾಯಿ ಕೊಡಲು ಸಿದ್ಧವಾಗಿದ್ದವರು, ಈಗ ಇಪ್ಪತ್ತು ರೂಪಾಯಿ ಕೊಡು ವುದೂ ಕಷ್ಟವಾಗಿ ಹೋಯಿತು ತುಂಬಿದ ಕಟ್ಟೆಯಲ್ಲಿ ಮೂರು ನೂರು ರೂಪಾಯಿ ಹುಟ್ಟುವುದು ಕಷ್ಟವಾಗಿ ಹೋಯಿತು. ಕೊನೆಗೆ ಯಜಮಾನ ಕೃಷ್ಣಮೂರ್ತಿಯು ಅಲ್ಲೊಬ್ಬನ ಬಳಿ ಒಂದು ದಿವಸದ ವಾಯಿದೆ ಮಾಡಿಕೊಂಡು ನೂರು ರೂಪಾಯಿಗಳನ್ನು ಸಾಲಮಾಡಿ ತನ್ನಲ್ಲಿದ್ದುದನ್ನೂ ಸೇರಿಸಿಕೊಟ್ಟು, ಆ ಪ್ರಾರಬ್ಧಗಳನ್ನು ತೊಲ ಗಿಸಿದನು.

ಅಲ್ಲಿಗೆ ಆಟವು ನಿಂತುಹೋಯಿತು. ಎಲ್ಲರೂ ಚದುರಿ ಹೋದರು. ಕೃಷ್ಣಮೂರ್ತಿಗೆ ಮಾತ್ರ ಯೋಚನೆ. "ಮರುದಿವಸ ನೂರು ರೂಪಾಯಿಗಳನ್ನು ಎಲ್ಲಿಂದ ತರುವುದು? ಯಾರನ್ನು ಕೇಳುವುದು?" ಅವನಿಗೆ ಬಹಳ ಬೇಕಾದವರೊಬ್ಬರಿಬ್ಬರು 'ಅದ ಕ್ಕೇನು? ನಿಮ್ಮ ಮಾವನನ್ನೇ ಕೇಳಿದರಾಯಿತು" ಎಂದರು. ಮಾವನ ಯೋಗ್ಯತೆ ಅಳಿಯನಿಗೆ ಗೊತ್ತು. ಅಂತೂ ಅವನಿಗೆ ಆಕಾಶವೇ ಕಳಚಿಬಿದ್ದಂತೆ ಇದೆ. ಜೂಜಿನಕಟ್ಟೆ ಸಾಲ ಮೊದಲು ತೀರಿಸಬೇಕು. ಇಲ್ಲವಾದರೆ ಮಾನ ಹೋಗುತ್ತದೆ. ಮನೆಯಲ್ಲಿ ಮಕ್ಕಳು ಅನ್ನವಿಲ್ಲದೆ ಅತ್ತರೂ ಚಿಂತೆಯಿಲ್ಲ. ತಾನು ವಾರಕ್ಕೊಂದು ಸಲ ಭೀಷ್ಮಪಂಚಕ ಮಾಡುತ್ತಿದ್ದರೂ ಯೋಚನೆ ಇಲ್ಲ. ಜೂಜಿನ ಸಾಲ ಮೊದಲು ತೀರಿಸಬೇಕು. ಇಲ್ಲವಾದರೆ ಮಾನ ಹೋಗುತ್ತದೆ. ಜೂಜಿಗೂ ಮಾನಕ್ಕೂ ಬಹು ನಿಕಟ ಸಂಬಂಧವೇನೊ?

# ಮೂರನೆಯ ಭಾಗ



## ಹ ವ ಣಿ ಕೆ

---

## ಪ್ರಥಮ ಪರಿಚ್ಛೇದ

---

ಇಂದು ಛತ್ರದ ಪಾರುಪತ್ತೇಗಾರ್‍ರಿಗೆ ಸ್ವಲ್ಪವೂ ಬಿಡಿತಿಯಿಲ್ಲ. ಅವರಿಗೆ ಬಲು ಕೆಲಸ. ಯಾರೋ ದೊಡ್ಡ ಅಧಿಕಾರಿಗಳು ಬಂದಿದ್ದಾರೆ. ಅವರಿಗೆ ಬೇಕಾದ "ಸರಬರಾಯಿ" ಮಾಡಿಸಿ ಒಳ್ಳೆಯವನೆನ್ನಿಸಿಕೊಳ್ಳಬೇಕೆಂದು ಆಶೆ; ಸಾಲದುದಕ್ಕೆ ತನಗೆ ಅಂತರಂಗದಲ್ಲಿ ಒಂದು ದಿಗಿಲು. ಮೊನ್ನೆ ಆ ಪಳ್ಳಿ ಅಯ್ಯನು 'ನೋಡುತ್ತಿರು. ಇನ್ನು ಒಂದು ವಾರದೊಳಗಾಗಿ ನಿನ್ನ ಬಾಯಿಗೆ ಮಣ್ಣು ಹಾಕಿಸಿ ಬಿಡುತ್ತೇನೆ' ಎಂದಿದ್ದನಂತೆ. ಈ ಅಧಿಕಾರಿಯು ಬಂದುದು ಅದಕ್ಕೇ ಏನೋ?

ಬಾಗಿಲು ಕಾಯುವ ಜವಾನರಿಬ್ಬರಿಗೂ ಬೇಕಾದ ಉಪಚಾರವಾಯಿತು. ಆದರೂ ಅವರೇನೂ ಸಗ್ಗಲಿಲ್ಲ. "ಅವರು ರಾಜ್ಯದಲ್ಲಿ ದೊಡ್ಡ ಅಧಿಕಾರಿಗಳು ಅಷ್ಟೆ." ಹೆಚ್ಚು ಮಾತು ಅವರಿಂದ ಹೊರಡಲಿಲ್ಲ ವೆಂಕಟರಮಣಯ್ಯನಿಗೆ ಎದೆಯಲ್ಲಿ ಅವಲಕ್ಕಿ ಕುಟ್ಟುತ್ತಿದೆ. "ಏನಾದರೂ ಆಗಲಿ; ಇವರು ಯಾರೆಂದು ತಿಳಿದರೆ ಸಾಕು." ಸಾಲದುದಕ್ಕೆ, ಹಾಳು, ಎಲ್ಲಿಯೋ ನೋಡಿದಂತಿದೆ ಆದು ಜೀರ್‍ಲೆ ಅಂಜುವವರ ಮೇಲೆ ಕಪ್ಪೆ ಬಿಟ್ಟಂತೆ.

## ದ್ವಿತೀಯ ಪರಿಚ್ಛೇದ

---

ಕೃಷ್ಣಮೂರ್ತಿಯ ವಾಯಿಂಬೆಯು ವಿಸ್ತಾರುತ್ತಾ ಬಂದಿತು. ಅವನಿಗೆ ಎಲ್ಲಿಯೂ ಹಣವು ದೊರೆಯಲಿಲ್ಲ. ಯತ್ನವಿಲ್ಲದೆ ಮಾವನನ್ನು ಕೇಳಿದನು. ಪೂರ್ವಾಪರಗಳನ್ನೆಲ್ಲ ತಿಳಿದ ಮಾವನು ಹಣವನ್ನು ಕೊಡಲಿಲ್ಲ. ಹೆಂಡತಿಯನ್ನು ಕೇಳಬೇಕೆಂದು ಅಪೇಕ್ಷೆ. ಕೇಳಲು ಧೈರ್ಯವಿಲ್ಲ. ಆದರಿಂದ "ಅಯ್ಯೋ ಪಾಪ! ಅವಳ ಹತ್ತಿರ ಎಲ್ಲಿ ಬಂದೀತು?" ಎಂದುಕೊಳ್ಳುವನು. ಏನಾದರೂ ಮಾಡಬೇಕು. ಇಲ್ಲವಾದರೆ ಯತ್ನವಿಲ್ಲ. ಏನು ಮಾಡಬೇಕೆಂಬುದೇ ತೋರದು.

ಕೊನೆಗೆ ಒಂದು ಮಾಸವು ಹೋಯಿತು. ಅಂದು ಆ ಊರಿಗೆ ಒಬ್ಬ ದೊಡ್ಡ ಮನುಷ್ಯನು ಬಂದಿದ್ದಾನೆ. ಊರಿನವರೆಲ್ಲ ಅವನನ್ನು 'ಆಫೀಸರು' ಮಾಡಿದ್ದರೂ, ಆದರಲ್ಲಿ ಕೃಷ್ಣಮೂರ್ತಿಗೆ ನಂಬಿಕೆಯಿಲ್ಲ. ಯಾವ ಆಫೀಸರ್ ಆದರೇನು? ಯತ್ನವಿಲ್ಲ. ನಡು ನಡುವೆ ಮಾತ್ರ ಒಂದು ಸಲ ಎಲ್ಲೋ ಯಾವುದೋ ಸಣ್ಣ ಸೊಲ್ಲು "ಸಿಕ್ಕಿಬಿದ್ದರೆ?" ಎನ್ನುವುದು. ಕೂಡಲೆ ಕೃಷ್ಣಮೂರ್ತಿಯು ಪ್ರತಿಹತನಾದರೂ "ಓ! ನಾನು ಸಿಕ್ಕಿಬೀಳುತ್ತೇನೆಯೋ? ತ್ಸ್..." ಎಂದುಕೊಳ್ಳುವನು. ಕೊನೆಗೆ ಹಾಗೆ ಮಾಡಲು ನಿಶ್ಚಯವಾಯಿತು. ಬಾಗಿಲು ಪಹರೆಯವರಿಬ್ಬರು? ಅವರಿಗೆ ಗಾಢನಿದ್ರೆ ಬಂದುಬಿಟ್ಟರೆ?

---

## ತೃತೀಯ ಪರಿಚ್ಛೇದ

---

ಈ ಛತ್ರದ ಕಿರುಮನೆಯ ಮೂಲೆಯೊಂದರಲ್ಲಿ ಮತ್ತೊಂದು ಪ್ರಾಣಿಯೂ ಯೋಚಿಸುತ್ತ ಕುಳಿತಿದೆ. ಎದುರಿಗೆ ದೊಡ್ಡದಾದ

ಒಂದು ಕನ್ನಡಿ. ಅದರಲ್ಲಿ ತನ್ನ ಪ್ರತಿಬಿಂಬವನ್ನೊಮ್ಮೆ ನೋಡಿ
ಕೊಂಡು ತಾನು ಸುಂದರಿಯೆಂಬ ಅಹಂಕಾರಕ್ಕೆ ಒಂದು ಗಳಿಗೆ ಎಡೆ
ಕೊಡುತ್ತಾಳೆ. ಮತ್ತೊಂದು ಗಳಿಗೆಯಲ್ಲಿ ಮುಖವು ವಿವರ್ಣ
ವಾಗಿ ಕಣ್ಣೀರು ಬರುತ್ತದೆ. ಹೀಗೆ ವಿವಿಧ ಮನೋಭಾವನೆಗಳಿಂದ
ಆಪತಪ್ರತ್ಯಾಹತವಾಗುತ್ತಿರುವ ಯುವತಿಯ ಕಣ್ಣಿಗೆ ಹಠಾತ್ತಾಗಿ
ಸಾಯಂಕಾಲದ ಸೂರ್ಯನ ಪ್ರತಿ ಬಿಂಬವು ಬಿದ್ದಿತು. ಆಗಲೇ
ಐದು ಗಂಟೆಯಾಗಿ ಹೋಗಿದೆ. ಇನ್ನು ಬಹಳ ಕಾಲವಿಲ್ಲ. ತಾನು
ಸಿದ್ಧಳಾಗಬೇಕು. ಬೆಳೆದು ಬಂದು ಫಲೋನ್ಮುಖವಾಗುವುದರೊ
ಳಗಾಗಿ ಬಣಗಿ ಹೋಗಿದ್ದ ಪ್ರೇಮ ವೃಕ್ಷವಿಂದು ಪುನರುಜ್ಜೀವಿತ
ವಾಗಿರಲು, ಇದುವರೆಗೂ ಪ್ರಸುಪ್ತವಾಗಿದ್ದ ಅಂತರಿಕವಾದ
ಪ್ರೇಮಬಂಧವು ಇಂದು ಪ್ರಬುದ್ಧವಾಗಿರಲು, ಹೃದಯವು ಹೇಳಿಕೇ
ಳದೆ ತನಗಿಷ್ಟವಾದ ವಸ್ತುವಿನ ಬಳಿಗೆ ಹೊರಟುಹೋಗಿರಲು,
ಹೋಗದಿರುವುದೆಂತು? ಅಭಾವದಲ್ಲಿ ಬೇಡವೆಂದು ಕೃತನಿಶ್ಚಯೆ
ಯಾದರೂ ವರ್ಷಾಂತರಗಳಿಂದ ಬೇಕೆಂದ ವಸ್ತುವೆದುರಿಗೆ ಬಂದು
ನಿಂತರೆ ಅವನ್ನೆಂತು ತಿರಸ್ಕರಿಸುವುದು? ಅಜ್ಞಾತವಾಗಿಯೇ
ಭೂಮಿಯನ್ನು ಅಗೆದು ಹಸನು ಮಾಡಿ ಗಿಡವನ್ನು ನೆಟ್ಟು ಅದು
ಬೆಳೆದು ಬಂದು ಫಲೋನ್ಮುಖವಾಗಿರಲು, ಈಗ ಜ್ಞಾತವಾಗಿ ಅದನ್ನು
ಕಿತ್ತು ಮೂಲೋತ್ಪಾಟನ ಮಾಡಲು ಮನಸ್ಸು ಬರುವುದೆ? ವರ್ಷಾಂ
ತರಗಳಿಂದ ಮನೋಭಿತ್ತಿಯಲ್ಲಿ ನಾನಾ ವಿಧವಾಗಿ ವರ್ಣಿತವಾಗಿ
ಉಜ್ವಲವಾಗಿ ಬೆಳಗುತ್ತಿದ್ದ ಚಿತ್ರಪಟವಿಂದು ಪ್ರತ್ಯಕ್ಷವಾಗಿದೆ.
ಕೊಳ್ಳುವುದೂ ಬಿಡುವುದೂ ತನ್ನ ಕೈಯಲ್ಲಿದೆ. ಏನು ಮಾಡು
ವುದು?

ಆದರೂ ಮನಸ್ಸು ಹಿಂತೆಗೆಯುತ್ತದೆ. ಸುಖಕ್ಕೆ ಆಶೆಪಟ್ಟು
ಕೆಟ್ಟ ಹೆಸರನ್ನು ಸಂಪಾದಿಸುವುದೆ? ಪ್ರೇಮಾಗ್ನಿಗೆ ತುತ್ತಾಗಿ
ಧರ್ಮಕ್ಕೆ ಜಲಾಂಜಲಿ ಕೊಡುವುದೆ? ದೃಷ್ಟಫಲಕ್ಕೆ ಬೆರೆತು ಅಮೋ
ಘವಾದ ಅದೃಷ್ಟ ಫಲವನ್ನು ತೊರೆಯುವುದೆ? ಯಾಕಾಗಬಾರದು?

ಪ್ರಪಂಚವು ತನ್ನನ್ನು ಯಾರ ಪಾಲಿಗೆ ಬಿಟ್ಟಿರುವುದೋ ಅವನಿಗೆ ತಾನು ಬೇಕಾಗಿಲ್ಲ. ಅವನಿಗೆ ಬೇಕಾಗಿರುವುದು ಕೇವಲ ಜೂಜು ತಾನು ನೋಡುವುದಕ್ಕೆ ಚೆನ್ನಾಗಿಲ್ಲದೆ ಇಲ್ಲ. ರೂಪವತಿಯಲ್ಲದಿದ್ದರೆ ಕಂಡವರೆಲ್ಲರೂ, ಮತ್ತೊಂದು ಗಳಿಗೆ ನಿಂತು ನೋಡುವರೇ? ಕಂಡ ಕಂಡವರ ಕಣ್ಣಿಗೆಲ್ಲಾ ಕಮನೀಯವಾದುದನ್ನೂ, ಕಡೆಗಾಣಿಸುವವನ ಕೈ ಹಿಡಿದ ತನ್ನ ದೌರ್ಭಾಗ್ಯವೆಂತಹುದು? ತನಗೆ ಹಲವರು ಮೆಚ್ಚುವಂತೆ ಗಂಡನೊಡನೆ ಸಂಸಾರ ಮಾಡಬೇಕೆಂದು ಆಶೆ. ಅದಕ್ಕಿಂತಲೂ ಹೆಚ್ಚಾಗಿ ಹಣ್ಣಾಗದೆ ಹೋದ ಹೆಣ್ಣಿನ ಬಯಕೆ. ಸೌಂದರ್ಯದ ಪಾಶದಿಂದ ಬಿಗಿದು, ಹೃದಯದ ಅಂತರಾಂತರದ ಸೌಹಾರ್ದದ ಸೋನೆಗರೆದು ಹೃದಯವನ್ನು ನೆನೆಯಿಸಿ ಸೋಲಿಸಿ, ತನ್ನ ಸರ್ವಸ್ವವನ್ನೂ ಸೂರೆಗೊಟ್ಟು, ಪತಿಯನ್ನು ತನ್ನವನನ್ನಾಗಿ ಮಾಡಿಕೊಂಡು, ಪ್ರೇಮವೆಂಬ ಸತ್ಫಲವನ್ನು ಹೊಂದಿ ಮನಸಾರೆ ಸಂಸಾರ ಸುಖವನ್ನು ಅನುಭವಿಸಬೇಕೆಂದಿದ್ದ ಪ್ರಯತ್ನಗಳೆಲ್ಲವೂ ವಿಫಲಗಳಾಗಿದ್ದವು. ಹೃದಯವು ವಿಫಲಿತ ಪ್ರಯತ್ನದ ಬೇಗುದಿಯಿಂದ ಬೆಂದ ಹೋಗಿದ್ದಿತು. ಮತ್ತೆ ಆ ಬಾಲ್ಯಸ್ನೇಹದ ಸೊದೆಯು ಸುರಿಮಳೆಯಾಗಿ, ಆಶಾತಂತುಗಳೆಲ್ಲವೂ ಪುನರುಜ್ಜೀವಿತವಾಗಿವೆ. ಸೌಖ್ಯಪಡಬೇಕೆಂಬ ಆಶೆಯ ಹಿರಿಯ ಹೊನಲಿನ ಹೊಡೆತದಲ್ಲಿ ವಿವೇಕದ ಅಡ್ಡ ಕಟ್ಟೆಯು ನಿಲ್ಲುವುದೆ? ಧರ್ಮದ ತಡಿಕೆಯು ತಡೆಯುವುದೆ? ಒಬ್ಬನಿಗೆ ತಾನು ಬೇಕಾಗಿಲ್ಲ; ಇದ್ದರೂ ಒಂದೆ ಹೋದರೂ ಒಂದೆ ಮತ್ತೊಬ್ಬನಿಗೆ ತಾನು ಸರ್ವಸ್ವ; ತಾನು ಹೋದರೆ ಜಗತ್ತೇ ಹೋಯಿತೆಂದು ತಿಳಿಯುತ್ತಾನೆ. ತನ್ನನ್ನು ಕಸಕ್ಕಿಂತ ಕಡೆಯೆಂದು ನೋಡುವವನಲ್ಲಿದ್ದು ಸಾಯುವವರೆಗೂ ದುಃಖವನ್ನನುಭವಿಸುವುದೇ? ಅಥವಾ ತನ್ನನ್ನು ಗೊತ್ತುಗಾತಿಯನ್ನಾಗಿ ಮಾಡುವವನೊಡನೆ ಸೌಖ್ಯ ಸಾಮ್ರಾಜ್ಯವನ್ನು ಅನುಭವಿಸುವುದೆ?

ಹುಡುಗಿಯ ಮನಸ್ಸು ಭಾವನಾತರಂಗಿಣಿಯಲ್ಲಿ ಕೊಚ್ಚಿ ಹೋಯಿತು. ತಾನು ಸೌಂದರ್ಯವತಿ ಎಂಬ ಗರ್ವದಿಂದ ಕೂಡಿ,

ತಿರಸ್ಕಾರವೆಂಬ ಸರ್ಪದಿಂದ ದಷ್ಟೆಯಾಗಿ, ಇಂದ್ರಿಯಸೌಖ್ಯವೆಂಬ ವಿಷಕ್ಕೆ ಮನಸ್ಸನ್ನು ತೆತ್ತಿರಲು ಉಳಿಯುವುದುಂಟೇನು ? ಹೊಡೆದು ಕೊಂಡು ಹೋಯಿತು. ಮುಂದಿನ ಯೋಚನೆಗಳು ತಾವೇತಾವಾಗಿ, ಅವಳಿಗೆ ಸ್ಫುರಿಸಿದವು.

ಒಮ್ಮೊಮ್ಮೆ ಮಾತ್ರ ಹುಡುಗಿಯು ವಿಷಣ್ಣೆಯಾಗಿ "ಅಯ್ಯೋ! ಅವನೇ ನನ್ನ ಗಂಡನಾಗಬಾರದಾಗಿತ್ತೆ? ಅಥವಾ ನನ್ನ ಗಂಡನು ಅವನಂತೆ ಆಗಬಾರದಾಗಿತ್ತೆ?" ಎಂದುಕೊಳ್ಳುವಳು ಕೂಡಲೆ ಕಣ್ಣಿನಲ್ಲಿ ನೀರು ಬಂದುಬಿಡುವುದು. ಆದರೇನು? ಬಂಡೆಗಳು ಕೊಚ್ಚಿಹೋಗುವ ಪ್ರವಾಹದಲ್ಲಿ ಸಣ್ಣ ಕಲ್ಲು ನಿಲ್ಲುವುದೇ? ಆದರೂ ಒಂದು ಯೋಚನೆ. "ಅವರು ಬಂದು ಬಿಟ್ಟರೆ? ಅಥವಾ ತಿಳಿದರೆ? ಹಾದಿರಂಪು ಬೀದಿ ರಂಪು ಆಗುತ್ತದೆ. ಆದರಾಯಿತು, ತಪ್ಪು ನನ್ನ ದಲ್ಲ."

---

## ಚತುರ್ಥ ಪರಿಚ್ಛೇದ

---

ರಾಮಸ್ವಾಮಿಗೂ ಮನಸ್ವಸ್ಥತೆಯಿಲ್ಲ. ಅವನ ಸ್ಥಿತಿಯು ಪುಟಚಂಡಿನಂತೆ ಆಗಿದೆ. ಒಂದು ಸಲ ತನ್ನ ಆಶೆಯು ಸಫಲ ವಾಗುವುದೆಂದು ಸ್ವರ್ಗಕ್ಕೆ ಏರುತ್ತಾನೆ. ಮತ್ತೊಮ್ಮೆ "ಸುಂದ ರಿಯು ಎಲ್ಲ ಹೆಂಗುಸರ ಹಾಗಲ್ಲ. ಧನಾದಿಗಳು ಅವಳ ಮನಸ್ಸನ್ನು ಸೆರೆಹಿಡಿಯಲಾರವು. ಸೌಖ್ಯವು ಅವಳನ್ನು ಚಪಲಪಡಿಸಲಾರದು. ಹೀಗಿರಲು ಮನಸೋತು ಕೆಟ್ಟ ಹೆಸರನ್ನು ಲಕ್ಷಿಸದೆ, ಹುಡು ಗಿಯು...ಅದು ಅಸಾಧ್ಯ." ಎಂದಾಗ ಮನಸ್ಸು ಅಲ್ಲಿಯೇ ಇಳಿದು ಹೋಗುವುದು. ಅಂತೂ ಒಂದೆಡೆಯಲ್ಲಿ ಕೂರಲು ಸಾಧ್ಯವಿಲ್ಲ. ಕೆರೆ, ಕಟ್ಟೆ, ತೋಪು, ಕೋಡಿ, ಹಳ್ಳ, ಎಲ್ಲವೂ ತಿರುಗಿ ಆಯಿತು.

ಆದರೂ 'ಎಲ್ಲಿ ಹೋಗಿದ್ದೆ' ಎಂದು ಕೇಳಿದರೆ ಮಾತ್ರ ಅವನು ಹೇಳ ಲಾರನು ಅಂತರ್ದೃಷ್ಟಿಯಾಗಿರುವಾಗ, ಬಾಹ್ಯವಸ್ತುಗಳು ಕಣ್ಣಿಗೆ ಬೀಳುವವೇನು? ಮನಸ್ಸಿನಲ್ಲಿ ಕರುವಾಪತ ಕಟ್ಟುತ್ತಿರುವಾಗ, ಇನ್ನೊಬ್ಬರು ಕಟ್ಟಿದ ಅರಮನೆಯಾದರೂ ಕಣ್ಣಿಗೆ ಬೀಳುವುದೇನು?

ಒಮ್ಮೊಮ್ಮೆ "ಇರಲಿ. ಅವಳು ಬರಲಿ." ಎನ್ನುವನು. ಮತ್ತೊಮ್ಮೆ ಬರುವುದೇ ಅಸಂಭವವೆಂದು ತೋರುವುದು. ಒಮ್ಮೊಮ್ಮೆ "ತಪ್ಪಿಸಿಕೊಂಡು ಹೋಗಲೆಂದು ಬರುವೆನೆಂದು ಸುಳ್ಳಾಡಿರಬಹುದೆ?" ಎನ್ನುವನು. ಆದರೆ ಅವಳು ಅಂಥವಳಲ್ಲ ಮೊದಲಿನಿಂದಲೂ ಸುಳ್ಳಾಡದವಳಲ್ಲ ಅವಳು ಎಂಟು ವರ್ಷದ ಹುಡುಗಿಯಾಗಿದ್ದಾಗ, ನೀರಿಗೆ ಬಂದಿದ್ದಳು. ರಾಮುವೂ, ಅವಳೂ ಆಟವಾಡುತ್ತ ಆಡುತ್ತಾ ಬಿಂದಿಗೆಯು ಭಾವಿಗೆ ಬಿದ್ದು ಹೋಯಿತು. ತಾಯಿಯು ಬಯ್ಯುವಳೆಂದು ಚೆನ್ನಾಗಿಯೂ ಗೊತ್ತು. ಆದರೂ ಅವಳು ಸುಳ್ಳು ಹೇಳಲಿಲ್ಲ. ರಾಮೂವಿಗೆ ಸುಳ್ಳೋ ಪಳ್ಳೋ, ಸುಂದರಿಗೆ ಏಟು ಬೀಳಕೂಡದು. ತಾನು ಎಷ್ಟ ಪ್ರಾರ್ಥಿಸಿದರೂ ಅವಳು ಸುಳ್ಳಾಡುವುದಿಲ್ಲವೆಂದಾಗಲೂ, ತಾನೂ ಅವಳ ಹಿಂದೆಯೇ ಹೋಗಿ ಅವರಮ್ಮನಿಗೆ ತಾನು ಮಾಡಿದೆನೆಂದು ಹೇಳಿಕೊಂಡು ಬಯ್ಗಳನ್ನು ತಪ್ಪಿಸಿದ್ದನು. ಅಂತಹ ಸಣ್ಣ ಸಣ್ಣ ವಿಚಾರಗಳ ಲ್ಲಿಯೂ ಸುಳ್ಳು ಹೇಳುತ್ತಿರಲಿಲ್ಲ. ಈಗ?

ನಡುನಡುವೆ ಒಮ್ಮೊಮ್ಮೆ "ಅಯ್ಯೊ! ನಿನ್ನೆ ಅವಳು ಅಷ್ಟು ದುಃಖ ಪಡುತ್ತಿದ್ದಾಗ ಒಮ್ಮೆಯಾದರೂ ಅವಳ ಕಣ್ಣೀರು ಒರೆಸದೆ ಹೋದೆನಲ್ಲ!" ಎಂದು ತನ್ನನ್ನು ತಾನೇ ಬಯ್ದುಕೊಳ್ಳುತ್ತಿದ್ದನು. ಮತ್ತೊಮ್ಮೆ ತಾನು ಹಿಡಿದಿರುವ ಆಶಾತಂತುವು ಕಲ್ಪವೃಕ್ಷದ ಬೇರೆಂದೂ, ಅದನ್ನು ಹಿಡಿದು ತಾನು ಸ್ವರ್ಗವನ್ನೇರುವೆನೆಂದೂ, ಭಾವಿಸಿಕೊಳ್ಳುವನು. ಮನಸ್ಸಿನ ಎಣಿಕೆಗೆ ಯಾರ ತಡೆಯಾದರೂ ಉಂಟೆ? ಅವಳು ಬಂದಾಗ ಆ ಮಾತು ಅವಳಾಡಿದರೆ ತಾನು ಈ

ಮಾತು ಆಡುವೆನೆಂದುಕೊಳ್ಳುವುದರಲ್ಲಿಯೇ ಸೂರ್ಯನು ಪೂರ್ವದಿಂದ ಪಶ್ಚಿಮಕ್ಕೆ ಹೋಗಿ ಮುಳುಗಿದನು.

ಆವರಿನ್ನೊಂದು ಹೆದರಿಕೆ. ಅವಳು ಗಂಡನಿಗೆ ಮೋಸಮಾಡಿ ಬರಬೇಕು ಅದು ಸಾಧ್ಯವೇ? ರಾಮುವಿಗೆ ಮುಖವು ವಿವರ್ಣ ಹೋಯಿತು ಆಶೆಯು ನಿರಾಶೆಯಾಗಿ ಹೋಯಿತು. ಅಲ್ಲಿಂದ ಹೊರಟು ಹೊಗಬೇಕೆನ್ನಿಸಿತು. ಆದರೂ ನೋಡಿಹೋಗೋಣ ವೆಂದುಕೊಂಡನು. 'ಆಗಲಿ ಏಳು ಗಂಟೆಯಾಗಿದೆ. ಇನ್ನು ನಾಲ್ಕು ಗಂಟೆಯು ಹೊತ್ತು ತಾನೇ'



# ನಾಲ್ಕನೆಯ ಭಾಗ



## ಕಳ್ಳರ ಕೂಟ

---

### ಪ್ರಥಮ ಪರಿಚ್ಛೇದ

---

ರಾತ್ರಿ ಸುಮಾರು ಹತ್ತು ಗಂಟೆಯಾಗಿರಬಹುದು. ಎಲ್ಲರೂ ಮಲಗಿದ್ದಾರೆ. ಯಾರ ಮನೆಯಲ್ಲೂ ದೀಪವಿಲ್ಲ. ಕತ್ತಲಿನ ಚೀಲದಲ್ಲಿ ಕೂಡಿಟ್ಟದ್ದರೆ ಇರುವಂತೆ ಹಳ್ಳಿಯೆಲ್ಲಾ ನಿಶ್ಶಬ್ದವಾಗಿದೆ.

ಛತ್ರದ ಮಗ್ಗುಲಲ್ಲಿರುವ ತೋಪಿನ ನಡುವಿನ ಗುಡಾರದಲ್ಲಿ ಮಾತ್ರ ದೀಪವಿನ್ನೂ ಇದೆ. ಬಾಗಿಲಲ್ಲಿ ರಾಮಸ್ವಾಮಿಯು ಒಂದು ಆರಾಮ ಕುರ್ಚಿಯಲ್ಲಿ ಕುಳಿತಿದ್ದಾನೆ. ಆದರೆ ಕುಳಿತಿರುವುದು ಹೆಸರಿಗೆ ಮಾತ್ರ. ಗಳಿಗೆಗೆಂಟು ಸಲ ಏಳುವುದು, ಅತ್ತ ಕಡೆ ಹೋಗಿ ದಾರಿನೋಡುವುದು, ಹಿಂತಿರುಗಿ ಬಂದು ಗುಡಾರದೊಳಗೆ ಹೋಗುವುದು, ಅಲ್ಲಿಟ್ಟಿರುವ ಸಾಮಾನುಗಳನ್ನು ಒಂದೆಡೆಯಿಂದ ಮತ್ತೊಂದೆಡೆಗೆ ಇಡುವುದು. ಮತ್ತೆ ಬಂದು ಕೂರುವುದು. ಗಳಿಗೆಗೊಂದುಸಲ ಕೈಗೆ ಕಟ್ಟಿರುವ ಗಡಿಯಾರವನ್ನು ನೋಡಿಕೊಂಡು "ಇನ್ನೂ ಎಷ್ಟು ಹೊತ್ತಪ್ಪಾ!" ಎಂದು ಒಂದು ದೊಡ್ಡ ನಿಟ್ಟುಸಿರು ಬಿಡುವುದು. ಅಂತೂ ಸಂಜೆಯಷ್ಟು ನಿರಾಶೆಯಿಲ್ಲ ಹುಡುಗಿಯು ಕೈಗೆ ಸಿಕ್ಕಿದಳೆಂಬ ನಂಬಿಕೆ. ಇಲ್ಲವಾದರೆ ಸಂಜೆಗೆ ಬಂದು,

ಅಷ್ಟುಬುದ್ಧಿವಂತಿಕೆಯಿಂದ, ತನಗೆ ಒಂದು ಗಂಟೆಗೆಂದು ಬರೆದಿ
ರುವ ಚೀಟಿಯನ್ನು ತಲಪಿಸುತ್ತಿದ್ದಳೆ? ಚೀಟಿಯು ಬಲೆಗೆ ಬಿದ್ದಿದೆ.
ಒಂದೊಂದುಸಲ ಮಾತ್ರ ಒಂದು ಪ್ರಶ್ನೆಯು ತಲೆದೋರುವುದು;
"ಸುಂದರಿಯು ಪರಸ್ತ್ರೀ! ಅವಳನ್ನು ತಾನು ಗ್ರಹಣಮಾಡುವುದೇ?"
ರಾಮಸ್ವಾಮಿಯು ಈ ಪ್ರಶ್ನೆ ಬಂದಾಗಲೆಲ್ಲಾ ಅಪ್ರತಿಭನಾಗು
ವನು. ಅವಾಕ್ಕಾಗುವನು. ಉತ್ತರ ಕೊಡಲಾರದೆ ಹೋಗು
ವನು. ಬೇರೆ ಏನೂ ತೋರದೆ "ಇರಲಿ! ಆ ವಿಚಾರ ಆಮೇಲೆ"
ಎನ್ನುವನು

ಆದರೂ ಕಾಯುವುದು ಮಾತ್ರ ಕೆಟ್ಟ ವೈರಿಗೂ ಬೇಡ.
ರಕ್ತವೇ ಕುದಿದು ಬಿಡುತ್ತದೆ. ರಾಮಸ್ವಾಮಿಯು ತಾನೇ ಎಷ್ಟು
ಹೊತ್ತು ಒಂದೆಡೆ ಕುಳಿತು ಕಾದಾನು? ಅಸಾಧ್ಯವಾಯಿತು. ಅಲ್ಲದೆ
ಅವನಿಗೂ ಬಹಳ ಹೊತ್ತಿನಿಂದ ಒಳಗೂ ಹೊರಗೂ ತಿರುಗಿ ತಿರುಗಿ
ಕೈಕಾಲು ನೋವು. ಏನುಮಾಡುವುದು? ಏನು ಮಾಡುವುದಕ್ಕೂ
ತೋರದು ನೋಡುವವರಿಗೆ ಚಿಕ್ಕದಾಗಿ, ನಿವಾರಿಸುವುದಕ್ಕೆ
ಅಸಾಧ್ಯವಾಗಿ, ಮನಸ್ಸಿಗೆ ಆಯಾಸವನ್ನುಂಟುಮಾಡಿ ಬಂದ ಕೋ
ಪವನ್ನು ತೀರಿಸಲು ದಾರಿಕಾಣದೆ ಕೋಪವನ್ನು ಸಂವರಣಮಾಡ
ಲಾರದೆ ಬೇಸರಪಟ್ಟುಕೊಳ್ಳುವಂತೆ ಮಾಡಿ ಗೋಳು ಹುಯ್ದು
ಕೊಳ್ಳುವ, ಮಾವಿನಹಣ್ಣಿನ ಕಾಲದಲ್ಲಿ ಮುತ್ತುವ ನೊಣದಂತೆ,
ಹೆಣ್ಣಿನ ಬಯಕೆಯು ನುಣ್ಣಗೆ ಮನಸ್ಸಿನಲ್ಲಿ ಮನೆಯನ್ನು ಮಾಡಿ
ರಲು ಸುಮ್ಮನೆ ಕುಳ್ಳಿರುವುದು ಹೇಗಾದೀತು?

ಒಳಗೆ ಹೋಗಿ ಯಾವುದಾದರೂ ಒಂದು ಪುಸ್ತಕವನ್ನಾದರೂ
ಓದೋಣವೆಂದುಕೊಂಡು ಹೋದನು. ದೀಪವನ್ನು ದೊಡ್ಡದು
ಮಾಡಿದುದಾಯಿತು. ಪುಸ್ತಕವನ್ನು ತೆರೆದುದಾಯಿತು. ಓದಬೇ
ಕೆನ್ನುವಷ್ಟರಲ್ಲಿ ಮನಸ್ಸು ಮತ್ತೊಂದುಕಡೆ ತಿರುಗಿ, "ಓದುವು
ದಿರಲಿ. ಅವಳು ಪರಸತಿಯಲ್ಲಾ!" ಎನ್ನಿಸಿತು. ಪುಸ್ತಕವನ್ನು
ಮುಚ್ಚಿ ಆತ್ತಿಟ್ಟನು. ಮತ್ತೆ ಅದೇ ಪ್ರಶ್ನೆ. ಅದೇ ಮೌನ. ಮೊದಲಿ

ನಂತೆಯೇ ಆ ವಿಚಾರ ಆಮೇಲಾಗಲೆಂದು ಸಿದ್ಧಾಂತ. ಇನ್ನೊಂದು
ಗಳಿಗೆಯಾಯಿತು. ಮತ್ತೆ ಒಳಗೆ ಹೋದನು. ಮತ್ತೊಂದು
ಪ್ರಶ್ನೆ ಹುಟ್ಟಿತು. "ಅವಳು ಬಂದರೆ ಎಲ್ಲಿ ಕುಳ್ಳಿರಿಸುವುದು?'
ಕುಳಿತಿದ್ದ ಮೆತ್ತೆಯ ಕುರ್ಚಿಯನ್ನು ಮಂಚದ ಬಳಿ ಎಳೆದು ಅಲ್ಲಿ
ಅವಳು ಬಂದು ಕುಳಿತಂತೆಯೂ, ತಾನು ಅವಳ ಪಾದ ಮೂಲ
ದಲ್ಲಿ ಕುಳಿತು, ತನ್ನ ಕಷ್ಟನಿಷ್ಠೂರಗಳ ಕಾರುಣ್ಯಪೂರ್ಣವಾದ
ಕೂರ್ಮೆಯ ಕಥೆಯನ್ನು ಹೇಳಿಕೊಳ್ಳುತ್ತಿರುವಂತೆಯೂ ಭಾವಿಸಿ
ಕೊಳ್ಳುತ್ತಾ, ಕಣ್ಣು ಮುಚ್ಚಿಕೊಂಡು ಭಾವನಾತರಂಗಿಣಿಯಲ್ಲಿ
ಮನಸ್ಸನ್ನು ಕೊಚ್ಚಿಬಿಟ್ಟು ಹಾಗೆಯೇ, ಆ ಕುರ್ಚಿಯಲ್ಲಿಯೇ
ತಾನರಿಯದೇ ಕುಳಿತುಬಿಟ್ಟನು.

---

## ದ್ವಿತೀಯ ಪರಿಚ್ಛೇದ

---

ಹಾಗೆಯೇ ನಿದ್ದೆ ಆದರಲ್ಲೊಂದು ಪುಟ್ಟಕನಸು. ಎಲ್ಲಿಯೋ
ಒಂದು ಕಿರುಮನೆ. ಪಟಗಿಟಗಳೇನೂ ಇಲ್ಲ. ಮೂಲೆಯಲ್ಲಿ
ಒಂದು ಹಾಸಿಗೆ ಹಾಸಿದೆ. ತಲೆದಿಂಬಿನ ಮಗ್ಗುಲಲ್ಲಿ ಒಂದು
ಬೆಳ್ಳಿಯ ತಟ್ಟೆ. ಅದರಲ್ಲಿ ಅಡಕೆಲೆ ಹೂವು ಇನ್ನೊಬ್ಬರು
ತಂದರೆ ಚೆನ್ನಾಗಿರುವುದಿಲ್ಲವೆಂದು ಅಂದಿನ ಮಧ್ಯಾಹ್ನ ತಾನೇ
ಮೈಸೂರಿಗೆ ಹೋಗಿ ಚಿಗುರೆಲೆಯನ್ನೂ, ಪರಿಮಳದ ಹೂವನ್ನೂ
ಸುಂದರಿಗೆಂದು ತಂದಿದ್ದನು. ನೋಡಿದರೆ ಅದೇ ಎಲೆ, ಅದೇ ಹೂ
ವೆಂದು ತೋರುತ್ತದೆ. ಅದರ ಮಗ್ಗುಲಲ್ಲಿ ಹಾಲು ತುಂಬಿರುವ
ಪೈಲು ಚೊಂಬೊಂದು. ತಾನು ಬಹಳ ಹೊತ್ತು ಕಾತರನಾಗಿ
ಕಾದಿದ್ದ ಮೇಲೆ ಸುಂದರಿಯು ಬಂದಿದ್ದಾಳೆ. ತನಗೆ ಖಂಡುಗ
ನಷ್ಟು ಆಸೆಯಿದ್ದರೂ ಧಾರಾಳವಾಗಿ ಬರಲಾರದೆ, ಹೆಜ್ಜೆಯಮೇಲೆ
ಹೆಜ್ಜೆಯನ್ನಿಟ್ಟುಕೊಂಡು, ಮನವು ಮೊದಲು ಹೋಗಿರುವೆಡೆಗೆ

ತನುವನ್ನು ನಡೆಸಿಕೊಂಡು ಹೋಗುವ ಹೊಳಪತಾಗಿ ಪ್ರಸ್ತಾವ
ಹುಡುಗಿ ಮದುವಣಗಿತ್ತಿಯಂತೆ, ಗಳಿಗೆಗೊಂದುಸಲ ಹೆಜ್ಜೆಯ
ನ್ನಿಟ್ಟುಕೊಂಡು ಬಂದಿದ್ದಾಳೆ. ಬಾಗಿಲಿಂದ ಹಾಸಿಗೆಗೆ ಸರಿಯಾಗಿ
ನಡೆದರೆ ಸುಮಾರು ಮೂರು ಹೆಜ್ಜೆಯಿರಬಹುದು. ನಾಚಿಕೆಯ
*ಹೆದ್ದ ಹಾಕಿದಂತೆ, ಆಸೆಯು ನೂಕಿದಂತೆ, ನಡೆವ ಅವಳಿಗೆ
ಅಲ್ಲಿಂದಲ್ಲಿಗೆ ಬರುವುದಕ್ಕೆ ಸುಮಾರು ಹೊತ್ತಾಗಿದೆ. ತಾನು
ಆ ವಿಳಂಬವನ್ನು ಸೈರಿಸಲಾರದೆ ಕೇವಲ ಕಾತರನಾಗಿ ಕೈನೀಡಿ ಕರೆ
ಯುತ್ತಿದ್ದಾನೆ. ಮಧುವ್ಯಥೆಯು ಹಿಡಿದು ಮಂಕಾಗಿರುವ ಮದ
ಗಜದಂತೆ ಅವಳೂ ಬಲುಮೆಲ್ಲಗೆ ನಡೆದುಬಂದು ಪಕ್ಕದಲ್ಲಿ ಕುಳಿತಿ
ದ್ದಾಳೆ. ತಾನೂ ಯೌವನಭರದಲ್ಲಿ, ಪೂರ್ಣವಾದ ಪ್ರೀತಿಯ
ಆವೇಶದಲ್ಲಿ, ಮಾತ್ರ ಸಾಧ್ಯವಾದ ಒಂದು ರಭಸದಿಂದ ಅವಳನ್ನು
ಬರಸೆಳೆದು ಅಪ್ಪಿಕೊಂಡು ಮುದ್ದಿಸಿದ್ದಾನೆ. ಸುಂದರಿಯು ಸ್ತ್ರೀ
ಸಹಜವಾದ ವೈಯ್ಯಾರದಿಂದ ಬಿಡಿಸಿಕೊಂಡು ಅತ್ತ ಸರಿದು
ಹಾಲಿನ ತಂಬಿಗೆಯನ್ನು ಕೈಗೆ ತೆಗೆದುಕೊಂಡಿದ್ದಾಳೆ. ಅದನ್ನು
ನೋಡಿ, ಉಕ್ಕುತ್ತಿದ್ದ ಸಂತೋಷ ಸಂಭ್ರಮಗಳು ಅಲ್ಲಿಯೇ
ತಟ್ಟನೆ ತಿರೋಧಾನವಾಗಿ, ಮುಖವು ಗಂಭೀರವಾಗಿದೆ. ಮೋಹಾ
ವೇಶಪರವಶನಾಗಿದ್ದ ಇವನಿಗೂ ಇದನ್ನು ನೋಡಿ, ಭಯವಾಗಿ,
ಅದೇನೆಂದು ನೋಡಿದ್ದಾನೆ. ಕೆಂಪಗೆ ಕಾಸಿದ ಗಮಗಮನೆ ನರು
ಗಂಪಿಡುವ, ಹಚ್ಚಗೆ ಕೆನೆಗಟ್ಟಿದ ಹಾಲಿನಲ್ಲಿ ಒಂದು ನೊಣ.
ಇಬ್ಬರಿಗೂ ಅಸಮಾಧಾನ. ಆದರೂ ರಾಮುವು "ಅದು ಹೋಗಲಿ
ನೀನಿರುವೆ" ಯೆಂದು ಅವಳನ್ನು ಮತ್ತೊಮ್ಮೆ ತಬ್ಬಿಕೊಳ್ಳಲು ಕೈ
ನೀಡಿದ್ದಾನೆ.

ಆವೇಳೆಗೆ ಬಾಗಿಲಲ್ಲಿದ್ದ ನಾಯಿ ಬಗುಳಿತು. ಕನಸು ಮುರಿದು
ಎಚ್ಚರವಾಗಿ ರಾಮುವು ಕಣ್ಣು ಬಿಟ್ಟನು. ಎದುರಿಗೆ ಗುಡಾರದ

---

* ತೇರುಗಳ ಚಕ್ರಗಳು ಅತ್ತಲಾಗಿ ಇತ್ತಲಾಗಿ ಹೋಗದೆ ಸರಿ
ಯಾಗಿ ನಡೆಯಲು ಅಡ್ಡಗಿಸುವ ಮರದ ತುಂಡು.

ಬಾಗಿಲು. ಬಾಗಿಲಿನಲ್ಲಿ ಸುಂದರಿಯು ಕರಿಯ ಸೀರೆಯುಟ್ಟು ನಿಂತಿದ್ದಾಳೆ. ಮೂಗಿನಲ್ಲಿ ಒಂದು ವಜ್ರದ ಮೂಗುಬಟ್ಟು. ಸಂಧ್ಯಾಕಾಲದ ಮೃದುವಾದ ಬಿಸಿಲು ಬಿದ್ದು ಉಜ್ವಲವಾಗಿ ಬೆಳಗುತ್ತಿರುವ ಮುಖವು ನಗೆಯನ್ನು ಸೂಸುತ್ತಿದೆ. ನೋಡಿದವರ ಮನಸ್ಸನ್ನು ಮೋಹಗೊಳಿಸಿ, ಸೂರೆಗೊಳ್ಳಲು ಬಂದಿರುವ ಮದನ ಮೋಹನ ಮಂತ್ರದಧಿದೇವತೆಯೋ ಎಂಬಂತಿದೆ.

ಆ ದಿವ್ಯ ಮೂರ್ತಿಯನ್ನು ನೋಡಿ ಭ್ರಾಂತನಾಗಿ ತರುಣನು 'ಸುಂದರಾ!' ಎಂದು ಒಣಗಿರುವ ಗಂಟಲಿನ ಕಿರಿಚು ಧ್ವನಿಯಲ್ಲಿ ಕೂಗಿಕೊಂಡು ಕೈ ನೀಡಿಕೊಂಡು ಮುಂದರಿದನು. ಬಾಗಿಲಿಗೆ ಬರುವುದರೊಳಗಾಗಿ ಉಟ್ಟಿದ್ದ ಪಂಚೆಯು ಕಾಲಿಗೆ ತೊಡರಿತು ಬಿದ್ದುಬಿಟ್ಟನು. ಮತ್ತೆ ಎದ್ದು ಕಣ್ಣುಬಿಟ್ಟು ನೋಡಿದರೆ ಯಾರೂ ಇಲ್ಲ. ಗುಡಾರದ ಬಾಗಿಲಿನಲ್ಲಿ ಇಳಿಯಬಿಟ್ಟಿದ್ದ ಕಡ್ಡಿಯ ಪರದೆಯು ನಟ್ಟಿರುಳಿನ ತಂಗಾಳಿಯಲ್ಲಿ ನರ್ತಿಸುತ್ತ ನಗುತ್ತಿದೆ. ಹೊರಕ್ಕೆ ಬಂದು ಸುತ್ತಲೂ ನೋಡಿದನು. ಎಲ್ಲಿಯೂ ಜನರ ಸುಳಿವೇ ಇಲ್ಲ.

ರಾಮ ಸ್ವಾಮಿಯು ಮುಂಕಾಗಿ ಹೋದನು. "ತಾನು ಸುಂದರಿಯ ಆಕಾರವನ್ನು ಕಂಡುದುಂಟು. ಬಂದಿದ್ದರೆ ಇಷ್ಟುಬೇಗ ಎಲ್ಲಿ ತಾನೆ ಹೋಗಿದ್ದಾಳು? ಅಥವಾ ಗಿಡದಮರೆಯಲ್ಲಿರಬಹುದೇ? ಹುಡುಗಿಯು ನಟ್ಟಿರುಳಿನಲ್ಲಿ ಮರೆಯಲ್ಲಿ ಮರೆಸಿಕೊಂಡು ಹುಡುಗಾಟವಾಡುವಳೇ? ನೋಡಿಬಿಡಬೇಕು." ಎನ್ನಿಸಿತು. ಹಾಗೆಯೇ ಹೊರಟನು. ಬಾಗಿಲಲ್ಲಿದ್ದ ನಾಯಿಯೂ ಜತೆಯಲ್ಲಿ ಬೇ ಬಂತು.

ಅಷ್ಟು ದೂರ ಹೋಗುವುದರೊಳಗಾಗಿ ನಾಯಿಯು ಏನನ್ನೋ ಕಂಡು ಬೊಗಳಿತು. ರಾಮುವು ಹಾಗೇ ನಿಂತು "ಇದನ್ನು ಬಿಚ್ಚಿದ್ದರೆ, ಅನರ್ಥ. ಗುಡಾರದಲ್ಲೂ ಇರಬಾರದು" ಎಂದುಕೊಂಡು,

ಹಿಂತಿರುಗಿ ಹೋಗಿ ಅದರ ಸರಪಣಿಯನ್ನು ತಂದು, ಗುಡಾರದ ಹಿಂದೆ ಸುಮಾರು ದೂರದಲ್ಲಿ ಒಂದು ಮರಕ್ಕೆ ಕಟ್ಟಿಹಾಕಿ, ತಲೆಯಮೇಲೆ ಒಂದು ಏಟು ಹೊಡೆದು "ಸದ್ದು ಮಾಡಿಯೆ" ಎಂದು ಹೊರಟುಹೋದನು. ಗುಪ್ತದಳದವರಲ್ಲಿ ತಯಾರಾದ ನಾಯಿ ಮತ್ತೆ ಉಸಿರೆತ್ತದೆ ಮಲಗಿಬಿಟ್ಟಿತು.

---

## ತೃತೀಯ ಪರಿಚ್ಛೇದ

---

ರಾಮುವು ಅತ್ತಕಡೆಗೆ ಹೋಗುತ್ತಲೇ ಒಂದು ವ್ಯಕ್ತಿಯು ಗುಡಾರವನ್ನು ಹೊಕ್ಕಿತು. ತಲೆಯಿಂದ ಕಾಲುವರೆಗೂ ಜೋಬ್ಬ ನಿಲುವಂಗಿಯಂತೆ ಕರಿಯ ಕಂಬಳಿಯು ಗೋಚರಿಸುತ್ತಿದೆ. ನಡುವಿನಲ್ಲಿ ಒಂದು ದೊಡ್ಡ ಚಾಕು. ಮೊಗಕ್ಕೆಲ್ಲಾ ಕೀಲೆಣ್ಣೆಯಂತಿರುವ ಮಸಿ. ನೋಡಿದರೆ ಭಯಂಕರ. ಯಾರೆಂದು ಗುರ್ತಿಸಲು ಸಾಧ್ಯವಿಲ್ಲ.

ಬಂದವನು ಮೊದಲು ಹೋಗಿ ದೀಪವನ್ನು ತಗ್ಗಿಸಿದನು. ಮೊದಲೇ ಹಸುರು ಬುರುಡೆಯ ದೀಪ. ಸಣ್ಣ ಮಾಡುತ್ತಲೇ ಬೆಳಕು ಇನ್ನೂ ಮಸಕಾಯಿತು. ಆ ಮಸಕಿನಲ್ಲಿಯೇ, ವ್ಯಕ್ತಿಯು ಏನನ್ನೋ ಹುಡುಕಲು ಮೊದಲು ಮಾಡಿದನು. ಇತ್ತ ತಿರುಗುವುದರೊಳಗಾಗಿ ಮಗ್ಗುಲಲ್ಲಿದ್ದ ಮೇಜು ಕಣ್ಣಿಗೆ ಬಿತ್ತು. ಅದರ ಮೇಲೆ ಒಂದು ವಿಲಾಯಿತಿ ಮಣ್ಣಿನ ಸುಮಾರು ಒಂದಡಿ ಎತ್ತರದ ಬೊಂಬೆ. ಅದಕ್ಕೆ ಕಲಾಬತ್ತಿನ ಸೀರೆಯುಡಿಸಿ, ಸಕಲವಾದ ಆಭರಣಗಳನ್ನು ತೊಡಿಸಿದೆ. ನವರಾತ್ರಿಯ ಬೊಂಬೆಯಂತೆ ಕಾಣುತ್ತದೆ. ಆ ಬೊಂಬೆಯು, ಎಳೆತನವು ಹೊರಸೂಸುತ್ತಿರುವ ಮುಖವು ಅವನಿಗೆ ಚಿರಪರಿಚಿತವಾಗಿರುವಂತೆ ಕಾಣುತ್ತಿದೆ. ಕಪ್ಪನಿಗೆ (ಅದು

ನಮ್ಮ ಊಹೆ. ಅನೇಕವೇಳೆ ಊಹೆಗಳು ನಿಜವಾಗುವುದೂ ಉಂಟು.) ಆ ಬೊಂಬೆಯನ್ನು ಮತ್ತೊಮ್ಮೆ ನೋಡಬೇಕೆನ್ನಿಸಿತು. ದೀಪವನ್ನು ದೊಡ್ಡದು ಮಾಡಿ, ಒಂದೆರಡು ಸಲ ರೆಪ್ಪೆ ಹುಯ್ಯುವಷ್ಟು ಹೊತ್ತು ನೋಡಿ, "ಅವಳೇ ಇರಬಹುದೇ?" ಎಂದುಕೊಂಡನು. ಬೊಂಬೆಯ ಮೇಲಿನ ಒಡವೆಗಳನ್ನು ನೋಡಿ "ಎಷ್ಟು ಬೆಲೆಯಾಗುವುದು! ಇಷ್ಟು ದುಡ್ಡಿದ್ದರೆ ಒಂದು ವಾರ ಆತಂಕವಿಲ್ಲದೆ ಆಡಿಕೊಳ್ಳಬಹುದು" ಎಂದುಕೊಂಡನು. ಆದರೆ ಏನನ್ನೂ ತೆಗೆದುಕೊಳ್ಳಲಿಲ್ಲ. ಅಲ್ಲದೆ, ನಿಂತು ಮುಂದೆ ನೋಡಲು ಅವಕಾಶವಿಲ್ಲ. ಅಲ್ಲಿಂದ ತಿರುಗಿದರೆ ಅದರ ಮಗ್ಗುಲಲ್ಲಿ, ಒಂದು ತಟ್ಟೆಯಲ್ಲಿ ಬಲು ಸೊಗಸಾದ ಚಿಗುರೆಲೆ. ಗಮ್ಮೆಂದು ತನಿಗಂಪನ್ನು ಬೀರುತ್ತಿರುವ ಜಾಜಿಯ ಒತ್ತುಸರ. ಅದರ ಮಗ್ಗುಲಲ್ಲಿ ಒಂದು ಕಾಗದದ ಮೇಲೆ ಸಂಪಿಗೆ ಹೂವಿನ ಪೊಟ್ಟಣವೊಂದು. ಕಾಗದದಲ್ಲಿ ಏನೋ ಬರವಣಿಗೆ. ಪೊಟ್ಟಣವನ್ನು ಜರುಗಿಸಿ ನೋಡಿದರೆ, ಹೆಂಗಸಿನ ಬರಹದಲ್ಲಿ "ಒಂದು ಗಂಟೆ" ಎಂದು ಬರೆದಿದೆ. ಬರಹದ ಗುರುತಿರುವಂತಿದೆ. "ಮತ್ತೆ ಅವಳೇನೋ?--ಇರಬಹುದ.——ಇದ್ದೀತೆ?—ಹಾಗಾದರೆ--" ಕಳ್ಳನಿಗೆ ಯೊಚನೆ ಬಂದಿತು. "ನಾನು ಇವನ ಹಣವನ್ನು ಕದಿಯುವುದಕ್ಕೆ ಬಂದರೆ, ಇವನು ಬಂದಿರುವುದು ತನ್ನ............?" ಕಳ್ಳನಿಗೆ ಮೈ ಜುಮ್ಮೆನ್ನಿಸಿತು. ಮುಂದಕ್ಕೆ ಯೋಚಿಸಲಿಲ್ಲ. ತನ್ನ ಕೆಲಸಕ್ಕೆ ಹೋದನು.

ಕೈ ಪೆಟ್ಟಿಗೆ ಮಂಚದ ಕೆಳಗೆ ಇದ್ದಿತು. ಕಳ್ಳನಿಗದನ್ನು ಕಂಡು ಹಿಡಿಯುವುದು ಕಷ್ಟವಾಗಲಿಲ್ಲ. ಅನುಕೂಲವಾಯಿತೆಂದು ಮಂಚದ ಕೆಳಗೆ ತೂರಿ, ಕೈ ಪೆಟ್ಟಿಗೆಯನ್ನು ಎಳೆದುಕೊಳ್ಳಬೇಕೆಂದು ಯತ್ನಿಸಿದನು. ಸರಪಣಿಯಿಂದ ಮಂಚದ ಕಾಲಿಗೆ ಕಟ್ಟಿರಲು ಅದಾಗಲಿಲ್ಲ ತಾನೇ ಮುಂದಕ್ಕೆ ಹೋದನು.

ಪೆಟ್ಟಿಗೆಯ ಬಾಗಿಲು ತೆರೆದುದಾಯಿತು. ಒಂದು ಮಗ್ಗುಲಲ್ಲಿ ರೂಪಾಯಿ ತುಂಬಿದ್ದಿತು. ಅದರಲ್ಲಿ ಲೆಖ್ಖಮಾಡಿ ನೂರು ರೂಪಾಯಿ

ತೆಗೆದುಕೊಂಡು, ಅದನ್ನು ಉಟ್ಟಿದ್ದ ಪಂಚೆಯ ಕೊನೆಯಲ್ಲಿ ಕಟ್ಟಿ, ನಡುವಿಗೆ ಸಿಕ್ಕಿಸಿಕೊಂಡು, ಮಂಚದಡಿಯಿಂದ ಹೊರಗೆ ಬಂದು ಸುತ್ತಲೂ ನೋಡಿದನು. ಯಾರೂ ಇದ್ದಂತೆ ಇರಲಿಲ್ಲ. ಹೊರಟು ಬಾಗಿಲಿಗೆ ಬಂದನು. ಒಂದು ಯೋಚನೆ ಹೊಳೆಯಿತು. "ಇದು ಸಾಲ ತೀರಿಸುವುದಕ್ಕಾಯಿತು. ಆಟಕ್ಕೆ ? ಇನ್ನೂ ರೂಪಾಯಿ ಇದೆ. ಒಂದು ಹಿಡಿಯಷ್ಟಾದರೂ ತಂದರೆ !" ಎಂದುಕೊಂಡನು. ಆಟದ ಆಶೆಯು ಬಲವಾಗಿ, ಮುಂದಕ್ಕೆ ಹೋಗಲಾರದೆ ಹಿಂದುರಿಗಿದನು, ಮತ್ತೆ ಮಂಚದಡಿಗೆ ಹೋಗಲು, ನಡುವಿನಲ್ಲಿ ಚಾಕೂ, ಹಣದ ಗಂಟು, ಚಾಕುವನ್ನು ತೆಗೆದು ಎಡಗೈಯಲ್ಲಿ ಹಿಡಿದುಕೊಂಡು, ಪೆಟ್ಟಿಗೆಯ ಬಾಗಿಲನ್ನು ತೆಗೆದು, ಒಂದು ಹಿಡಿ ಹಣವನ್ನು ತೆಗೆದುಕೊಂಡಿದ್ದಾನೆ. ಇನ್ನೂ ಅರೆಗಯ್ಯು ಪೆಟ್ಟಿಗೆಯ ಒಳಗೇ ಇದೆ. ಗುಡಾರದ ಹೊರಗೆ ಯಾರೋ ಮಾತನಾಡಿದಂತೆ ಆಯಿತು. ಕಳ್ಳನಿಗೆ ಜೀವವು ಹಾರಿ ಹೋದಂತಾಯಿತು. ಉಸಿರು ಗಟ್ಟಿಯಾಗಿ ಬಿಡದೆ, ಸದ್ದಾಗದಂತೆ ಪೆಟ್ಟಿಗೆ ಮುಚ್ಚಿ, ಅಲ್ಲಿಯೇ ಕಂಬಳಿಯನ್ನೆಳೆದುಕೊಂಡು ಕುಳಿತು ಕೊಂಡನು.

ಇತ್ತ ತಿರುಗಿ ನೋಡಲು, ಒಬ್ಬ ಗಂಡಸು ಒಳಗೆ ಬಂದನು. ಕಳ್ಳನಿಗೆ ಮಂಚದಡಿಯೇ ಸೆರೆಮನೆಯಾಯಿತು.



# ಐದನೆಯ ಭಾಗ



## ಹಿಂದಿನ ಕಥೆ

---

## ಪ್ರಥಮ ಪರಿಚ್ಛೇದ

---

ಬಂದವನು ರಾಮು. ನೇರವಾಗಿ ಹೋಗಿ ಮಂಚದ ಬಳಿಯಲ್ಲಿದ್ದ ಕುರ್ಚಿಯಲ್ಲಿ ಕುಳಿತನು. ಮಂಚದ ಕಡೆಗೆ ತಿರುಗಿಕೊಂಡಿದ್ದು ಕಾಲನ್ನು ನೀಡಿದ್ದರೆ ಕರಿಯ ಕಂಬಳಿಯು ಕಾಲಿಗೆ ತಗಲುತ್ತಿತ್ತೋ ಏನೋ!

ಅವನು ಬಂದ ಕೊಂಚ ಹೊತ್ತಿನಲ್ಲಿಯೇ ಮತ್ತೊಬ್ಬ ಹೆಂಗುಸು ಬಂದಳು. ಕಾಲಿನ ಸದ್ದಾಗದಂತೆ ಬಹಳ ಸಾಹಸದಿಂದ ನಡೆಯುತ್ತಿದ್ದಾಳೆ. ಮೈಯೆಲ್ಲಾ ಕಿರುಬೆವರಿಟ್ಟಿದೆ ಮುಖದಲ್ಲಿ ಗಾಬರಿಯು ತಾನೇ ತಾನಾಗಿದೆ. ಕಣ್ಣುಗಳು ಕಳವಳದಿಂದ ಕತ್ತಲೆ ಹಿಡಿದಂತೆ ಕಾಣುತ್ತವೆ. ಒಟ್ಟಿನಲ್ಲಿ ರೂಪವೇ ಬದಲಾಯಿಸಿ ಹೋಗಿದೆ. ಅವಳು ಬರುತ್ತಲೇ, ಬಾಗಿಲಿಗೆ ಬರುತ್ತಿದ್ದ ಹಾಗೆಯೇ ಅವಳನ್ನು ಬರಸೆಳೆದು ತಬ್ಬಿಕೊಳ್ಳುವೆನೆಂದು ಕುಣಿಯುತ್ತಿದ್ದ ರಾಮುವು ಅವಳನ್ನು ನೋಡಿ, ಕಾತರನಾಗಿದ್ದಾನೆ. ಅವಳನ್ನು ತಬ್ಬಿಕೊಳ್ಳುವುದಿರಲಿ, ಮಾತನಾಡಿಸುವುದಕ್ಕೂ ತೋರದೆ ಹೋಗಿ, ನಾಲಗೆಯೇ ಒಣಗಿ ಹೋಗಿದೆ. ಹಾಗೂ ಹೀಗೂ ಕಷ್ಟಪಟ್ಟು, "ಇದೇಕೆ? ಸುಂದರಾ! ಸ್ವಸ್ಥವಾಗಿಲ್ಲವೇ?" ಎಂ

ದನು. ಅವಳೂ "ಏನೋ? ಅದೊಂದೂ ಕೇಳಬೇಡ. ನೀನು ನನ್ನನ್ನು ಬರಹೇಳಿದುದೇಕೆ? ಅದನ್ನು ಮೊದಲು ಹೇಳು" ಎಂದಳು.

ರಾಮುವು ಏನೂ ಹೇಳಲಾರದೆ ಹೋದನು. ಒಂದು ಗಳಿಗೆ ಸುಮ್ಮನಿದ್ದು, ಸ್ವಲ್ಪ ಶಾಂತನಾಗಿ, "ಮೊದಲು ಬಾ. ಇಲ್ಲಿ ಕುಳಿತುಕೋ ಎಲ್ಲವನ್ನೂ ಹೇಳುವೆನು" ಎಂದವಳ ಭುಜವನ್ನು ಹಿಡಿದು ಕೂರಿಸಬೇಕೆಂದು ಕೈ ನೀಡಿದನು. ಹುಡುಗಿಯು ಅತ್ತ ಸರಿದಳು; ಗಂಟಿಕ್ಕಿದ ಹುಬ್ಬು ನೀಡಿದ ಕಯ್ಯನ್ನು ನಿರೋಧಿಸಿತು. ಹುಡುಗಿಯು ತಾನೇ ಹೋಗಿ ಅವನು ತೋರಿಸಿದ ಕುರ್ಚಿಯಲ್ಲಿ ಕುಳಿತುಕೊಂಡಳು ರಾಮುವು ಸಂಶಯ ಗ್ರಸ್ತನಾಗಿ ಬಂದರೇನೋ,–ಬರದಿದ್ದರೇನೋ–ಎಂಬಂತೆ, ಹಾಗೂ ಹೀಗೂ, ಬಂದು ಕುರ್ಚಿಯಬಳಿ ಮೇಜನ್ನೊರಗಿ ನಿಂತನು. ಇಬ್ಬರೂ ಮಾತನಾಡಲೊಲ್ಲರು.

ಕೊನೆಗೆ ಹುಡುಗಿಯೇ ಮಾತನಾಡಿದಳು. "ರಾಮೂ! ನನ್ನನ್ನು ಬರಹೇಳಿದುದೇಕೆ?" ಎಂದಳು. ರಾಮುವು ಕೊರಗಿ ಕುಗ್ಗಿರುವ ಸಣ್ಣ ಧ್ವನಿಯಿಂದ "ಸುಂದರಾ! ನನ್ನ ಆಶೆ!" ಎಂದನು. ಹುಡುಗಿಯ ಮೊಗವು ಗಂಭೀರವಾಯಿತು. ಹುಡುಗತನವಡಗಿ ಹೋಗಿ, ಸತಿಯ ಪವಿತ್ರ ತೇಜವು ತಟ್ಟನೆ ಮೊಗದಲ್ಲಿ ಕಾಣಿಸಿಕೊಂಡು-"ನನಗೆ ಮದುವೆಯಾಗಿದೆ. ನಾನೀಗ ನಿನಗೆ ಪರಸ್ತ್ರೀ" ಎಂದಳು. ರಾಮುವು ಸಣ್ಣಗೆ ನಗುತ್ತಾ "ಸುಂದರ! ಹಾಗಾದರೆ ಇಲ್ಲಿಗೆ ಬಂದೆ ಏಕೆ?" ಎಂದನು. ಹುಡುಗಿಯು ನಡುಗಿದಳು. ಹೃದಯವು ಇನ್ನೂ ಕಠಿಣವಾಗಿ, ಕುರ್ಚಿಯಲ್ಲಿ ಸರಿಯಾಗಿ ಕುಳಿತುಕೊಂಡು "ನಾನು ಬಂದುದು ಸ್ವೈರಿಣಿಯಂತಲ್ಲ; ಸೋದರಿಯಂತೆ. ನೀನು ಬೇರೆ ಭಾವಿಸುವುದಾದರೆ ಇದೋ ಹೊರಟೆ!" ಎಂದೆದ್ದಳು.

ರಾಮುವು ಅಪ್ರತಿಭನಾಗಿ, “ಇಲ್ಲ ಇಲ್ಲ. ಸುಂದ... ನೀನು ಕುಳಿತುಕೋ. ನನ್ನ ಎರಡು ಮಾತು ಕೇಳಿ ಹೊರಟು ಹೋಗುವೆಯಂತೆ. ಕುಳಿತುಕೋ” ಎಂದನು. ಹುಡುಗಿಯು ಮತ್ತೆ ಕುಳಿತಳು.

ಮಂಚದ ಕೆಳಗೆ ಕುಳಿತಿದ್ದ ವ್ಯಕ್ತಿಯು ಹಾಗೆಯೇ ಸದ್ದಾಗದಂತೆ ಒಂದು ನಿಟ್ಟುಸಿರನ್ನು ಬಿಟ್ಟನು.

ರಾಮುವು ಆರ್ತನಾಗಿ ಹೇಳಿಕೊಂಡನು. ಹುಡುಗಿಯೂ ನೀರವವಾಗಿ ಕೇಳಿದಳು. “ನಾನೂ ಯೋಚಿಸಿದೆ. ನಿನ್ನೆಯ ದಿನ ನೀನೆಂದಂತೆ ತಪ್ಪು ನನ್ನದೇ ಸುಂದರ! ಅಮ್ಮನ ಮಾತನ್ನು ನಾನೇಕೆ ಮೀರಬಾರದಾಗಿದ್ದಿತ್ತು? ಮೀರಿದ್ದರೆ ನಾವಿಬ್ಬರೂ ಗಂಡ ಹೆಂಡಿರಾಗಿ ಎಷ್ಟು ಸುಖವಾಗಿರಬಹುದಾಗಿದ್ದಿತು!” ಎಂದನು. ಮುಂದೆ ಹೇಳುವುದರೊಳಗಾಗಿ ಹುಡುಗಿಯು ಅಡ್ಡಗಿಸಿ, “ನಾನು ನಿನ್ನೆಯೇ ಹೇಳಲಿಲ್ಲವೇ? ಕಳೆದುದನ್ನು ಕೆಣಕಬೇಡವೆಂದು! ಮತ್ತೇಕೆ? ಈಗ ಇಷ್ಟು ಹೇಳುವವನು ನೀನಿರುವೆಡೆಯನ್ನೂ ತಿಳಿಸದೆ ಹೊರಟು ಹೋದೆಯೇಕೆ? ನಾನು ಕೊನೆಗೆ ಅಮ್ಮನನ್ನೂ, ಅಯ್ಯನನ್ನೂ ಒಪ್ಪಿಸಿದ್ದೆ. ಅವರೂ ನನ್ನನ್ನು ನಿನಗೆ ಕೊಡುವುದಕ್ಕೆ ಒಪ್ಪಿದ್ದರು” ಎಂದಳು ರಾಮುವು ಪೆಚ್ಚಾಗಿ “ನನಗೆ ಹುಚ್ಚು ಹಿಡಿದಂತಾಯಿತು. ಸುಂದರ! ಅಮ್ಮನೂ ಆಗಕೂಡದೆಂದು ಹಟ ಹಿಡಿದಳು. ಅಮ್ಮನಾಡಿದ ಮಾತನ್ನು ಕೇಳಿ, ಅತ್ತೆಯು ಈಗಲೇ ಬಡವರ ಮನೆಯ ಹೆಣ್ಣೆಂದು ಹಿಯ್ಯಾಳಿಸುತ್ತಾರೆ. ಮದುವೆಯಾದ ಮೇಲೆ ಬಾಳಿಸುವುದಿನ್ನೆಂತೋ ಕೊಡಕೂಡದು ಎಂದುಬಿಟ್ಟಳು. ಕಡೆಗೆ ಹೋಗಿ ಅಯ್ಯನೊಡನೆ ಹೇಳಿಕೊಂಡೆ. ಅಯ್ಯನು, ‘ನೀನುಂಟು ನಿಮ್ಮ ಅಮ್ಮನುಂಟು’ ಎಂದು ಬಿಟ್ಟ. ಏನು ಮಾಡಬೇಕು? ಮಾವನಿಗೆ ಮೊದಲೇ ಆಗದು. ಅತ್ತೆಗೆ ಅಮ್ಮನ ಮೇಲೆ ಕೋಪ. ಇನ್ನಾಗುವುದೆಂತು? ಕಡೆಯ

ಲಾರದ ದುಃಖ ಬಂದು, ಆ ದುಃಖದಲ್ಲಿ ಪ್ರಾಣವನ್ನೇ ಕಳೆದು
ಕೊಳ್ಳಬೇಕೆಂದಿದ್ದೆ. ಬದುಕಿದ್ದರೆ ಒಂದು ದಿನವಾದರೂ ನಿನ್ನನ್ನು
ನೋಡಬಹುದು ಎಂದು ಒಂದು ಸಣ್ಣ ಆಶೆ ಆದರಿಂದ ಪ್ರಾಣ
ಬಿಡಲಿಲ್ಲ. ಈಗ ನಿನ್ನನ್ನು ನೋಡಿದೆ ನೀನು ಇಷ್ಟು ನಿಷ್ಠುರ
ಳಾಗಿರುವೆ. ಇನ್ನು ನಾನು ಬದುಕಿ ಫಲವೇನು? ನಿನ್ನನ್ನು ನೋಡಿದೆ
ನಲ್ಲ. ಅಷ್ಟೇ ಸಾಕು. ಈ ಜನ್ಮದಲ್ಲಿ ಇದೇ ಕೊನೆಯ ದರ್ಶನ.
ನೀನಿನ್ನು ಹೋಗು" ಎಂದನು ಯುವಕನ ಮಾತಿನಲ್ಲಿ, ಎಲ್ಲ
ವನ್ನೂ ಸಂಪೂರ್ಣವಾಗಿ ಕಳೆದುಕೊಂಡವನ ನಿರಾಶೆಯು ತಾನೇ
ತಾನಾಗಿದ್ದಿತು. ಮಾತುಮಾತಿನಲ್ಲಿಯೂ ಟೊಳ್ಳು ಸದ್ದುಬಡಿದು
ಎದೆಯು ಝಲ್ಲೆನ್ನುತ್ತಿದ್ದಿತು.

---

## ದ್ವಿತೀಯ ಪರಿಚ್ಛೇದ

---

ಹುಡುಗಿಯು ಕದಲಲಿಲ್ಲ. ಕುರ್ಚಿಯ ತೋಳಿನಮೇಲೆ
ಕೈಯ್ಯೂರಿಕೊಂಡು, ಅಂಗೈಯಲ್ಲಿ ಕೆನ್ನೆಯನ್ನಿಟ್ಟುಕೊಂಡು, ಹಾಗೆ
ಯೇ ಕೇಳುತ್ತ ಕುಳಿತುಬಿಟ್ಟಳು. ವರ್ಷಾಂತರಗಳ ಹಿಂದೆ ನಡೆದಿದ್ದು
ದೆಲ್ಲವೂ ನೆನಪಿಗೆ ಬಂದು ಬಿಟ್ಟಿತು ತನ್ನ ತಾಯಿಯು ಸಾಯು
ವಾಗ ತನ್ನನ್ನು ಕರೆದು ಹತ್ತಿರ ಕುಳ್ಳಿರಿಸಿಕೊಂಡು, "ನಾನು
ಹೋದರೆ ನೀನು ತಬ್ಬಲಿಯಾಗುವೆಯಲ್ಲೇ!" ಎಂದು ಅತ್ತಿದ್ದುದು
ಮತ್ತೆ ನೆನಪಿಗೆ ಬಂದು ಅವಳಿಗೆ ಬಲು ದುಃಖವಾಯಿತು. ಕಣ್ಣಿ
ನಲ್ಲಿ ಎರಡು ತೊಟ್ಟು ನೀರೂ ಬಂದಿತು.

ರಾಮುವು ಮತ್ತೆ ಹೇಳಿದನು "ನಾನು ದುಃಖವನ್ನು ತಡೆ
ಯದೆ ದೇಶಾಂತರ ಹೊರಟು ಹೋದೆ. ಸುಂದರ! ಎರಡು ವರು
ಷದ ದಿನ ಹುಚ್ಚು ಹಿಡಿದವನಂತೆ ಅಲೆದುಬಿಟ್ಟೆ. ದಿನವೂ ಬೆಳಗಾ

ಗುತ್ತಿದ್ದಿತು. ಸಂಜೆಯಾಗುತ್ತಿದ್ದಿತು. ನನಗೆ ತಿಳಿಯುತ್ತಿದ್ದುದು ಅಷ್ಟೆ. ಒಂದು ದಿನವಾದರೂ ನನಗೆ ಸುಖವಿಲ್ಲ. ಬರುತ್ತಬರುತ್ತ ಅನ್ನವು ತಪ್ಪಿಹೋಯಿತು. ನಿದ್ದೆಯೂ ಹೋಯಿತು. ಯಾವಾಗಲೂ ಚಿಂತೆಯೇ ಆಯಿತು. ಈ ಹುಚ್ಚಿನಲ್ಲಿ ತಿರುಗುತ್ತಿರುವಾಗ ಯಾರೋ ನಮ್ಮೂರಿನವರು ನೋಡಿ ಅಪ್ಪನಿಗೆ ಬರೆದರಂತೆ. ಅವರೂ ಬಂದರು. ಮಾಸಿದ ಬಟ್ಟೆಯನ್ನುಟ್ಟು ಗಡ್ಡ ಮೀಸೆಗಳನ್ನು ಬೆಳೆಯಿಸಿಕೊಂಡು ನಿಂತಲ್ಲಿ ನಿಲ್ಲದೆ ಅಲೆಯುತ್ತಿದ್ದ ನನ್ನನ್ನು ಹಿಡಿದುಕೊಂಡು ಬಂದು ಅಮ್ಮನನ್ನು ಕೂಗಿ "ಎಲೇ! ನಿನ್ನ ಮಗನನ್ನು ನೋಡಿ ಸಂತೋಷಪಡು. ಹೆತ್ತ ಹೊಟ್ಟೆಗೆ ಹಾಲು ಹುಯ್ದುಕೋ" ಎಂದರು. ಅಮ್ಮನೂ ಈಚೆಗೆ ಬಂದು ನನ್ನನ್ನು ನೋಡಿ ಬಿಕ್ಕಳಿಸಿ ಬಿಕ್ಕಳಿಸಿ ಅತ್ತಳು. "ನನ್ನ ದುರ್ಬುದ್ಧಿಯೇ!" ಎಂದು ಕಣ್ಣೀರು ಕರೆದು ಬೇಕಾದಷ್ಟು ಬಯ್ದುಕೊಂಡಳು. ಅವೊತ್ತಿಗೆ ನಿನಗೆ ಮದುವೆಯಾಗಿ ಎಂಟು ದಿನವಾಗಿತ್ತಂತೆ" ಎಂದನು.

ಎದುರಿನಲ್ಲಿ ಕುಳಿತವರು ಸುಖದುಃಖಗಳನ್ನು ಹೇಳಿಕೊಳ್ಳುತ್ತಿದ್ದರೆ ತಾವು ತಮ್ಮ ಕಥೆಯನ್ನು ಹೇಳದೆ ಕುಳ್ಳಿರುವುದು ಬಲು ಕಷ್ಟ. ಹುಡುಗಿಯೂ ವಿಷಣ್ಣೆಯಾಗಿ ಹೇಳಿದಳು. "ಹೌದು. ರಾಮು! ನೀನು ದೇಶಾಂತರ ಹೋದೆ. ನನಗೂ ಸನ್ನಿಯಾಗಿ ಆರು ತಿಂಗಳು ಹಾಸಿಗೆ ಹತ್ತಿ ಬಿದ್ದಿದ್ದೆ. ಆ ಸನ್ನಿಯಲ್ಲಿ ನಾವಿಬ್ಬರೂ ಆಡಿಕೊಂಡಿದ್ದ ಮಾತುಗಳೆಲ್ಲ ಹೊರಬಿದ್ದು ಅಮ್ಮನಿಗೂ ಅಪ್ಪನಿಗೂ ಹೃದಯ ಶಲ್ಯವಾಯಿತು. ಹೆಚ್ಚು ಹೇಳಲೇನು? ಅದೇ ಮೂಲವಾಗಿ, ಅಮ್ಮನು ಕೊರಕೊರಗಿ ಪ್ರಾಣಬಿಟ್ಟಳು. ಅಪ್ಪನು ಅನೇಕ ವೇಳೆ ಅಮ್ಮನೊಡನೆ "ಹತ್ತು ಹನ್ನೊಂದು ವರುಷದ ರಂಡೆಗೆ, ಇವಳಿಗೆ ಗಂಡನೆಂದರೆ ಏನು ಗೊತ್ತು? ಬೊಂಬೆಯಿಟ್ಟುಕೊಂಡು ಆಡುವ ವಯಸ್ಸಿನವಳಿಗೆ ಮದುವೆಯೆಂದರೇನು ಗೊತ್ತು?" ಎಂದಿದ್ದೆ. ಮುಖ್ಯ ನಾವು ಇವರಿಬ್ಬರನ್ನು ಮೊದಲಿಂದ ಒಟ್ಟು ಸೇರಿಸಬಾರದಾಗಿತ್ತು." ಎನ್ನುತ್ತಿದ್ದನು. ಕೊನೆಗೆ ನಮ್ಮವರೆಲ್ಲರಿಗೂ ಈ ಕಥೆಯು ತಿಳಿದುಹೋಗಿ ಯಾರೂ ನನ್ನನ್ನು ಮದುವೆ

ಮಾಡಿಕೊಳ್ಳದೆ ಹೋದರು. ಎಲ್ಲರೂ ಯಾರನ್ನು ಕೇಳಿದರೂ "ಹೂ! ಅವಳನ್ನು ಮದುವೆ ಮಾಡಿಕೋ! ಆಚೆಯ ಮನೆ ರಾಮ ಸ್ವಾಮಿಯು ಬಂದರೆ ಅವಳು ಓಡಿಹೋಗುತ್ತಾಳೆ" ಎನ್ನುವರು. ಅಪ್ಪನೂ ಬಹಳ ಕಾಯ್ದನು. ಅಲ್ಲದೆ ಅಮ್ಮನೂ ಸಾಯುವಾಗ, ಮಾವನನ್ನೂ ಅತ್ತೆಯನ್ನೂ ಕರೆಯಿಸಿಕೊಂಡು, "ಅತ್ತಿಗೆ! ಸುಂದರಿ ನಿನ್ನ ಮಗಳು. ನನ್ನ ಮಗುವಲ್ಲ. ರಾಮೂ ಹಿಂತಿರುಗಿ ಬಂದರೆ ಅವನಿಗೇ ಕೊಟ್ಟು ಮದುವೆ ಮಾಡು" ಎಂದು ಹೇಳಿ ಸತ್ತುಹೋದಳು. ಅತ್ತೆಯೂ ಒಪ್ಪಿದ್ದಳು. ನೀನು ಬರಲಿಲ್ಲ. ಮದುವೆಯಿಲ್ಲದೆ ಎಷ್ಟುದಿನ ಇರಲಾದೀತು? ನೆರೆಹೊರೆಯವರೆಲ್ಲರೂ "ಬಸವಿ ಬಿಡುತ್ತಾರೆ ಕಾಣಿರೋ. ಹುಡುಗಿ ಚನ್ನಾಗಿದೆ" ಎನ್ನು ವರು. ಅಪ್ಪನೂ ಸೈರಿಸಲಾರದೆ, ಕೊನೆಗೆ ಬೆಂಗಳೂರಿಗೆ ಹೋಗಿ ಅಲ್ಲಿ ಓದುತ್ತಿದ್ದ ಯಾವುದೋ ಊರಿನವನೊಬ್ಬನನ್ನು ನೋಡಿ ಕೊಂಡು ಬಂದನು. ಇನ್ನು ಅವನನ್ನು ಮೈಸೂರಿಗೆ ಕರೆದುಕೊಂಡು ಬಂದರೆ, ಕಥೆಯನ್ನು ಕೇಳಿಯಾನು ಎಂದು, ನನ್ನನ್ನು ಅಲ್ಲಿಗೇ ಕರೆದುಕೊಂಡು ಹೋದರು ಅವನೂ ನನ್ನನ್ನು ನೋಡಿ ಒಪ್ಪಿ ದನೋ ಇಲ್ಲವೋ? ಅಂತೂ ಅಪ್ಪನು ಕೊಟ್ಟ ಥೈಲಿ ಹಣಕ್ಕಾಗಿ ಮದುವೆಯಾದನು. ಮದುವೆಯೂ ಪಶ್ಚಿಮವಾಹಿನಿಯಲ್ಲಿ ಆಯಿತು ಹೆಸರಿಗೆ. ಆವೇಳೆಗೆ ನಾನು ಮೈನೆರೆದು ಎರಡುತಿಂಗಳಾಗಿ ದ್ದಿತು. ಇನ್ನು ಆ ಕಥೆಯಲ್ಲಾ ಏಕೆ?" ಎಂದಳು.

ಮಂಚದ ಕೆಳಗಿದ್ದ ವ್ಯಕ್ತಿಗೆ ಒಂದು ಸಂದೇಹವಿದ್ದಿತು. ತಾನು ಓದುವುದರಲ್ಲಿ ಅಷ್ಟೇನೂ ಮುಂದಾಗಿರಲಿಲ್ಲ. ಭಿಕ್ಷಾನ್ನ ವೆತ್ತಿಕೊಂಡು, ಅದೂ ಹಗಲು ಹೋದರೆ ನಾಚಿಗೆಗೇಡೆಂದು ರಾತ್ರಿ ಹೋಗಿ ಹೊಟ್ಟೆ ಹೊರೆದುಕೊಳ್ಳುತ್ತಿದ್ದವನಿಗೆ ಐನೂರು ರೂಪಾಯಿ ವರದಕ್ಷಿಣೆಯನ್ನು ಕೊಟ್ಟರಲ್ಲಾ ಎಂದು ಒಂದು ದೊಡ್ಡ ಆಶ್ಚರ್ಯ ವಾಗಿತ್ತು. ಕಾರಣವು ತಿಳಿಯಿತು. ಅಲ್ಲಿಯೇ ನಿಟ್ಟುಸಿರು ಬಿಟ್ಟನು. ನಿಟ್ಟುಸಿರಿನ ಸದ್ದು ಮಾತ್ರ ಯಾರಿಗೂ ಕೇಳಲಿಲ್ಲ.

# ತೃತೀಯ ಪರಿಚ್ಛೇದ

ರಾಮುವು ಹೇಳತೊಡಗಿದನು. "ಸುಂದರ! ಹೋಗಲಿ. ನೀವು ಗಂಡಹೆಂಡಿರು ಸುಖವಾಗಿದ್ದೀರಾ? ಅದಾದರೂ ಹೇಳು. ಅದನ್ನಾದರೂ ಕೇಳಿ ಸಂತೋಷಪಡುವೆನು" ಎಂದನು. ಮಂಚದ ಕೆಳಗಿದ್ದ ವ್ಯಕ್ತಿಗೆ ಎದೆಯು ಹಾರಿತು. ಹುಡುಗಿಯು ಏನು ಉತ್ತರ ಕೊಡುವಳೋ?

ಹುಡುಗಿಯು ಒಂದು ಗಳಿಗೆ ಸುಮ್ಮನಿದ್ದಳು. ಆಮೇಲೆ "ನೀನೀ ಪ್ರಶ್ನೆಯನ್ನು ಕೇಳುವೆಯೆಂದು ನನಗೆ ಮೊದಲೇ ಗೊತ್ತು ಆದರೆ ಆ ಪ್ರಶ್ನೆಗೆ ಉತ್ತರವನ್ನು ಹೇಳುವುದು ನನಗೆ ಸಮ್ಮತವಿಲ್ಲ" ಎಂದಳು. ಹುಡುಗಿಯ ಮಾತು ಖಂಡಿತವಾಗಿದ್ದರೂ ಮನಸ್ಸು ಅಲ್ಲೋಲಕಲ್ಲೋಲವಾಗಿದೆಯೆಂಬುದು ಮಾತ್ರ ಒಡೆದು ಕಾಣುದ್ದಿತು. ರಾಮಸ್ವಾಮಿಯು ಮುಂದೆ ಉತ್ತರಕ್ಕೆ ಒತ್ತಾಯ ಮಾಡಲಿಲ್ಲ.

ಮಾತು ಹೊರಳಿಸಿ, "ಈ ದಿನಗಳಲ್ಲಿ ಒಂದು ದಿವಸವಾದರೂ ನನ್ನನ್ನು ನೆನೆಸಿಕೊಂಡೆಯಾ? ಸುಂದರ! ಈ ನಿರ್ಭಾಗ್ಯನ ನೆನೆವು ನಿನಗೆ ಇದ್ದಿತೆ? ಅಥವಾ ಇರುವುದಕ್ಕೆ ಕಾರಣವಾದರೂ ಏನು?" ಎಂದನು. ಸುಂದರಿಯು ಅರಳಿದ ಕಣ್ಣಿಂದ ಬಿರಬಿರನೆ ಕೊಂಚ ಹೊತ್ತು ನೋಡಿ, ನಿಟ್ಟುಸಿರೊಂದು ಬಿಟ್ಟು, ಸುಮ್ಮನಾದಳು. ಅವನ ಪ್ರಶ್ನೆಗೆ ಉತ್ತರವೇನೋ ಬಂದಿತು. ರಾಮುವು ತಲೆಯನ್ನು ತಗ್ಗಿಸಿಕೊಂಡು ಮತ್ತೆ ಹೇಳಿದನು ನಿನ್ನನ್ನು ನೋಡಬೇಕೆಂಬ ಆಶೆ ಬಹಳವಿದ್ದರೂ, ನಿನ್ನನ್ನು ನೋಡುವುದಕ್ಕೆ ಏಕೋ ಹೆದರಿಕೆಯಾಗುತ್ತಿದ್ದಿತು. ನೀನು ಇಲ್ಲಿರುವುದನ್ನು ನಾನು ಬಲ್ಲೆ. ಆದರೆ ನೇರವಾಗಿ ಬರಲಾರದೆ ಹೋದೆ ಅಲ್ಲದೆ ಮಾವನಿಗೆ ಮುಖವನ್ನು ತೋರಿಸಲು ಇಷ್ಟವಿಲ್ಲ. ಯಾವಾಗಲೂ ನಿನ್ನನ್ನೇ ಕುರಿತು ಚಿಂತಿ

ಸುತ್ತಿದ್ದರೂ, ನಿನ್ನನ್ನು ನೋಡಲು ಒಂದು ವಿಧದ ಕಳವಳವು ಹಾದಿಗೊಡಲಿಲ್ಲ. ನಿನ್ನ ರೂಪವು ಕಣ್ಣಿಗೆ ಕಟ್ಟಿರುವುದು. ಯಾವಾಗಲೂ ಯಾವ ಕೆಲಸ ಮಾಡುತ್ತಿದ್ದರೂ, ನೀನು ಜತೆಯಲ್ಲಿಯೇ ಇರುವಂತೆ ಇರುವುದು. ನಿನ್ನ ಸಣ್ಣಕೊರಳಿನ ಮೃದು ಮಾತುಗಳು ಕಿವಿಯಲ್ಲಿ ಜನುಗುತ್ತಲೇ ಇರುವುವು. ನಾವಿಬ್ಬರೂ ಸಣ್ಣ ಹುಡುಗರಾಗಿರುವಾಗ ಹಿಂದೊಂದು ದಿನ ನಾನು ತುಂಬಿದ ಬೆಳದಿಂಗಳಲ್ಲಿ ನಿನ್ನ ತೊಡೆಯಮೇಲೆ ತಲೆಯನ್ನಿಟ್ಟು ಕೊಂಡು ಮಲಗಿದ್ದೆ. ನೀನು ಯಾವುದೋ ಹಾಡು ಹೇಳಿ ಕೈಬಳೆಯ ತಾಳದೊಡನೆ ತಟ್ಟುತ್ತಿದ್ದೆ. ನನಗೆ ಹಾಗೆಯೇ ಸಣ್ಣಗೆ ಜೊಂಪು ಹತ್ತಿತು. ಅತ್ತೆಯು ಆಗ ಬಂದು, " ಇದೇನೇ ಇದು ? " ಎಂದಳು. ನೀನು ನಾಚಿಗೆಯಿಂದ ನನ್ನ ತಲೆಯನ್ನು ತೆಗೆದು ಕೆಳಗಿರಿಸಿ ಓಡಿಹೋದೆ. ನನಗೂ ಎಚ್ಚರವಾಯಿತು. ನಾನೂ ಅತ್ತೆಯನ್ನು ಕಂಡು ಓಡಿಹೋದೆ ನಿತ್ಯವೂ ನನಗೆ ಕಣ್ಣು ಮುಚ್ಚಿದರೆ ಅದೇ ಕನಸು. ಅದೇ ಹತ್ತು ವರುಷದ ಸುಂದರ. ನಾನೂ ಅದೇ ಹುಡುಗ. ಮತ್ತೆ ನಾವು ಆಡುವುದು ಅದೇ ಆಟ ಅದೇ ನೆನಪಿನಲ್ಲಿಯೇ, ಕಣ್ಮುಚ್ಚಿಕೊಂಡು ಸುಖಪಡುತ್ತ ಹೊರಗಿನ ಪ್ರಪಂಚವನ್ನೇ ಮರೆತಿದ್ದೇನೆ. ಸುಂದರ ! ನಾನು ನಿನ್ನನ್ನು ಇದಕ್ಕೆ ಮೊದಲೇ ನೋಡಬಹುದಾಗಿತ್ತು. ಅದೇನೂ ಕಷ್ಟವಿರಲಿಲ್ಲ. ಆದರೆ ನಿನ್ನನ್ನು ಕಂಡರೆ ನನಗೆ ಮೈಮರೆವುದೆಂದಿದ್ದೆ. ಕೆಳಗೆ ಬಿದ್ದುಹೋಗುವೆನೆಂದಿದ್ದೆ. ಅಲ್ಲದೆ ನನ್ನ ಸೌಖ್ಯದ ಅಧಿದೇವತೆಯು ಸೊದೆಗಣಿಯಾದ ನನ್ನ ಇನಿಯಳು ಪರನ ಪಾಲಾಗಿರಲು ನಾನೆಂತು ನೋಡಲೆಂದು ನೋಡಲಿಲ್ಲ. ಸುಂದರ ! ನನ್ನ ಆಳುಗಳಿಂದ ನಿನ್ನ ಸ್ಥಿತಿಗತಿಗಳನ್ನೆಲ್ಲಾ ತಿಳಿದುಕೊಂಡೆ ನೀನು ಹಗಲಿರುಳೆನ್ನದೆ ಕಣ್ಣೀರಲ್ಲಿ ಕಯ್ತೊಳೆಯುತ್ತಿರುವುದೂ ತಿಳಿಯಿತು. ನಿನ್ನ ಗಂಡನು ನಿನ್ನ ವಿಚಾರದಲ್ಲಿ ಉದಾಸೀನನಾಗಿರುವುದೂ ತಿಳಿಯಿತು, ಅನೇಕ ವೇಳೆ ಅದಕ್ಕೆ ಪ್ರತೀಕಾರ ಮಾಡಬೇಕೆಂದುಕೊಂಡೆನು. ನನ್ನ ಮುದ್ದಿನ ಮನದನ್ನೆಗೆ, ನನ್ನರಗಿಣಿಗೆ, ಮನೋಮೋಹನೆಗೆ, ಮನ

ಸ್ಸಿಗೆ ವ್ಯಥೆಯನ್ನುಂಟುಮಾಡುವ ನಾ—(ತರುಣನು ನಾಲಗೆಯನ್ನು ಕಚ್ಚಿಕೊಂಡನು) ವ್ಯಥೆಯನ್ನುಂಟುಮಾಡುವವನಿಗೆ ಪ್ರತೀಕಾರ ಮಾಡಬೇಕೆಂದು ಕೃತನಿಶ್ಚಯನಾದೆನು. ಆದರೆ ನಿನಗದು ಸಮ್ಮತವೋ, ಅಸಮ್ಮತವೋ ಅದನ್ನು ತಿಳಿಯಲಾರದೆ ಸುಮ್ಮನಿದ್ದೆನು. ಸುಂದರ ! ಕೊನೆಗೆ ಮನಸ್ಸು ತಡೆಯಲಾರದೆ ಹೋಯಿತು. ಪ್ರತೀಕಾರ ಮಾಡಿಯೇ ಬಿಡುವೆನೆಂದು ಬಂದಿದ್ದೇನೆ.'' ಎಂದನು. ತರುಣನು ತಗ್ಗಿನ ದನಿಯಲ್ಲಿ ಮಾತನಾಡುತ್ತಿದ್ದರೂ, ಬಾಯಲ್ಲಿಂದು ನನ್ನ ಕಯ್ಯಲ್ಲಿ ಮಾಡುವವನ ಮನಸ್ಸಿನ ಕಾಠಿಣ್ಯವು ಚೆನ್ನಾಗಿ ತೋರುವಂತಿತ್ತು.

ಹುಡುಗಿಗೆ ಸಮಾಧಾನದ ಸಣ್ಣ ನಗು. ಮೊಲ್ಲೆಯ ಮೊಗ್ಗೆಯಂತೆ ಅಂದವಾದ ಹಲ್ಲು ಚೆಂದುಟಿಯ ನಡುವೆ ತಲೆಹಾಕುತ್ತಿರಲು, ' ಪ್ರತೀಕಾರವೇನೋ?'' ಎಂದಳು. ಈ ಇಬ್ಬರ ಭಾವವೂ ಓಂಗಿರುವುದನ್ನು ತಿಳಿದು ಮಂಚದ ಕೆಳಗಿನ ವ್ಯಕ್ತಿಗೆ ಮೈಬೆವರಿಟ್ಟಿತು. ಅವನು ಭಯಂಕರವಾದ ನೋಟವನ್ನು ಕಂಡು ಹೆದರಿದವನಂತೆ ಎರಡು ಕೈಗಳಿಂದಲೂ ಭದ್ರವಾಗಿ ಮುಖವನ್ನು ಮುಚ್ಚಿಕೊಂಡನು.

ರಾಮುವು ಹೇಳಿದನು. '' ನನ್ನ ಪ್ರತೀಕಾರದ ತೆರನು ಹೊಸತು. ಅವನೀಗ ನಿನ್ನನ್ನು ನಿರಾಕರಿಸಿ, ಕಾಲುಕಸಕ್ಕಿಂತ ಕಡೆಯಾಗಿ ನೋಡುತ್ತಿರುವನು ನಾನು ನಿನ್ನನ್ನು ಭವ್ಯವಾದ ಹೃದಯ ಮಂದಿರದ ಅಧಿದೇವಿಯನ್ನಾಗಿ ಪ್ರತಿಷ್ಠಾಪಿಸಿ, ನಿನ್ನ ಆಜ್ಞೆಗೆ ಬದ್ಧನಾಗಿ ಅಡಿಯಾಳಾಗಿರುವೆನು. ನಿನ್ನನ್ನು ಸಹಧರ್ಮಿಣಿಯಂತೆ ಅರ್ಧಾಂಗಿಯಂತೆ, ಕಷ್ಟ ಸುಖಗಳಲ್ಲಿ ಸಮಭಾಗಿಯಂತೆ ಕಾಣದೆ ನಿನ್ನ ಮನಸ್ಸಿಗೆ ದುಃಖವನ್ನುಂಟುಮಾಡುತ್ತಿರುವನು. ನಾನು ನಿನ್ನ ನೆರಳಾಗಿ ನಡೆದರಡಿ ಸವೆಯುವುದೆಂದು ಆರಾಧಿಸುವೆನು. ದಾಸಿಯೆಂದು ದೂರವಿಟ್ಟಿರುವನವನು. ದೇವಿಯೆಂದು ಸರ್ವಸ್ವವನ್ನು ಒಪ್ಪಿಸಿ, ತಲೆಯಲ್ಲಿಟ್ಟು ಮೆರೆವೆನು ನಾನು. ನೀನು ಮನಸ್ಸು ಮಾಡು. ಇಂದಿನ ರಾತ್ರಿಯೇ ನಾಳೆ ಬೆಳಗಾಗುವುದರೊಳಗಾಗಿ

ನೂರಾರು ಮೈಲಿದೂರ ಹೊರಟುಹೋಗೋಣ. ನಿನ್ನ ಗಂಡನಿಗೆ ನೀನು ಬೇಡ; ಅವನು ಹುಡುಕುವುದಿಲ್ಲ. ಮಾವ! ಅವನಿಗೆಂದು ಹಣವನ್ನು ತಂದಿದ್ದೇನೆ. ಇನ್ನೇನಾಗಬೇಕು ?" ಎಂದನು.

ಮಂಚದ ಕೆಳಗೆ ಅಡಗಿದ್ದ ವ್ಯಕ್ತಿಗೆ ಸಾವಿರಚೇಳು ಒಟ್ಟಿಗೆ ಕುಟುಕಿದಂತಾಯಿತು. ನೂರಾರು ಸಬಳಗಳನ್ನು ಹೊಟ್ಟೆಗೆ ಹಾಕಿ ತಿವಿದದಂತಾಯಿತು. ಇದುವರೆಗೂ ಹೆಂಡತಿಯ ವಿಚಾರದಲ್ಲಿ ಅವನು ಹಾಗಿದ್ದುದು ನಿಜ, ಆದರೆ ಅವಳನ್ನು ಚೆಲುವೆಯೆಂದು, ತನ್ನಮನೆಯ ನಂದದ ದೀವಿಗೆಯೆಂದು, ತನ್ನ ಜೀವಿತದ ಸೊಡೆಯ ಹೊಳೆಯೆಂದು, ಎಂದೂ ಭಾವಿಸಿರಲಿಲ್ಲ. ಅವಳೊಂದು ಭೋಗ್ಯ ವಸ್ತು. ಬೇಕಾದಾಗ ಬೇಕು; ಬೇಡದಾಗ ಬೇಡ. ಹೀಗಿದ್ದವನಿಗೆ, ತನ್ನ ಹೆಂಡತಿಯ ಮೇಲೆ ಮತ್ತೊಬ್ಬನ ಕಣ್ಣಿರುವುದೆಂದು ತಿಳಿದ ಕೂಡಲೆ ಮನಸ್ಸಿನಲ್ಲಿ ಅಡಗಿದ್ದ ಮಡದಿಯ ಮೇಲಿನ ಮೋಹವು ಹೆಡೆಯೆತ್ತಿ ಮೇಲಕ್ಕೆದ್ದು ನಿಲ್ಲುವ ನಾಗರ ಹಾವಿನಂತೆ ಪ್ರಬುದ್ಧ ವಾಯಿತು. ಮಲಗಿ ಗೊರಕೆ ಹೊಡೆಯುತ್ತಿದ್ದ ಮಮತೆಯೆಲ್ಲವೂ ತಟ್ಟನೆ ತಾನೇತಾನಾಗಿ ಹೋಯಿತು. ಹೆಂಡತಿಯ ವಿಚಾರವಾಗಿ ಒಂದು ಕ್ಷಣದ ಹಿಂದೆ ಅವನಲ್ಲಿ ಹುಡುಕಿದರೂ ಕಂಡು ಬರದಿದ್ದ ಕಾತರವು ಇಂದು ಮನದಲ್ಲಿ ಮನೆ ಮಾಡಿಬಿಟ್ಟಿತು. ಗಂಟಲೊ ಣಗಿ ಹೋಯಿತು. ಅವಳು ಹೊರಟು ಹೋದರೆ...ಗತಿ...ಮುಂದೆ ಯೋಚಿಸಲಾರದೆ ಹೋದನು. ಅಯ್ಯೋ! ತಾನು ಸರಿಯಾಗಿರು ವುದಕ್ಕೆ ಏನು ರೋಗವೆನ್ನಿಸಿತು. ಈ ಮಂಚದಡಿಯಿಂದ ಮುಕ್ತ ನಾದರೆ, ಅವಳ ಕೈ ಕಾಲಾದರೂ ಕಟ್ಟಿಕೊಳ್ಳಬಹುದು ಆದರೆ ಮುಕ್ತನಾಗುವುದು ಹೇಗೆ ?

ಹುಡುಗಿಯು ನೀರವವಾಗಿ ಕೇಳುತ್ತಿದ್ದವಳು ಇನ್ನೇನಾಗಬೇ ಕೆಂಬ ಪ್ರಶ್ನೆಗೆ ಉತ್ತರವಾಗಿ 'ನಾನು ಮನಸ್ಸುಮಾಡಬೇಕು ಅಷ್ಟೆ!' ಎಂದಳು. ರಾಮಸ್ವಾಮಿಯು ಮೋಜನ್ನೊರಗಿದ್ದಂತೆಯೇ, ಒಂದು ಕಡೆಗೆ ಬಾಗಿ, ಕುರ್ಚಿಯ ತೋಳಿನಮೇಲೆ ಕಯ್ಯನ್ನಿಟ್ಟು ಮೆತ್ತಗೆ

ಒರಗಿದನ್ನು ಅವನ ಬಿಸಿಯುಸಿರು ಸುಂದರಿಯ ಭುಜದ ಮೇಲಿನ ಸೆರಗನ್ನು ಸೆಳೆಯಬೇಕೆಂದು ಯತ್ನಿಸಿತು ಅವನು 'ಹೌದು ಸುಂದರ! ನೀನು ಮನಸ್ಸು ಮಾಡಬೇಕು ಅಷ್ಟೆ!' ಎಂದನು. ಸುಂದರಿಯು "ಹೌದು! ನೋಡುವವರು ಏನೆನ್ನುವರು!" ಎಂದಳು. "ನೋಡುವವರ ಮಾತು ಎಷ್ಟುದಿನ? ಸುಂದರ! ಎರಡು ದಿನ. ಬೆಟ್ಟದ ನದಿಯಂತೆ ಎರಡು ದಿನ ಬಿರುಸಾಗಿದ್ದು ಮತ್ತೆ ತಣ್ಣಗಾಗುವುದು" ಎಂದನು. ಯುವಕನ ದೇಹವು ಇನ್ನೂ ವಾಲುತ್ತಾ ಬಂದು, ಬಿಸಿಯುಸಿರು ಹುಡುಗಿಯ ಕೆನ್ನೆಗೆ ಬಡಿಯಿತು. ಹುಡುಗಿಯು ತಟ್ಟನೆ ಎದ್ದು ನಿಂತು, "ಎಲ್ಲವನ್ನೂ ಚೆನ್ನಾಗಿಯೇ ಗುಣಿಸಿದೆ. ಆದರೆ ನಾನು ಹೆಂಗಸೆಂಬುದನ್ನು ಮಾತ್ರ ಗುಣಿಸಲಿಲ್ಲ" ಎಂದಳು. ತರುಣನಿಗೆ ತಿಳಿಯದೆ ಬೆಪ್ಪಾಗಿ 'ಹಾಗೆಂದರೆ?' ಎಂದನು "ಎಂದರೆ ಗಂಡನೊಡನೆ ಮಾನವಾಗಿ ಸಂಸಾರ ಮಾಡಿಕೊಂಡಿರಬೇಕಲ್ಲದೆ ಮಾನಗೆಟ್ಟು ಮಿಂಡನೊಡನೆ ಮೆರೆಯಬೇಕೆನ್ನುವಳಲ್ಲ ಎಂದು. ನೀನಿಂತಹ ದುರ್ಭಾಷೆಯಾಡುವೆ ಎಂದು ತಿಳಿದಿದ್ದರೆ ನಾನಿಲ್ಲಿ ನಿಲ್ಲುತ್ತಿರಲಿಲ್ಲ ನಾನಿಲ್ಲಿಗೆ ಬರುತ್ತಿರಲಿಲ್ಲ ಇದೋ ಹೊರಟೆ' ಎಂದಳು. ಗಂಡನು ಹೆಂಡತಿಯನ್ನು ಮನಸ್ಸಿನಲ್ಲಿ ಸಾವಿರ ಸಲ ವಂದಿಸಿದನು

ರಾಮುಸ್ವಾಮಿಯು 'ಸುಂದರ! ಈಗ ರಾತ್ರಿ ಎರಡೂವರೆ ಗಂಟೆ. ಸರಿರಾತ್ರಿಯಲ್ಲಿ ಇಲ್ಲಿ ಬಂದಿರುವೆ. ನೀನು ಒಬ್ಬಳು ನಾನು ವರ್ಷಾಂತರಗಳಿಂದ ತಡೆದುಕೊಂಡು ಬಂದಿದ್ದು ಈಗ ಕಟ್ಟು ಒಡೆದಿರುವ ಮೋಹದ ಆಡಳಿತದಲ್ಲಿ ಸಿಕ್ಕಿರುವವನು. ನನಗೆ ಮೈಮೇಲೆ ಅರಿವಿಲ್ಲ. ನಾನು ನಿನ್ನನ್ನು ಅಡ್ಡಹಾಕಿದರೆ?" ಎಂದನು ಹೌದು ಹುಡುಗಿಯು ಒಬ್ಬಳು, ತರುಣನು ಅಗಲವಾದ ಎದೆಯೂ, ಲಾಳಮುಂಡಿಗೆಯಂತಿರುವ ತೋಳುಗಳೂ ಉಳ್ಳವನು.

## ಚತುರ್ಥ ಪರಿಚ್ಛೇದ

---

ಹುಡುಗಿಯು ಹೆದರಲಿಲ್ಲ. ಅಧೀರಳಾಗಲಿಲ್ಲ. ಕಾತರಳಾಗ
ಲಿಲ್ಲ. ನೆಟ್ಟ ಗೂಟದಂತೆ ಅಲುಗದೆ ಸ್ಥಿರಳಾಗಿ ನಿಂತು, "ಅದು
ನಿನ್ನ ಕೈಯಲ್ಲಾಗುವುದಿಲ್ಲ. ನಿನ್ನ ಮನಸ್ಸನ್ನು ನೀನರಿಯೆ
ಆದರಿಂದ ಹೀಗೆ ಹೇಳುವೆ ನೀನು ಬೇಕೆನ್ನುವುದು ನನ್ನನ್ನು
ನನ್ನ ದೇಹವನ್ನಲ್ಲ. ನನ್ನನೊಲಿಸಿಕೊಳ್ಳಬೇಕೆಂದು ಬಂದಿರುವೆ
ಯಲ್ಲದೆ, ನನ್ನನ್ನು ನನ್ನ ಇಷ್ಟಕ್ಕೆ ವಿರೋಧವಾಗಿ ಹೊತ್ತುಕೊಂಡು
ಹೋಗಬೇಕೆಂದಲ್ಲ. ಇದನ್ನು ನಾನು ಬಲ್ಲೆ. ನೀನರಿಯೆ" ಎಂದಳು.
ರಾಮುವು ಅಪ್ರತಿಭನಾದನು. ಆಡಬಾರದ ಮಾತನ್ನಾಡಿದುದಕ್ಕೆ
ಬಲು ನಾಚಿಕೆಯಾಯಿತು. ತಾನಾರಾಧಿಸುತ್ತಿರುವ ದೇವಿಯನ್ನು
ಇಂತು ನೀಚವಾಗಿ ನುಡಿಸಿದುದಕ್ಕೆ ಹೃದಯವು ನಿಂದಿಸಿತು. ಮನ
ದಲ್ಲಿ ಕಟ್ಟಿದ ಕರುಮಾಡದ ರನ್ನದೀವಿಗೆಯೆಂದು ನಂಬಿದ್ದ,
ದಿವ್ಯಧಾಮದ ಸ್ವರ್ಗೀಯ ಮೂರ್ತಿಗೆ ಅಪಮಾನ ಮಾಡಿದೆಯೆಂದು
ಮನವು ತಿರಸ್ಕರಿಸಿತು. ರಾಮುವು ಬಹಳ ಕಾತರನಾದನು. ಕರ
ಣಗಳು ಕಳವಳಿಸಿದವು ಕಣ್ಣು ಕತ್ತಲೆಯಿಟ್ಟಿತು. ತನ್ನ ತಿರಸ್ಕಾರ
ವನ್ನು ತಾನೇ ಸಹಿಸಲಾರದೆ 'ಅಯ್ಯೊ!' ಎಂದಳಲಿಹೋದನು;
ವೇದನೆಯು ತೀವ್ರವಾಗಿ ಮೆಯ್ಯರಿವು ಮರೆತು ಧೊಪ್ಪನೆ ಬಿದ್ದು
ಹೋದನು. ಶರೀರವು ಸುಂದರಿಯ ಪಾದಮೂಲದಲ್ಲಿ ಉರುಳಿತು.

ಹುಡುಗಿಯು ಕಣ್ಣೀರಿನ ಮಳೆಗರೆದು ಇಷ್ಟಕ್ಕೂ ತಾನೇ
ಕಾರಣವೆಂದು ತಿರಸ್ಕರಿಸಿಕೊಂಡಳು ಆದರೂ ತಾನು ಮಾಡಿದುದೇ
ಸರಿಯೆಂದು ಸಣ್ಣ ದನಿಯೊಂದು ಧೈರ್ಯಹೇಳುತ್ತಿದ್ದಿತು.

ಹುಡುಗಿಯು ಕಣ್ಣೀರು ಸುರಿಸುತ್ತಲೇ, ಅವನನ್ನು ಮೆಲ್ಲಗೆ
ಹಿಡಿದೆತ್ತಿ ಮಂಚದ ಮೇಲೆ ಮಲಗಿಸಿದಳು. ಮೂಲೆಯಲ್ಲಿ ಒಂದು
ಹೂಜಿಯಲ್ಲಿದ್ದ ನೀರನ್ನು ತಲೆಗೂ ಹಣೆಗೂ ತಳೆದು ಸ್ನೇಹಸ್ನಿಗ್ಧ

ಹಾದ ಮೃದು ಮಧುರ ಧ್ವನಿಯಿಂದ ಮೆಲ್ಲಗೆ 'ರಾಮೂ!' ಎಂದಳು. ತರುಣನೂ ಮೆಲ್ಲಗೆ ಕಣ್ತೆರೆದು ಆಯಾಸದಿಂದ ಮೆಲ್ಲಗೆ 'ಸುಂದರಾ!' ಎಂದನು. ಕಣ್ಣು ನೀರಿನಿಂದ ತುಂಬಿಬಿಟ್ಟಿತು. ಕತ್ತು ಸೆರೆಬಿಗಿದು ಮುಂದಕ್ಕೆ ಮಾತು ಹೊರಡಲಿಲ್ಲ. ಹುಡುಗಿಯೂ ಅವನ ತಲೆಯ ಮೇಲೆ ಕಯ್ಯಿಟ್ಟು, ಸ್ಥಿರದೃಷ್ಟಿಯಿಂದ ಚಾಂಚಲ್ಯದ ಸೊಂಕಿಲ್ಲದೆ ನೋಡುತ್ತ ಕುಳಿತಿದ್ದಳು.

ತರುಣನು ಚೇತರಿಸಿಕೊಂಡು ಎದ್ದು ಕುಳಿತನು. ಮುಖವು ಬಹಳವಾಗಿ ಕಂದಿಹೋಗಿಬಿಟ್ಟಿತು. ಸರ್ವನಾಶವಾಯಿತೆಂದು ದೃಢವಾದ ಮೇಲೆ ತೋರುವ ಒಂದು ತೆರದ ಸ್ಥೈರ್ಯದಿಂದ, ಹೇಳತೊಡಗಿದನು; 'ಸುಂದರ! ದೇವರು ನನಗೆ ಎಲ್ಲವನ್ನೂ ಕೊಟ್ಟು ಒಂದನ್ನು ಕಿತ್ತುಕೊಂಡಿದ್ದಾನೆ. ದೇವರು ಕೊಡದಿರುವುದನ್ನು ನೀನು ಕೊಡಬಲ್ಲೆ. ಮತ್ತೊಮ್ಮೆ ಯೋಚಿಸು ಸುಂದರ! ನನ್ನ ಜೀವನವನ್ನು ರಮಣೀಯವಾದ ನಂದನವನವನ್ನು ಮಾಡುವುದೂ ಹುಲ್ಲುಕಡ್ಡಿಯೂ ಕಾಣದ ಬೆಂಗಾಡನ್ನು ಮಾಡುವುದೂ ಈಗ ನಿನ್ನ ಕಯ್ಯಲ್ಲಿದೆ. ನನ್ನ ಹೃದಯವನ್ನು ನಿನ್ನ ಪಾದ ತಲದಲ್ಲಿ ಒಪ್ಪಿಸಿದ್ದೇನೆ. ನನ್ನ ಜೀವಿತವನ್ನು ನಿನಗೆಂದು ನಿಾಸಲು ಕಟ್ಟಿ ಇಟ್ಟಿದ್ದೇನೆ. ಕಾಲಲ್ಲಿ ನೂಕುವೆಯಾ? ತಳ್ಳಿಬಿಡುವೆಯಾ? ತಲೆಯಲ್ಲಿ ಮುಡಿದೆಸೆದ ಹೂವನ್ನೂ, ನಾನು ಮುಡಿದಿದ್ದ ಹೂವೆಂದು ಹೇಳುತ್ತಿದ್ದ ಕರುಣಾವಂತೆಯು ನೀನು, ನೀನಾಗಿ ಬೆಳೆಸಿದ ಗಿಡವನ್ನು ಕಡಿದು ಬಿಂಕಿಯೊಟ್ಟುವಿಯಾ? ಮತ್ತೊಮ್ಮೆ ಕೈಮುಗಿದು ಕೇಳಿಕೊಳ್ಳುವೆನು. ನನ್ನ ಜನ್ಮವನ್ನು ಸಫಲಮಾಡು. ದಯಿಮಾಡು' ಎಂದನು

ಹುಡುಗಿಯ ಉತ್ತರವು ಕೂಡಲೆ ಬಂದಿತು. ಮರ್ಮಾಂತಿಕ ವೇದನೆಯಿಂದ ಅಲ್ಲಲ್ಲಿ ನಿರುದ್ಧವಾಗಿಯಾಗಿ ಮುಂದರಿಯಿತು. 'ರಾಮೂ! ನೀನು ನನಗಾಗಿ ಪಡುತ್ತಿರುವ ಕಷ್ಟವು ಅತಿಶಯವಾದುದು. ಕೆಲಸಕ್ಕೆ ಬಾರದ ನನ್ನಂತಹವಳಿಗಾಗಿ ನೀನು ಇಷ್ಟು

ವ್ಯಥೆಪಡುತ್ತಿದ್ದರೆ, ನನ್ನ ಮನಸ್ಸು ಕರಗದೆಂದುಕೊಂಡಿದ್ದೀಯಾ? ನಾನು ಯಾವಾಗಲೂ ನಿನ್ನವಳೇ ರಾಮು! ಆದರೆ ಯೋಚಿಸು. ಜಗತ್ತಿನಲ್ಲಿ ಕೆಟ್ಟವಳೆನ್ನಿಸಿಕೊಳ್ಳಲು ನನಗೆ ಇಷ್ಟವಿಲ್ಲ. ರಾಮೂ! ನಾವಿಬ್ಬರೂ ಹೃದಯವನ್ನು ನೋಡಬಲ್ಲ ದೇವರೆದುರಿಗೆ ಧರ್ಮ ದಂಪತಿಗಳು. ಆದರೆ ಹೊರಗಣ ಕಣ್ಣಿಂದ ನೋಡುವ ಜಗತ್ತಿಗೆ ಪಾಪಿಗಳು ಧರ್ಮಭ್ರಷ್ಟರು. ಒಬ್ಬರಿಂದ ನಮಗಾಗಬೇಕಾದುದೇ ನೆನ್ನುವೆ? ಅದಕ್ಕೆ ನಾನೇನೂ ಹೇಳಲಾರೆ. ರಾಮು! ಲೋಕ ವನ್ನು ನಾನು ಕಂಡಿರುವೆನು. ಧರ್ಮವನ್ನು ನಾನು ಕಾಣೆ. ರಾಮು! ಕಂಡಿರುವ ಈ ಲೋಕವನ್ನೇ ಮೆಚ್ಚಿಸದ ನಾನು ಕಂಡರಿ ಯದ ದೇವರನ್ನು ಮೆಚ್ಚಿಸುವುದುಂಟೇ? ಎಲ್ಲರಿಂದಲೂ ಒಳ್ಳೆಯವ ಳೆನ್ನಿಸಿಕೊಳ್ಳಬೇಕೆಂಬ ಆಶೆಯು ಮಾತ್ರ ನನಗೆ ಬಹಳವುಂಟು ನಾಳೆಯ ದಿನ ನನ್ನ ಮಕ್ಕಳನ್ನು ನೋಡಿ ಯಾರಾದರೂ "ಇವ ರಿಂಥವಳ ಮಕ್ಕಳೆಂದರೆ, ಇವರ ತಾಯಿ ಓಡಿಹೋಗಿದ್ದಳೆಂದರೆ, ಅದನ್ನು ಕೇಳಿ ನನ್ನ ಮಕ್ಕಳು ಏನೆಂದುಕೊಳ್ಳುವರು ಯೋಚಿಸು. ಇಲ್ಲವೆ, ರಾಮೂ! ನಾಚಿಗೆಯನ್ನು ಬಿಟ್ಟು ಹೇಳಿಕೊಳ್ಳಬೇಕೆಂದರೆ ಮನಸ್ಸು ಬರದು. ಇಲ್ಲವಾದರೆ ನನ್ನ ಹೃದಯವನ್ನು ಬಿಚ್ಚಿ ನಿನ್ನ ಮುಂದಿ ಡುತ್ತಿದ್ದೆನು. ಹೇಳಲಾರೆನಾದರೂ ಒಟ್ಟಿನಲ್ಲಿ ಹೇಳುವೆನು ಕೇಳು. ನನ್ನ ವ್ಯಥೆಯು ನಿನ್ನ ವ್ಯಥೆಗೆ ಕಡಿಮೆಯಾಗಿಲ್ಲ. ನೀನು ದೇವ ರಾಗಿದ್ದರೆ ನನಗೆ ಮುಕ್ತಿಯು ಖಂಡಿತ ದೊರೆಯುತ್ತಿತ್ತು. ಇನ್ನ ಲ್ಲಿಂದ ಮುಂದಕ್ಕೆ ಹೇಳಲಾರೆ. ಒಂದು ಮಾತ್ರ ಖಂಡಿತವಾಗಿರು. ನಿನ್ನ ಹೃದಯದಲ್ಲಿ ಅಚ್ಚಳಿಯದಂತೆ ಬರೆದಿಟ್ಟುಕೊ. ಸುಂದ ರಿಯ ದೇಹವು ನಿನ್ನದಲ್ಲ. ಮನಸ್ಸು ನಿನ್ನದು. ಆದರೂ, ಈ ಜನ್ಮದಲ್ಲಿ ಮಾತ್ರ ನಿನ್ನವಳಾಗಲಾರೆನು. ನಿನ್ನವಳು ಹೌದು; ಆದರೆ ಮತ್ತೊಬ್ಬನೊಡನೆ ಸಂಸಾರಮಾಡಿಕೊಂಡಿರುವೆನು. ಅಲ್ಲದೆ ನೀನು ಮತ್ತೊಂದನ್ನು ಯೋಚಿಸಲಿಲ್ಲ. ನೀನು ಹಲವು ವರ್ಷದ ಹಿಂದಿನ ಸವಿಗನಸುಗಳನ್ನು ಇಂದು ಹೇಳುತ್ತಿರುವೆ. ನಾನು ಅಂದಿ ನಿಂದಲೂ ಬೆಳೆದಿದ್ದೇನೆ. ನೀನೂ ಬೆಳೆದಿದ್ದೀಯೆ. ಮೊದಮೊದಲು

ನಾವಿಬ್ಬರೂ ಎಳೆತನದಲ್ಲಿ ಸಸಿಗಳಂತೆ ಒಟ್ಟಿಗಿದ್ದೆವು. ಈಗ? ಜತೆಯಲ್ಲಿ ಹುಟ್ಟಿದರೂ ಪ್ರವಹಿಸುವಾಗ ಬೇರೆಯಾಗುವ ನದಿಗಳಂತೆ ಇದ್ದೇವೆ. ನಿನ್ನ ಪಾಡಿಗೆ ನೀನಿರು ನನ್ನ ಪಾಡಿಗೆ ನಾನಿರುವೆನು. ಒಂದುವೇಳೆ ನಾನು ಸತ್ತುಹೋಗಿದ್ದರೆ ಈಗ ನೀನೇನು ಮಾಡುತ್ತಿದ್ದೆ? ಈಗಲೂ ಹಾಗೆಯೇ ಇರು. ನಿನಗೆ ಮದುವೆಯಾಗದೆ ಇಲ್ಲ. ಯಾರು ಬೇಕಾದರೂ ಹೆಣ್ಣು ಕೊಡುತ್ತಾರೆ. ಮದುವೆ ಮಾಡಿಕೊಂಡು ಸುಖವಾಗಿರು. ಇಂದಿನಿಂದ ಆಚೆಗೆ ನಾನೂ ನೀನೂ ಅಣ್ಣ ತಂಗಿಯರು. ಸೋದರಮಾವನ ಮಕ್ಕಳಲ್ಲ; ಒಂದು ಹೊಟ್ಟೆಯಲ್ಲಿ ಹುಟ್ಟಿದವರು' ಎಂದಳು.

ತರುಣನೇನೆನ್ನಬೇಕು? ಪಾರ್ಥಿವವಾದ ಶರೀರವನ್ನು ಧರಿಸಿದ್ದರೂ ಕಾಮವಿಕಾರವಿಲ್ಲದೆ, "ನಾನು ನಿನ್ನವಳು ಹೌದು. ಆದರೆ ತಂಗಿಯೆಂದು ತಿಳಿದುಕೊ" ಎಂದು ಹೇಳುತ್ತಿರುವ ಹೆಂಗಸನ್ನು ಕಂಡು ಚಕಿತನಾಗಿ ಹೋದನು. "ಹಣವೆಂದರೆ ಬಾಯ್ಬಿಡುವಳು. ಹೊಗಳಿದರೆ ವಶಳಾಗುವಳು" ಎಂದು ತಾನೆಂದು ಕೊಂಡಿದ್ದ ಹೆಂಗಸಲ್ಲಿವಳು. ಅವನೂ ಪ್ರಪಂಚವನ್ನು ಬಲ್ಲವನು. ಪತ್ತೇದಾರರ ಇಲಾಖೆಯಲ್ಲಿ ಬಹು ನಿಪುಣನೆಂದು ಪ್ರಸಿದ್ಧನಾದವನು. ಮನುಷ್ಯ ಸ್ವಭಾವವನ್ನು ಚೆನ್ನಾಗಿಯೂ ಅರಿತವನು; ಆದರೂ ಓದಿನ ಗುರುತರಿಯದ ಹುಡುಗಿಯ ಸಾಮಾನ್ಯವಾದ ಮಾತುಗಳಿಗೆ ಮುಗ್ಧನಾಗಿ ಹೋದನು; ಪರಾಜಿತನಾದೆನೆಂದು ಒಪ್ಪಿಕೊಂಡನು ಎಲ್ಲದಕ್ಕಿಂತಲೂ ಒಂದುಮಾತು ಬಹಳ ಹಿಡಿಯಿತು ಇಂದಿನ ಸುಂದರಿಯು ಅಂದಿನ ಸುಂದರಿಯೇ? ಅಂದು ಕಿಲಕಿಲನೆಂದು ನಗುತ್ತಾ, ಲೋಕದ ಕಷ್ಟಸುಖಗಳರಿಯದೆ ಹಾರುವ ಹಕ್ಕಿಯಂತಿದ್ದ ಸುಂದರಿಯೇ ಈಗಲೂ? ಸಾಧ್ಯವಿಲ್ಲ.



## ಪಂಚಮ ಪರಿಚ್ಛೇದ

---

ಇಬ್ಬರಲ್ಲಿ ಯಾರೂ ಮಾತನಾಡಲಿಲ್ಲ. ಸುಮಾರು ಹೊತ್ತಾಯಿತು. ಎಲ್ಲಿಯೋ ಒಂದು ಝಾಮದ ಕೋಳಿಯು ಕೊಕ್ಕೋ ಎಂದಿತು. ಇಬ್ಬರೂ ಯೆಚ್ಚೆತ್ತರು. ಹುಡುಗಿಯು "ಆಗಲೇ ಕೋಳಿ ಕೂಗುವ ಹೊತ್ತಾಯಿತು. ಇನ್ನು ನಾನು ಹೋಗುವೆನು." ಎಂದೆದ್ದಳು. ತರುಣನು ಕೈಮುಗಿದುಕೊಂಡು ಅಂಗಲಾಚಿಕೊಂಡು "ಸುಂದರ! ನೀನು ಹೇಳಿದಂತೆ ಕೇಳಿಕೊಂಡಿರುವೆನು. ನಿನ್ನ ಚರಣಸೇವಕನಾಗುವೆನು. ನಿನ್ನ ದಾಸಾನುದಾಸನಾಗುವೆನು. ಕೊನೆಯ ಮಾತನ್ನು ಹೇಳು" ಎಂದು ಮತ್ತೆ ಬೇಡಿಕೊಂಡನು. ಹುಡುಗಿಗೆ ಅಸಮಾಧಾನವಾಗಿ ಕೊಂಚ ಕೋಪ ಬಂದಿತು. ಕಡೆಗಣ್ಣು ತುದಿಯಿಂದ, ಗಂಟಿಕ್ಕಿದ ಹುಬ್ಬಿನಿಂದ, ಗಂಭೀರವಾದ ಮುಖದಿಂದ ತನ್ನ ಕೋಪವನ್ನು ಸೂಚಿಸುತ್ತಾ "ನಾನು ಹೇಳುವುದನ್ನು ಆಗಲೇ ಹೇಳಿದ್ದೇನೆ. ನಿನಗೆ ಈ ದೇಹದಮೇಲೆ ಆಶೆಯಾದರೆ ಈಗಲೆ, ಇದೋ, ನಿನಗೆ ಬೇಕಾದುದನ್ನು ಮಾಡಿಕೋ ಆದರೆ ಒಂದು ತಿಳಿದಿರು. ಮಾನವನ್ನು ನೀಗಿ ನನ್ನನ್ನು ದನಕ್ಕಿಂತಲೂ ಕಡೆಯಾಗಿಸುವೆ ನೀನು. ಇಂತಹ ನಿನ್ನಲ್ಲಿ ಸಾಯುವವರೆಗೂ ದ್ವೇಷವನ್ನು ಸಾಧಿಸುವೆನು. ಒಂದು ಗಳಿಗೆಯ ಇಂದ್ರಿಯ ಸುಖಕ್ಕಾಗಿ ಜೀವಾವಧಿ ಶಪಿಸುವ ರಾಕ್ಷಸಿಯ ದ್ವೇಷಬೇಕೋ ಇಲ್ಲವಾದರೆ ನಿನ್ನ ಶ್ರೇಯಸ್ಸಿಗಾಗಿ ದಿನವೂ ದೇವರಿಗೆ ಹರಕೆಯನ್ನು ಹೊರುವ ತಂಗಿಯ ಪ್ರೇಮ ಬೇಕೊ ನೀನೇ ಗೊತ್ತುಮಾಡು" ಎಂದು ಮತ್ತೆ ಕುಳಿತುಬಿಟ್ಟಳು.

ರಾಮುವು "ಸುಂದರ! ಇನ್ನು ನಿನ್ನೊಡನೆ ಕಾಮದ ಮಾತುಗಳನ್ನಾಡುವುದಿಲ್ಲ. ಚಾಪಲ್ಯದ ನುಡಿಗಳನ್ನು ನುಡಿಯುವುದಿಲ್ಲ. ಆದರೆ ಬಹುದಿವಸದ ಆಶೆಯು ಪಿಶಾಚವು ನನ್ನನ್ನು

ತಟ್ಟನೆ ಬಿಡುವುದಿಲ್ಲ. ನನಗೊಂದು ಮುತ್ತು ಕೊಡು. ವರ್ಷಾಂತರಗಳಿಂದಲೂ ಹಂಬಲಿಸಿದ್ದೇನೆ. ಮರುಮಾತನಾಡಬೇಡ. ನಾನು ಪಶು. ನನಗೆ ವಿವೇಕವಿಲ್ಲ. ಇದೋ ಕೊನೆಯ ಪ್ರಾರ್ಥನೆ ಇದೊಂದನ್ನು ನೆರವೇರಿಸು. ಕೈಮುಗಿದು ಕೇಳಿಕೊಳ್ಳುವೆನು. ಇಲ್ಲವೆನ್ನಬೇಡ. ಕರುಣಿಸು'' ಎಂದು ಮಂಚದಿಂದಿಳಿದು ಮುಂದರಿದನು ಹುಡುಗಿಯು ಅವಾಕ್ಕಾಗಿದ್ದಳು. ನಿರೋಧಿಸಲಿಲ್ಲ. ತರುಣನು ಮಹತ್ತರವಾದ ಮನೋವೇದನೆಯಿಂದ ಅವಳನ್ನು ಬರಸೆಳೆದು ಅಪ್ಪಿಕೊಂಡು, ತಗ್ಗಿಸಿದ್ದ ಮೊಗವನ್ನು ಎತ್ತಿ ಮುತ್ತಿಟ್ಟುಕೊಂಡನು. ಆ ವೇಳೆಗೆ ಎಲ್ಲಿಯೂ ಇಲ್ಲದ ಗಾಳಿಯೊಂದು ಬಂದು ದೀಪವು ಆರಿಹೋಯಿತು. ಇಂತಹ ಅವಿವೇಕವನ್ನು ದೀಪವೆಂತು ಸೈರಿಸುವುದು? ನಂದಿ ಹೋಯಿತು. ಗುಡಾರವೆಲ್ಲವೂ ಅಂಧಕಾರಾವೃತವಾಗಿ ಹೋಯಿತು. ಪ್ರಕೃತಿಯು ಈ ಪ್ರಾಣಿಗಳಿಬ್ಬರ ಚರ್ಯೆಯನ್ನು ಪ್ರಪಂಚವು ಕಾಣದಿರಲೆಂದು ಕತ್ತಲೆಯಿಂದ ಮುಚ್ಚಿಬಿಟ್ಟಳು.

ಮಂಚದ ಕೆಳಗೆ ಅವಿತಿದ್ದ ವ್ಯಕ್ತಿಯು ಬದುಕಿದೆನೆಂದು ಓಡಿ ಹೋಯಿತು.



# ಆರನೆಯ ಭಾಗ



## ಹಂಗಿನ ಹೊರೆ.



### ಪ್ರಥಮ ಪರಿಚ್ಛೇದ



ಅಳಿಯನು ಹಿಂದಿನ ದಿನ ಮಾವನೊಡನೆ "ನಾನು ನಾಟಕಕ್ಕೆ ಹೋಗಬೇಕು. ಮೈಸೂರಿಗೆ ಹೋಗಿಬರುವೆನೆಂ"ದು ಹೇಳಿ ಸಂಜೆಯಲ್ಲಿ ಎಲ್ಲಿಯೋ ಹೊರಟುಹೋಗಿದ್ದನು. ರಾತ್ರಿ ಸುಮಾರು ನಾಲ್ಕು ಗಂಟೆಯ ಹೊತ್ತಿಗೆ ಈಚೆ ಬಂದಿದ್ದ ಮಾವನು ಅಳಿಯನ ಕಿರುಮನೆಯಲ್ಲಿ ಏನೋ ಸೊರಸೊರ್ರೆಂಬ ಶಬ್ಧವನ್ನು ಕೇಳಿ ಅಲ್ಲಿಗೆ ಹೋಗಿ ಬಾಗಿಲಿಗೆ ಕಿವಿಕೊಟ್ಟು ಕೇಳಿದನು. ಯಾರೋ ಮನೋಂತಿಕವಾದ ವೇದನೆಯಿಂದ. ನೀರವವಾಗಿ ಅಳುತ್ತಿರುವಂತೆ ತೋರಿತು. ಸಾಮಾನ್ಯವಾಗಿ ಸುಂದರಿಯು ಅಳುತ್ತಿರುವುದುಂಟು. ಆದರೆ ಅವಳ ಧ್ವನಿಯು ಹಾಗೆ ತೋರಲಿಲ್ಲ.

ಮಾವನು ಹಿಂತಿರುಗಿ ಬಂದು ತನ್ನ ಕಿರುಮನೆಗೆ ಹೋಗುವುದರೊಳಗಾಗಿ, ಯಾರೋ ಛತ್ರದ ಹಿತ್ತಲ ಬಾಗಿಲನ್ನು ತೆರೆದಂತಾಯಿತು. ತಾನು ಆಗ ತಾನೇ ಬಾಗಿಲು ಹಾಕಿಕೊಂಡು ಬಂದಿದ್ದನು. ಆ ಬಾಗಿಲು ಹೊರಗಿಂದ ತೆಗೆಯಬೇಕಾದರೆ ತಮ್ಮ ಮನೆಯವರಿಗಲ್ಲದೆ ಇತರರಿಗೆ ತಿಳಿಯದು. ಕಳ್ಳನೇನೋ ಎಂದುಕೊಂಡು,

ಹಾಗೆಯೇ ನಿಂತುಕೊಂಡನು. ಬಾಗಿಲು ತೆರೆದು, ಒಂದು ವ್ಯಕ್ತಿಯು ಒಳಗೆ ಬಂದು ನೇರವಾಗಿ ಸುಂದರಿಯ ಕಿರುಮನೆಗೇ ಹೋಯಿತು ಹಾಗೆಯೇ ನೋಡಿದನು. "ಬಂದವಳು ಹುಡುಗಿ. ಹಾಗಾದರೆ ಕೃಷ್ಣಮೂರ್ತಿಯೇ ಅಳುತ್ತಿದ್ದುದು? ಸಾಮಾನ್ಯವಾಗಿ ನಾಟಕಕ್ಕೆಂದು ಮೈಸೂರಿಗೆ ಹೋದವನು ಮರುದಿನ ಬೆಳಗ್ಗೆ ಹತ್ತು ಗಂಟೆಯವೇಳೆಗೆ ಬರುತ್ತಿದ್ದನು. ಈದಿನ ನಾಲ್ಕುಗಂಟೆಗೇ ಬಂದಿರುವನೇ? ಏನೋ ಹಾಳಾಗಹೋಗಲಿ ನನಗೇಕೆ?" ಎಂದು ಒಂದು ದಪ್ಪ ಚಿಟಿಕೆ ನಶ್ಯವನ್ನು ಮೂಗಿಗೆ ಬಲವಾಗಿ ಏರಿಸಿ ಮುಸುಕನ್ನು ಬೀರಿ ಮಲಗಿಬಿಟ್ಟನು.

ಮರುದಿನ ಬೆಳಗಾಯಿತು. ಕೃಷ್ಣಮೂರ್ತಿಯ ಮುಖವನ್ನು ಕಂಡವರೆಲ್ಲರೂ ಜ್ವರಬಂದಿದೆಯೇ ಎನ್ನುವರು. ಕಣ್ಣುಗಳು ಕೆಂಪಾಗಿ ಹೋಗಿ, ಕೊಂಚ ಊದಿಕೊಂಡಂತೆ ಕಾಣುತ್ತವೆ. ಮೊಗವೆಲ್ಲವೂ ನಿಸ್ತೇಜವಾಗಿ ಹೋಗಿದೆ. ಅಂಗಾಂಗಗಳೆಲ್ಲವೂ ಬಳಲಿಕೆಯಿಂದ ಬೆಂಡಾಗಿ ಹೋಗಿವೆ.

---

## ದ್ವಿತೀಯ ಪರಿಚ್ಛೇದ

---

ಹಿಂದಿನ ದಿನ ಒಡೆಯನ ಅಪ್ಪಣೆಯಾಗಿದ್ದಂತೆ, ಆಳುಗಳು ಮತ್ತೆಲ್ಲಿಯೋ ಮಲಗಿದ್ದು ಬೆಳಗ್ಗೆ ಆರು ಗಂಟೆಗೆ ಬಂದರು. ಆ ವೇಳೆಗೆ ಅವರೊಡೆಯನು ಎಂದಿನಂತೆ ಎದ್ದಿರದೆ ಇನ್ನೂ ಮಲಗೇ ಇದ್ದನು. ಪಕ್ಕದ ಮೇಜಿನ ಮೇಲೆ ಅಡಕೆಲೆ, ಒಳ್ಳೆಯ ಹೂ, ಹಾಲಿನ ಚೆಂಬು, ಸಂಪಗೆ ಹೂವಿನ ಪೊಟ್ಟಣ, ಅಲಂಕೃತವಾದ ಹೆಣ್ಣುಬೊಂಬೆ. ಸಾಮಾನ್ಯವಾಗಿ ಒಡೆಯನು ಏನುಮಾಡಿದರೂ ಅದನ್ನು ಕುರಿತು ಆಳು ಮರುಮಾತನಾಡುತ್ತಿರಲಿಲ್ಲ. ಆದರೆ

ಈಸಲ ಒಂದು ಸಣ್ಣ ನಗು ಬಂದಿತು. ಅದನ್ನು ಹಾಗೇ ತಡೆದು
"ಅಡಕೆಲೆ ಹಾಕಿಕೊಂಡಿಲ್ಲ ಹೂ ಕಟ್ಟು ಬಿಚ್ಚಿಲ್ಲ. ಇದೇನು
ಆಟವೋ? ಕೊನೆಯವರೆಗೆ ನೋಡೋಣ" ಎಂದುಕೊಂಡು ಸಾಹೇ
ಬರು ಏಳುವುದರೊಳಗಾಗಿ ಎಲ್ಲವನ್ನೂ ಗುಡಿಸಿಬಿಡೋಣವೆಂದು
ಹೊರಟನು ಹಾಸಿದ್ದ ರತ್ನಗಂಬಳಿಯೆಲ್ಲ ಸುಕ್ಕು ಸುಕ್ಕಾಗಿದ್ದಿತು.
ಹಾಗೆಯೇ ಹುಡುಕಿಕೊಂಡು ಬಂದರೆ, ಮಂಚದಡಿ ಒಂದು ಚೂರಿ.
ಸಂದೇಹವಿನ್ನೂ ಬಲವಾಗಿ, ಮತ್ತೊಬ್ಬನನ್ನು ಕರೆದು ಅದನ್ನು
ತೋರಿಸಿದನು. ಬಾಗಿಲಲ್ಲಿ ಎಂದಿನಂತೆ ನಾಯಿಯಿಲ್ಲ; ಹುಡುಕಿ
ದರೆ ಗುಡಾರದ ಹಿಂದೆ ಸುಮಾರು ದೂರದಲ್ಲಿ ಒಂದು ಮರಕ್ಕೆ
ಕಟ್ಟಿಹಾಕಿದೆ. ಇಬ್ಬರಿಗೂ ಸಂಶಯವು ಬಲವಾಯಿತು ಚಿನ್ನದ
ಒಡವೆಗಳಿದ್ದ ಬೊಂಬೆಯೂ, ಬೆಳ್ಳಿಯ ತಂಬಿಗೆಯೂ ಇದ್ದ ಹಾ
ಗಿಯೇ ಇವೆ ಮಂಚದಡಿ ಚೂರಿ ಇದೆ. ಅವರಿಬ್ಬರ ತರ್ಕದಲ್ಲಿ
ಯಾರೋ ತಮ್ಮ ಸ್ವಾಮಿಯ ಜೀವಿತ ಹರಣಕ್ಕಾಗಿ ಬಂದಿರಬೇ
ಕೆಂದು ಸಿದ್ಧವಾಯಿತು. ಹಗಲಿರುಳೂ ಪತ್ತೇದಾರಿಯ ಸಾಹಸ
ಕರ್ಮದಲ್ಲಿ ತೊಡಗಿರುವವನ ಮೇಲೆ ಅಂತಹ ಅತ್ಯಾಚಾರ ನಡೆ
ಯುವುದು ಅಸಂಭವವೇನೂ ಅಲ್ಲ. ಅವರಿಗೆ ಸಂದೇಹವು ಬಲ
ವಾಗಿ, ಹೋಗಿ ಸಾಹೇಬರನ್ನು ಎಬ್ಬಿಸಿದರು.

ಅವರಿಗೂ ಆಗ ತಾನೇ ಒಂದು ಗಳಿಗೆಯ ಮುಂಚೆ ಜೊಂಪು
ಹಿಡಿದಿದ್ದಿತು. ರಾತ್ರಿಯೆಲ್ಲವೂ ಹುಚ್ಚುಜ್ವರ ಕಾಯ್ದಂತೆ ಆದರೆ
ಗಾಬರಿಯಿಲ್ಲ. ಒಂದುತರದ ಧೈರ್ಯವಿದೆ. ಎಲ್ಲವೂ ಅರಿಕೆ
ಯಾಯಿತು ಅವರಿಗೂ ಆಶ್ಚರ್ಯವಾಗಿ ಚೂರಿಯನ್ನು ತರಿಸಿ
ಕೊಂಡು ನೋಡಿದರು. ಹಣದ ಪೆಟ್ಟಿಗೆಯು ತೆರೆದಿದ್ದುದೂ ಅದ
ರಲ್ಲಿ ಸುಮಾರು ನೂರೈವತ್ತು ರೂಪಾಯಿ ಹೋಗಿರುವುದೂ
ಗೊತ್ತಾಯಿತು. ನಾಯಿಯನ್ನು ತರಿಸಿ, ಜಾಡೆಯನ್ನು ಗುರ್ತು
ಹಚ್ಚಿಸಿದರು. ಎರಡು ಜಾಡೆಗಳು. ಎರಡೂ ಛತ್ರದ ಕಡೆಗೇ
ಹೋಗುತ್ತ ಹಿಂಬಾಗಿಲಿಂದ ಒಳಕ್ಕೆ ಹೋಗುತ್ತವೆ. ಒಂದು ಪಾರ್ಶ್ವ

ಪತ್ತೆಗಾರರ ಕೊಠಡಿಗೆ ಹೋಗಿ, ಅಲ್ಲಿಂದ ಮತ್ತೊಂದು ಕಿರು-
ಮನೆಗೆ ಹೋಗುತ್ತದೆ. ಮತ್ತೊಂದು ಕಿರುಮನೆಯು ಯಾರದು
ಎಂಬುದು ಸಾಹೇಬರಿಗೆ ಗೊತ್ತು.

ಆಳುಗಳಿಬ್ಬರೂ ಪ್ರಚಂಡರು. ದಫೇದಾರ್ ನರಸಿಂಗ
ರಾಯನು ಬಂದಿರುವುದನ್ನು ಬಲ್ಲರು. ಒಬ್ಬನು ಹೋಗಿ ಕಥೆಯನ್ನು
ಉಪ್ಪುಕಾರ ಹಚ್ಚಿ ಹೇಳಿ ಕರೆದುಕೊಂಡು ಬಂದನು. ಅವನೂ
'ದೊಡ್ಡ ಸಾಹೇಬರು, ಪತ್ತೆದಾರರ ಆಫೀಸರ್' ಎಂದು ತಿಳಿದು,
ಮುತುವರ್ಜಿಮಾಡಿ, ಒಂದು 'ಭಲೆ!' ಹೊಡೆದು ಬಿಡಬೇಕೆಂದು
ಬಂದನು. ಆಫೀಸರ್ ಇನ್ನೇನೂ ಕೊಡುವುದಿಲ್ಲವೆಂದು ಅವನ
ಮತ ಬಂದು ಸಾಹೇಬರ ಮುಂದೆ, ಬಹು ಮರ್ಯಾದೆಯಿಂದ
ಬಗ್ಗಿ ಸಲಾಂಮಾಡಿ, ತಾನು ಒಂದು ನಿಮಿಷದಲ್ಲಿ ಪತ್ತೆಮಾಡು
ವುದಾಗಿ ಹೇಳಿದನು. ಏನೋ ಯೋಚನೆಯಲ್ಲಿದ್ದ ಆಫೀಸರ್
ಆಗಬಹುದೆಂದರು. ನರಸಿಂಗರಾಯನು ಚೂರಿಯನ್ನು ತೆಗೆದು
ಕೊಂಡು ಹೋದನು.

ಆಫೀಸರಿಗೆ ಒಂದೇ ಯೋಚನೆ. "ಇನ್ನೂ ಹದಿನೆಂಟು
ವರ್ಷದ ಹುಡುಗಿ. ಹೆಚ್ಚು ಓದಿದವಳೂ ಅಲ್ಲ. ಇಷ್ಟು ಮಾತು
ಎಲ್ಲಿ ಕಲಿತಳು?" ಆಶಾಭಂಗದಿಂದ ಭಗ್ನವಾದ ಮೃದು ಹೃದಯ
ದಲ್ಲಿ, ಸಫಲವೂ ನಿಷ್ಫಲವೂ ಅಲ್ಲದ ಕಾಮವು ಕಡೆಕಡೆದು ಮನ
ಸ್ಸನ್ನು ಹರಿತಮಾಡಿ, ತಿಳಿಯದುದನ್ನು ತಿಳಿಸಿಕೊಡುವುದೆಂಬ
ಗುಟ್ಟು ಆಫೀಸರಿಗೆ ಇನ್ನೂ ತಿಳಿದಿರಲಿಲ್ಲ.

ಸುಮಾರು ಅರ್ಧ ಗಂಟೆಯಲ್ಲಿ ಆಫೀಸರು ಇನ್ನೂ ಹಾಸಿ
ಗೆಯ ಮೇಲಿರುವಹಾಗೆಯೇ, "ಕಳ್ಳನು ಸಿಕ್ಕಿದ್ದಾನೆ. ಕದ್ದಿರು
ವವನು ಛತ್ರದ ಪಾರುಪತ್ತೇಗಾರ ವೆಂಕಟರಮಣಯ್ಯ. ಚೂರಿಯು
ಅವನದೇ" ಎಂದು ವರದಿ ಬಂದಿತು. ಆಫೀಸರಿಗೆ ಮೈಹಿಡಿದು
ಕುಲುಕಿದಂತಾಯಿತು

---

# ತೃತೀಯ ಪರಿಚ್ಛೇದ

---

ಸುಮಾರು ಏಳುಗಂಟೆಯ ವೇಳೆಗೆ ಛತ್ರದಬಳಿ ಗದ್ದಲವೋ ಗದ್ದಲ. ಪಾರುಪತ್ತೆಗಾರರನ್ನು ಪೋಲೀಸಿನವರು ಹಿಡಿದುಕೊಂಡು ಹೋಗಿದ್ದಾರೆ. ಅನೇಕರಿಗೆ ಅದು ಸಮ್ಮತ. 'ಆಗಬೇಕು. ಸುಮ್ಮನಿರು ಕಳ್ಳಲೆಖ್ಖಬರೆದು ಕೊಳ್ಳೆ ಹೊಡೆಯುತ್ತಿದ್ದ' ಎಂದು ಕೆಲವರು "ಎಲ್ಲಿಯೋ ಸಿಕ್ಕಿಬಿದ್ದಿದ್ದಾನೆ" ಎಂದೆಲ್ಲರ ಅಭಿಪ್ರಾಯುವಾದರೂ "ಗುಪಾರಕ್ಕೆ ನುಗ್ಗಿ ನೂರೈವತ್ತು ರೂಪಾಯಿ ಕದ್ದನೆಂ"ದರೆ ಯಾರೂ ಒಪ್ಪರು. ಎಲ್ಲರೂ "ಅಯ್ಯೋ ಪಾಪ; ಆ ಅಳ್ಳಿದೆಯ ಅಯ್ಯನಿಗೆ ಅಷ್ಟು ಧೈರ್ಯವೆಲ್ಲಿಂದ ಬಂತು?" ಎನ್ನುವರು. ಮತ್ತೆ ಕೆಲವರು ಸರ್ವಜ್ಞರು "ಸರಿ! ಕೇಡುಕಾಲಕ್ಕೆ ಕೆಟ್ಟಬುದ್ಧಿ ಏನೋ? ಎಂತೋ? ಏನೂ ಇಲ್ಲದೆ ಪೋಲೀಸಿನವರು ಹಿಡಿದು ಕೊಂಡು ಹೋಗುತ್ತಾರೆಯೋ?" ಎಂದರು. ಹಿಡಿದು ಕೊಂಡು ಹೋಗಿರುವುದೇಕೆಂದು ವಿಚಾರಿಸಿ, ಅವನನ್ನು ಬಿಡಿಸಿಕೊಂಡು ಬರುವ ಬುದ್ಧಿ ಒಬ್ಬರಿಗೂ ಇಲ್ಲ. ಎಲ್ಲರೂ ತರ್ಕವಿತರ್ಕವಾದ ವಿವಾದಗಳ ಪಾರ್ಲಿಮೆಂಟು ನಡೆಸುತ್ತಾ ಕುಳಿತಿದ್ದರು.

ಈ ಗದ್ದಲವಲ್ಲಿ ಸುಂದರಿಗೆ ಎಚ್ಚರವಾಯಿತು. ಈಚೆ ಬಂದು ವಿಚಾರಿಸಿ, "ಅದೆಲ್ಲ ಸುಳ್ಳು." ಎಂದಳು. ಯಾವನೋ "ನಿನಗೆ ಬಹಳ ಗೊತ್ತು ಕಾಣಮ್ಮ! ನಿನ ಕೊಠಡಿ ಬಿಟ್ಟು ಈಚೆಗೆ ಬರದ ವಳಿಗೆ" ಎಂದನು. ಅವಳೂ ಮರುಮಾತನಾಡದೆ ಬಂದು ಬಿಟ್ಟಳು. ಒಬ್ಬ ಹುಡಗನನ್ನು ಒಳಕ್ಕೆ ಕರೆದು ಎಲ್ಲವನ್ನೂ ವಿಚಾರಿಸಿದಳು. ಅವಳಿಗೂ "ಇರಬಹುದೇ?" ಎನ್ನಿಸಿತು.

ಅವಳು ಅತ್ತ ತಿರುಗಿದಾಗ ಯಾರೋ "ಹುಡುಗಿಗೆಲ್ಲೋ ಭೀತಿಶಂಕೆಯಾಗಿದೆ ಕಣೋ! ಮೊನ್ನೆ ಒಳ್ಳೆಯ ನಿಂಬೆಹಣ್ಣಿನ ಹಾಗೆ ನೋಡುವುದಕೆ ಅಸು ಕೊಂಗಸಾಗಿದವಳು ಇವತ್ತು ಹೆಣದ

ಹಾಗೆ ಆಗಿ ಹೋಗಿದ್ದಾಳೆ." ಎಂದನು. ಆ ಮಾತು ಅವಳ ಕಿವಿಗೆ ಬಿದ್ದಿತು. ಅವಳಿಗೆ ನಗು.

"ಭೀತಿಯೂ ಯಿಲ್ಲ, ಗೀತಿಯೂ ಇಲ್ಲ. ಆ ಹೆಣ್ಣಿಗೆ ಗಂಡ ಹೀಗೆ ದಾರಿತಪ್ಪಿರುವನಲ್ಲ ಎಂದು ಯೋಚನೆ. ದಿನವೂ ಇರುಳೆಲ್ಲ ಅಳುತ್ತಲೇ ಇರುವಳಂತೆ. ನಿದ್ದೆ ಮಾಡದೆ ಅತ್ತುಅತ್ತು ಹೀಗಾಗಿದ್ದಾಳೆ" ಎಂದನು. "ತನ್ನ ಬಾಳು ಹೀಗಾಯಿತಲ್ಲಾ!" ಎಂಬ ಗಾಯವಡೆದ ಅಭಿಮಾನದಿಂದ ಅವಳಿಗೆ ಬಲುದುಃಖವಾಯಿತು.

ಗಂಡನು ಮನೆಯಲ್ಲಿಲ್ಲ. ಎಲ್ಲಿಯೋ ಹೋಗಿದ್ದಾನೆ. ಮತ್ತೆ ಬೆಳಗಾಗುವುದರೊಳಗಾಗಿ ಜೂಜಿನ ಕಟ್ಟೆಗೆ ಹೋಗಿರಬಹುದೇನೋ ಎಂದಲ್ಲಿಗೂ ಒಬ್ಬ ಹುಡುಗನನ್ನು ಕಳುಹಿಸಿದಳು. ಕೊನೆಗೆ ಎಂದೂ ಇಲ್ಲದೆ ಇಂದು ಕೆರೆಯ ಕಡೆಗೆ ಹೋಗಿರುವನೆಂದು ತಿಳಿಯಿತು ನಡೆದುದನ್ನೆಲ್ಲಾ ಅಲ್ಲಿಗೇ ಮುಸರೆಯುಜ್ಜುವವಳೊಡನೆ ಹೇಳಿಕಳುಹಿಸಿದಳು. "ಹಣವನ್ನು ಅವರೇ ಕದ್ದಿರಬಹುದೋ?" ಎಂದು ಅವಳಿಗೆ ಒಂದು ಸಂದೇಹ. ಜೂಜಿನಮನೆ ಗದ್ದಲವು ಅವಳ ಕಿವಿಗೂ ಬಿದ್ದಿತ್ತು.

---

## ಚತುರ್ಥ ಪರಿಚ್ಛೇದ

---

ವೆಂಕಟರಮಣಯ್ಯನು ಚಾವಡಿಯಲ್ಲಿ ಕುಳಿತಿದ್ದಾನೆ. ನರಸಿಂಗರಾಯನು ಒಳ್ಳೆಯ ಜರ್ಬಿನಿಂದ, ಕುರ್ಚಿಯಲ್ಲಿ ಕಾಲುಮೇಲೆ ಕಾಲು ಹಾಕಿಕೊಂಡು, ಸೊಗಸಿಂದ ಸಿಗರೇಟ್ ಸೇದುತ್ತಾ ಕುಳಿತಿದ್ದಾನೆ. ಇಬ್ಬರಿಗೂ ಯೋಚನೆ.

ಒಬ್ಬನಿಗೆ "ಇವನು ಒಳ್ಳೆಯ ಹಣವಂತ. ಚನ್ನಾಗಿ ಕಕ್ಕಿಸಬಹುದಾಗಿದಿತ್. ಏನಿಲ್ಲವೆಂದರೂ ನೂರು ರೂಪಾಯಿ ಸಿಕ್ಕು

ತ್ತಿದ್ದಿತು. ಎರಡು ದಿನ ಗೋಳುಗುಟ್ಟಿಸಿ, ರೂಪಾಯಿ ಕಸಿದು ಕೊಂಡು, 'ಎವಿಡೆನ್ಸ್' ಸಾಲದು ಎಂದು ಒಂದು 'ಬಿ ಷೀಟ್' ಕೊಟ್ಟಿದ್ದರೆ ಮುಗಿದುಹೋಗುತ್ತಿದ್ದಿತು. ಈ ಹಾಳು ಆಫೀಸರ್ ಜೊತೆ ಬಂದು, ಕೆಲಸ ಕೆಟ್ಟುಹೋಗಿದೆ" ಎಂದು ಯೋಚಿಸಿ.

ವೆಂಕ್ಟ್ರೊಬ್ಬನು "ಸರಿ. ಅರ್ಥವಾಯಿತು. ಗಂಡ ನನ್ನನ್ನು ಹಣ ಕೇಳಿದರೆ, ನಾನು ಕೊಡಲಿಲ್ಲ. ಅವನಲ್ಲಿಯೋ ಆತ್ರ ಕೊಂಡಿದ್ದಾನೆ. ಅದನ್ನು ಕಂಡು ಅವಳಿಗೆ ಮರುಕಹುಟ್ಟಿದೆ. ಹೀಗೆ ಮಾಡಿಬಿಟ್ಟಿದ್ದಾಳೆ. ಅಯ್ಯೋ! ಹಾಳು ಹುಡುಗಿ! ನನ್ನ ಹತ್ತಿರಲೇ ತೆಗೆದುಕೊಳ್ಳಬಾರದಾಗಿತ್ತೆ? ಪೆಟ್ಟಿಗೆಯ ಬೀಗದ ಕೈಯ್ಗಳೆರಡೂ ನಿನ್ನ ಹತ್ತಿರಲೇ ಇತ್ತಲ್ಲಾ! ಎಲ್ಲಿ? ಹೇಗೆ ತೆಗೆದುಕೊಳ್ಳುವುದು? ನಾನು ಕೊಠಡಿಯಲ್ಲಿಯೇ ಇಟ್ಟಿದ್ದೆನಲ್ಲ! ಹುಡುಗಿಗೆ ಹೀಗೆ ಗಂಡನಲ್ಲಿ ಇಷ್ಟು ಆಸೆ ಎಂದು ತಿಳಿದಿದ್ದರೆ ಕೊಟ್ಟು ಬಿಡುತ್ತಿದ್ದೆನಲ್ಲಾ" ಎಂದುಕೊಳ್ಳುತ್ತಿದ್ದನು.

ಹುಟ್ಟಿದ ಯೋಚನೆಯೂ ಬಲಪಟ್ಟು ಸಿದ್ಧಾಂತವಾಗುವುದಕ್ಕೆ ಬಹಳ ಹೊತ್ತು ಬೇಕಾಗಿಲ್ಲ. ನಿರಾಧಾರವಾಗಿರುವಾಗಲಂತೂ ನಿರ್ಧಾರವಾಗುವುದು ಬಹುಬೇಗ. ಕೊನೆಗೆ ಹಾಗೆಯೇ ನಡೆದಿರ ಬೇಕೆಂದು ಖಂಡಿತ ಮಾಡಿಕೊಂಡು, "ದಫೇದಾರ್ರೆ! ಕದ್ದವನು ನಾನಲ್ಲ. ಕಳ್ಳರು ಯಾರು ಎನ್ನುವುದು ಊಹಿಸಿದ್ದೇನೆ. ದಯ ವಿಟ್ಟು ನನ್ನನ್ನು ಬಿಡಿಸಿ ಬಿಡಿ. ಅವರ ರೂಪಾಯಿ ಅವರಿಗೆ ಕೊಟ್ಟುಬಿಡುತ್ತೇನೆ. ತಮಗೂ ಏನಾದರೂ ಸಂಭಾವನೆ ಕೊಡು ತ್ತೇನೆ" ಎಂದನು. ಸಂಭಾವನೆ ಎನ್ನುತ್ತಲೇ ದಫೇದಾರ್ರಿಗೆ ಕಿವಿ ನೆಟ್ಟಗಾಯಿತು. "ಸಾಹೇಬರಿಗೆ ಅವರ ಹಣ ಅವರಿಗೆ ಬಂದ ಮೇಲೆ, ಇನ್ನೇನು? ತನಗೂ ಚೆನ್ನಾಗಿದೆ, ಇರಲಿ" ಎಂದುಕೊಂಡು "ಹಾಗಾದರೆ ಸಾಹೇಬರ ಹತ್ತಿರಲೇ ಈ ಮಾತು ಹೇಳುವಿರೋ?" ಎಂದನು. ವೆಂಕಟರಮಣಯ್ಯನೂ ಒಪ್ಪಿಕೊಂಡನು. ಇಬ್ಬರೂ ನೇರವಾಗಿ ಹೋಗಿ ಸಾಹೇಬರನ್ನು ನೋಡಿದರು.

ಸಾಹೇಬರ ಪರಿಚಯವು ಪಾರುಪತ್ತೇದಾರರಿಗೆ ಇಲ್ಲವಾದರೂ ಇವರ ಗುರುತು ಅವರಿಗೆ ಸಂಪೂರ್ಣವಾಗಿ ಉಂಟೆಂಬಂತೆ ತೋರಿತು. "ಬನ್ನಿ ಕುಳಿತುಕೊಳ್ಳಿ" ಎಂದು ಒಂದು ಕುರ್ಚಿ ಕೊಟ್ಟು ಕೂರಿಸಿದರು. ದಫೇದಾರರಿಗೆ ಸಂಕಟ "ಕದ್ದ ಕಳ್ಳನಿಗೆ ಕುರ್ಚಿಕೊಟ್ಟರಲ್ಲಾ!" ಎಂದು.

ವೆಂಕಟರಮಣಯ್ಯನು ಕುಳಿತುಕೊಳ್ಳಲಿಲ್ಲ. ಕೈಕಟ್ಟಿಕೊಂಡು ವಿನಯದಿಂದ "ಸ್ವಾಮಿ! ಕ್ಷಮಿಸಬೇಕು. ತಮ್ಮಲ್ಲಿ ಹಣ ಕದ್ದವರು ಯಾರೆಂಬುದನ್ನು ನಾನು ಬಲ್ಲೆ. ಆದರೆ ಹೇಳಿಕೊಳ್ಳುವ ಹಾಗಿಲ್ಲ. ತಮ್ಮ ಹಣವನ್ನು ವಾಪಸು ನಿಮಗೆ ತಂದುಕೊಡುತ್ತೇನೆ. ನನ್ನನ್ನು ಬಿಟ್ಟುಬಿಡುವುದು ಅಪ್ಪಣೆಯಾಗಬೇಕು" ಎಂದು ಕೇಳಿಕೊಂಡನು. ಸಾಹೇಬರಿಗೆ ಕುತೂಹಲವು ಹೆಚ್ಚಿ "ಹಾಗಾದರೆ ಕದ್ದವರು ಯಾರು?" ಎಂದರು. ವೆಂಕಟರಮಣಯ್ಯನಿಗೆ ಕಷ್ಟಕ್ಕೆ ಬಂದಿತು. ಯತ್ನವಿಲ್ಲದೆ "ಸ್ವಾಮಿ! ಕದ್ದವಳು ನಮ್ಮ ಹುಡುಗಿ. ಗಂಡನಿಗಾಗಿ ಕದ್ದಿದ್ದಾಳೆ. ತಿಳಿಯದೆ ಮಾಡಿದ್ದಾಳೆ. ಕ್ಷಮಿಸಬೇಕು. ಇಲ್ಲವಾದರೆ ಮಾನ ಹೋಗುತ್ತದೆ" ಎಂದನು.

ಸಾಹೇಬರ ಮುಖವು ಗಂಭೀರವಾಯಿತು. "ಸುಂದರಾನೇ?" ಎಂದರು. ಪಾರುಪತ್ತೇಗಾರನು ಹೌದೆಂದರೂ, 'ಇವರಿಗೆ ಮಗಳ ಹೆಸರು ಹೇಗೆ ತಿಳಿಯಿತು?' ಎಂದು ಒಂದು ಪ್ರಶ್ನೆ ಹುಟ್ಟಿತು. ಆದರೆ ಆಫೀಸರ್ರು! ಕೇಳುವುದು ಹೇಗೆ?

ಕೊನೆಗೆ ವೆಂಕಟರಮಣಯ್ಯನಿಗೆ ಬಂಧನ ಮೋಕ್ಷವಾಯಿತು. ಸಾಹೇಬರೇ ಸ್ವಂತವಾಗಿ ದಫೇದಾರರನ್ನು ಕರೆದು "ಇವರನ್ನು ಬಿಟ್ಟು ಬಿಡಿ" ಎಂದರು. ಆದರೂ ದಫೇದಾರರು ತಮ್ಮ ಬಹುಮಾನ ತಮಗೆ ಬರುವವರೆಗೂ ಬಿಡುವುದೆಲ್ಲಿ?

ದಾರಿಯಲ್ಲಿ ಕೃಷ್ಣಮೂರ್ತಿಯು ಸಿಕ್ಕಿದನು. ಮಾವನವರನ್ನು ಬಿಡಿಸುವ ಯತ್ನವು ಸಫಲವಾಗಲಿಲ್ಲ. ಕೊನೆಗೆ ತಾನೇ

ಸಾಹೇಬರ ಬಳಿಗೆ ಹೋದನು. ಆದರೆ ಅವರೊಡನೆ ಏನು ಹೇಳಬೇಕು? ಏನೂ ಹೇಳದೆ ಹೋದರೆ ಮಾವನನ್ನು ಬಿಡಿಸುವುದು ಹೇಗೆ? ಕೊನೆಗೆ ಏನಾದರೂ ಹೇಳಿಬಿಡುವೆನೆಂದುಕೊಂಡು ಅವರ ಮುಂದೆ ಹೋಗಿ ನಿಂತನು. "ಯಾರು ನೀವು?" ಎಂಬ ಪ್ರಶ್ನೆಗೆ ಉತ್ತರವಾಗಿ, "ನಾನು ಪಾರುಪತ್ತೆಗಾರರ ಅಳಿಯ ಕೃಷ್ಣಮೂರ್ತಿ" ಎಂದನು ಸಾಹೇಬರಿಗೆ ಈ ಮೂರ್ತಿಯನ್ನು ನೋಡಲು ಆಶೆಯಿದ್ದರೂ, ಹೀಗೆ ತಟ್ಟನೆ ನೋಡಲು ಅವರು ಸಿದ್ಧರಾಗಿರಲಿಲ್ಲ. "ಅವಳ ಗಂಡನೇ ಇವನು?" ಮನಸ್ಸಿನ ಅಲ್ಲೋಲಕಲ್ಲೋಲವನ್ನು ಹೊರಗೆಡವದೆ "ಏನು ಬಂದಿರಿ?" ಎಂದರು; "ಸ್ವಾಮಿ! ನಮ್ಮ ಮಾವನವರು ತಮ್ಮಲ್ಲಿ ಹಣ ಕದ್ದರೆಂದು ಅವರನ್ನು ಪೋಲೀಸಿಗೆ ಕೊಟ್ಟಿದ್ದೀರಂತೆ. ಕದ್ದವರು ಅವರಲ್ಲ. ಬೇರೆ. ಅವರನ್ನು ಬಿಡಿಸಿಬಿಡಿ" ಎಂದನು. ಮಾತು ಖಂಡಿತವಾಗಿತ್ತು. ಮಾತಿನಲ್ಲಿ ವಿನಯವೂ ಸ್ಥೈರ್ಯವೂ ಇತ್ತು. "ಹೌದು. ಅವರೂ ಹಾಗೆಯೇ ಎಂದರು. ಆದರೆ ಕಳ್ಳರಾರು ಎಂಬುದು ತಿಳಿಯಬೇಕಲ್ಲಾ!" ಎಂದರು. ಕೃಷ್ಣಮೂರ್ತಿಯು "ಕಳ್ಳನು ತಮ್ಮೆದುರಿಗೇ ನಿಂತಿದ್ದಾನೆ ಕದ್ದವನು ನಾನು" ಎಂದನು. ಸಾಹೇಬರಿಗೆ ಅತ್ಯಾಶ್ಚರ್ಯವಾಯಿತು. ಕದ್ದ ಕಳ್ಳನು ತಾನೇ ಬಂದು ಹೇಳಿಕೊಳ್ಳುವುದುಂಟೆ? ಅಸತ್ಯದ ಮೂಟೆಯಾದ ಪ್ರಪಂಚದಲ್ಲಿ ಸತ್ಯವು ಕಣ್ಣಿಗೆ ಬಿದ್ದರೆ ನಂಬುವುದು ಸಾಧ್ಯವೆ?

ಆಫೀಸರು "ಇರಲಾರದು. ನಾನು ರಾತ್ರಿಯೆಲ್ಲಾ ಇಲ್ಲೇ ಇದ್ದೆ. ಅಲ್ಲದೆ ಚೂರಿಯು ನಮ್ಮ ಆ—ನಿಮ್ಮ ಮಾವನವರದು" ಎಂದರು.

ಕೃಷ್ಣಮೂರ್ತಿಯು ಒಂದು ಗಳಿಗೆ ಹಿಂದು ಮುಂದೆ ನೋಡಿದನು. ಒಂದು ಗಳಿಗೆ ಅಸ್ಥಿರನಾಗಿದ್ದು ಮತ್ತೆ ಔಡುಕಚ್ಚಿದ ದೃಢ ಮನಸ್ಸಿನಿಂದ ಹೇಳಿದನು. "ಹೌದು! ಚೂರಿಯು ಅವರದೆ. ಆದರೆ ಕದ್ದವನು ನಾನೇ! ತಾವು ನಾಯಿ ಕಟ್ಟುವುದಕ್ಕೆ ಹೊರಗೆ

ಹೋದಿರಿ. ನಾನು ಒಳಗೆ ಬಂದೆ. ನಾನು ಮತ್ತೆ ಹೊರಗೆ ಹೋಗುವುದರೊಳಗಾಗಿ ತಾವು ಬಂದುಬಿಟ್ಟಿರಿ. ಕೊನೆಗೆ ನಾನು ಓಡಿಹೋಗುವುದಕ್ಕೆ ಅವಕಾಶವಾದಾಗ ಅವಸರದಲ್ಲಿ ಚೂರಿಯನ್ನು ಮರೆತುಬಿಟ್ಟೆ'' ಎಂದನು.

''ನೀವು ಓಡಿಹೋದಾಗ ಎಷ್ಟುಹೊತ್ತು?''

''ಸುಮಾರು ನಾಲ್ಕು ಗಂಟೆ?''

ಆಫೀಸರಿಗೆ ತಲೆಯಮೇಲೆಸಿಡಿಲುಬಿದ್ದಂತಾಯಿತು. ನಾಲಗೆ, ಗಂಟಲು, ಎಲ್ಲಾ ಒಣಗಿಹೋಯಿತು ಬಹುಕಷ್ಟದಿಂದ,ನಿರ್ದ್ರವವಾದ ಬರಿಯ ಧ್ವನಿಯಿಂದ, ''ಹಾಗಾದರೆ.............'' ಎಂದರು. ಕೃಷ್ಣಮೂರ್ತಿಯು ಕೂಡಲೇ ಅದೇ ಗಂಭೀರ, ಸ್ಥಿರ, ಅಚಲಿತ ವಾದ ಮುಖ ಮುದ್ರೆಯಿಂದ ''ಹೌದು. ನಾನು ನಡೆದುದನ್ನೆಲ್ಲಾ ಬಲ್ಲೆ. ಇಲ್ಲಿಯೇ ಇದೇ ಮಂಚದ ಕೆಳಗೆ ಕುಳಿತಿದ್ದೆ. ತಾವು ನೆಲದಮೇಲೆ ಬಿದ್ದಾಗ ತಮ್ಮನ್ನು ಎತ್ತುವುದಕ್ಕೆ ಅವಳು........ ಆ........ಆಕೆಯು ಬಗ್ಗಿದಾಗ ನನ್ನನ್ನು ಕಾಣಬಹುದೆಂದಿದ್ದೆ. ಕಾಣ ಲಿಲ್ಲ. '' ಕೊನೆಗೆ ಗಂಟಲು ಒಣಗಿತು. ಒಮ್ಮೆ ನೀರು ನುಂಗಿ ಮತ್ತೆ ಹೇಳಿದನು. ''ದೀಪವಾರಿದಾಗ ಓಡಿಹೋದೆ'' ಎಂದನು.

ಆಫೀಸರಿಗೆ ತಲೆ ತಿರುಗಿತು. ಕಣ್ಣು ಕತ್ತಲೆಯಾಯಿತು. ನೆಲವು ಬಾಯಿಬಿಟ್ಟು ನುಂಗಿಬಿಟ್ಟಿದ್ದರೆ, ಅವರಿಗೆ ಎಷ್ಟೋ ಸಂತೋಷವಾಗುತಿದ್ದಿತು.

ಸುಮಾರು ಅರೆಗಂಟೆ ಹೊತ್ತು ಒಬ್ಬರೂ ಮಾತನಾಡಲಿಲ್ಲ. ಇಬ್ಬರೂ ತಲೆ ತಗ್ಗಿಸಿದ್ದರು. ಒಬ್ಬರಿಗೆ ಕಣ್ಣಿನಲ್ಲಿ ನೀರು ಬರುವ ಸ್ಥಿತಿ ಇದ್ದರೂ ದೇಹದಲ್ಲಿ ದ್ರವವಿಲ್ಲದುದರಿಂದ ಕಣ್ಣಿನಲ್ಲಿ ನೀರು ಬರುತ್ತಿರಲಿಲ್ಲ. ಮತ್ತೊಬ್ಬರಿಗೆ ಹೃದಯವೆಲ್ಲ ಕರಗಿ ಕಣ್ಣಿನಲ್ಲಿ ನೀರಾಗಿ ಹರಿಯುತಿದ್ದಿತು.

ಕೊನೆಗೆ ರಾಮು "ನೀವು ನನಗೆ ಅಪರಿಚಿತರು. ಆದರೂ ನಿಮಗೆ ತಿಳಿಯದ ವಿಷಯವಲ್ಲ. ನಿಮ್ಮಲ್ಲಿ ನನ್ನದೊಂದು ಬೇಡಿಕೆಯುಂಟು. ಸಲಿಸ ಬಲ್ಲಿರಾ?" ಎಂದು ಬೇಡಿಕೊಂಡನು. ಮಾತಿನಲ್ಲಿ ದೈನ್ಯವು ಮನೆಮಾಡಿತ್ತು. ಹೃದಯವು ಕರಗಿ ಹೋಗುವಂತಿರುವ ಆ ಪ್ರಾರ್ಥನೆಯನ್ನು ಕೃಷ್ಣಮೂರ್ತಿಯು ಸಲ್ಲಿಸುವುದಿಲ್ಲವೆಂಬುದೆಂತು? "ಅಪ್ಪಣೆಯಾಗಲಿ" ಎಂದನು. ರಾಮು "ಆ ಹುಡುಗಿಯು ನನ್ನ ಪ್ರಾಣ. ಅವಳನ್ನು ಗೆಲ್ಲಿಸಿಕೊಡಬೇಕು. ನೀವು ಕೇಳಿದುದನ್ನು ಕೊಡುವೆನು. ಹೇಳಿದುದನ್ನು ಮಾಡುವೆನು. ನಿಮ್ಮ ದಾಸಾನುದಾಸನಾಗುತ್ತೇನೆ. ಒಪ್ಪ ಮಾಡಲಾರಿರಾ?" ಎಂದನು. ಕೃಷ್ಣಮೂರ್ತಿಯು ಸುಮ್ಮನಾಗಿ ಅಳುತ್ತಿದ್ದವನು ಬಿಕ್ಕಳಿಸಿ ಬಿಕ್ಕಳಿಸಿ ಅತ್ತುಬಿಟ್ಟನು. ಕೊನೆಗೆ ಬಿಕ್ಕಳಿಕೆಯ ಮಧ್ಯದಲ್ಲಿ "ಸ್ವಾಮಿ! ತಾವೆಂದುದು ನಿಜ. ಆಕೆಯು ದಿವ್ಯಧಾಮದ ದೇವಿ. ನಾನು ನರಲೋಕದ ಪಶು. ಸ್ವರ್ಗದ ದೇವಿಯೆಂದು ತಿಳಿಯದೆ ದಡ್ಡನಾಗಿದ್ದೆ. ಇನ್ನು ಮುಂದೆ ಹಗಲಿರುಳೂ ಆಕೆಯ ಸುಖಕ್ಕಾಗಿ ಬದುಕೆಲ್ಲ ದುಡಿಯುವೆನು. ನನ್ನ ಸರ್ವಶಕ್ತಿಯಿಂದಲೂ ಆಕೆಯನ್ನಾರಾಧಿಸುವೆನು. ನನ್ನ ಬಯಕೆಯು ಸಫಲವಾಗುವಂತೆ ತಾವು ಆಶೀರ್ವಾದ ಮಾಡಿ" ಎಂದು ರಾಮು ಸ್ವಾಮಿಯ ಕಾಲಿಗೆ ಬಿದ್ದನು.

ಆ ವೇಳೆಗೆ ಸರಿಯಾಗಿ ಪಾಳೆಪತ್ತೇಗಾರರೂ ಬಂದರು. ಅಳಿಯನು ಆಫೀಸರ ಪಾದಮೂಲದಲ್ಲಿ ಬಿದ್ದುದನ್ನು ಕಂಡು, ಅವರಿಗೆ ತಮ್ಮ ಊಹೆಯೇ ಸರಿಯೆನಿಸಿತು. ಮನೆಗೆ ಹೋಗಿ ಮಗಳನ್ನು ಕೇಳಿದಾಗ, ಅವಳು ಒಪ್ಪಿಕೊಂಡಾಗ, ಹುಟ್ಟಿದ್ದ ಸಂಶಯವು ದೂರವಾಯಿತು. ಹಣ ಕೊಡಬೇಕೆಂದು ವ್ಯಥೆಪಟ್ಟುಕೊಳ್ಳುತ್ತಾ, ಪಂಚೆಯ ಸೆರಗಿನಲ್ಲಿ ಗಂಟುಹಾಕಿದ್ದ ಹಣವನ್ನು ಬಿಚ್ಚಿ ಎಣಿಸಿ, ಆಫೀಸರ ಮುಂದೆ ನೆಲದ ಮೇಲಿಟ್ಟು — ಮೇಜಿನ ಮೇಲಿಡುವುದಕ್ಕೆ ಹೆದರಿಕೆ — ಕೈ ಮುಗಿದುಕೊಂಡು "ಮಹಾಸ್ವಾಮಿ! ಹಣವನ್ನು ಒಪ್ಪಿಸಿಕೊಳ್ಳಬೇಕು." ಎಂದರು.

ಆಫೀಸರು "ಹಣವು ತಮ್ಮಲ್ಲೇ ಇರಲಿ. ಇಟ್ಟುಕೊಂಡಿರಿ." ಎಂದರು.

ವೆಂಕಟರಮಣಯ್ಯನವರಿಗೆ ಹಣವು ಉಳಿಯಿತೆಂದು ಪರಮ ಸಂತೋಷವಾಯಿತು

✦ ✦ ✦ ✦ ✦

ಮರುದಿನ ವೆಂಕಟರಮಣಯ್ಯನವರ ಮನೆಯಲ್ಲಿ ಔತಣ. ಮುದುಕನಿಗೆ ಅತ್ಯಾಶ್ಚರ್ಯ. ಗಂಡಹೆಂಡಿರು ಒಬ್ಬರೊಬ್ಬರು ಸರಿಯಾಗಿ ಮುಖಕೊಟ್ಟು ಮಾತನಾಡಿದುದನ್ನೇ ಆತನದುವರೆಗೆ ಕಂಡಿರಲಿಲ್ಲ. ಇಂದು ಇಬ್ಬರೂ ಅತ್ಯಂತ ಆದರದಿಂದ, ಬಲು ಸಂಭ್ರಮದಿಂದ ಓಡಾಡುತ್ತಿದ್ದಾರೆ.

ಊಟ ಮಾಡುವಾಗ ಸುಂದರಿಯು "ಅಡಿಗೆ ಹೇಗಿದೆ? ರಾಮೂ!" ಎಂದಳು. ರಾಮುವೂ "ನೀನು ಮಾಡುವುದು ಯಾವುದು ಚನ್ನಾಗಿರುವುದಿಲ್ಲವಮ್ಮಾ!" ಎಂದನು ವೆಂಕಟರಮಣಯ್ಯನಿಗೆ ಕಣ್ಣು ಅರಳಿತು. ಹಾಗಾದರೆ, ಸಾಹೇಬರು ರಾಮೂನೆ? ಅದಕ್ಕೇ ಹಣವನ್ನು ಹಿಂತಿರುಗಿ ಕೊಟ್ಟದು?

ಕೊನೆಗೆ ಮೂವರೂ ಸೇರಿದರು. ಅಡಕೆಲೆಯನ್ನು ಹಾಕಿಕೊಳ್ಳುತ್ತಾ ಆಮಾತು ಈಮಾತು ಬಂದು ರಾಮೂವು "ಏನೋಪ್ಪ! ಏನಾದರೂ ಆಗಲಿ ಸುಂದರ ಅಂತಹ ತಾಯಿ ಇರಬೇಕಪ್ಪ. ಜನ್ಮಜನ್ಮಾಂತರಕ್ಕೂ ಇವಳೇ ತಾಯಿಯಾಗಲಪ್ಪ!" ಎಂದನು. ಕೃಷ್ಣಮೂರ್ತಿಯು "ನನಗೂ ಇಂತಹವಳೇ ಹೆಂಡತಿಯಾಗಲಿ ಎನ್ನಿಸುತ್ತದೆ. ಆದರೆ ಒಂದು ಮಾತ್ರ ಕಷ್ಟ ಆಕೆಯು ಇನ್ನೊಬ್ಬರಿಗೆ ಮುತ್ತುಕೊಡುವುದನ್ನು ನೋಡುವುದು ಮಾತ್ರ........" ಎಂದನು.

ರಾಮೂ ಸುಂದರಿಯರು ಮುಖವನ್ನು ತಗ್ಗಿಸಿದರು. ಕೃಷ್ಣಮೂರ್ತಿಗೂ ನಾಚಿಕೆಯಾಯಿತು.

ಸುಂದರಿಯು ಮನದಲ್ಲಿಯೇ "ಮನವೊಪ್ಪಿದವನನ್ನು ಮಡ ವೆಯಾಗುವ ಭಾಗ್ಯವು ನನ್ನದಾಗಲಿ" ಎಂದುಕೊಂಡಳು.



## ಉಪಸಂಹಾರ.



ವೆಂಕಟರಮಣಯ್ಯನು ಈಗ ಛತ್ರದಲ್ಲಿಲ್ಲ. ಮೈಸೂರಿನಲ್ಲಿ ದ್ದಾನೆ. ಗಂಡಹೆಂಡಿರು ಬಹಳ ಅನುಕೂಲರಾಗಿದ್ದಾರೆಂದು ಮೊನ್ನೆ ಯಾರೋ ಹೇಳಿದರು. ರಾಮಸ್ವಾಮಿಗೆ ಮದುವೆಯಂತೆ.



ಸಂಪೂರ್ಣ.





ಮಕ್ಕಳಿಗಾಗಿಯೇ

ಹೊರಡುವ

ಉತ್ತಮ ವರ್ಗದ

ಸಚಿತ್ರ ಮಾಸಪತ್ರಿಕೆ.

ಚಂದಾ ವರ್ಷಕ್ಕೆ ರೂ. ೩

ಕೃಷ್ಣಾ ಕಂಪೆನಿ,

ಬಳೇಪೇಟೆ, ಬೆಂಗಳೂರು ಸಿಟಿ

# ಹಿಂದೂ ಧರ್ಮವೀರ
# ಸ್ವಾಮಿ ಶ್ರದ್ಧಾನಂದರವರ ಜೀವನ ಚರಿತ್ರೆ.

---

"ಎಂದು ನಾನು ಪವಿತ್ರವಾದ ಸನ್ಯಾಸಾಶ್ರಮವನ್ನು ಸ್ವೀಕರಿಸಿ ದೆನೋ ಅಂದು ನಾನು ನನ್ನ ಸಂಸಾರವನ್ನು ಬಿಟ್ಟು, ಸಮಗ್ರ ಜಗತ್ತಿನ ಸಂಸಾರ ಭಾರವನ್ನು ವಹಿಸಿದೆನು. ಈ ಜಗತ್ತೇ ನನ್ನ ಕುಟುಂಬ ಪರಿವಾರವೆಂದು ಭಾವಿಸಿದೆನು. ಜಗತ್ತಿನ ಎಲ್ಲ ವಸ್ತುಗಳನ್ನು ಸಮ ದೃಷ್ಟಿಯಿಂದ ನೋಡಲಾರಂಭಿಸಿದೆನು. ಲೋಕಲಜ್ಜೆಯನ್ನು ತ್ಯಜಿಸಿ ಲೋಕ ಕಲ್ಯಾಣದ ಕಡೆಗೆ ನನ್ನ ಮನಸ್ಸನ್ನು ತಿರುಗಿಸಿದೆನು. . . ನಿರ್ಭ ಯವಾಗಿಯೂ, ನಿರ್ದಾಕ್ಷಿಣ್ಯವಾಗಿಯೂ ಸತ್ಯಪಾಲನೆಯನ್ನು ಮಾಡು ವುದೇ ಸನ್ಯಾಸಪರಂಪರೆಯ ರಹಸ್ಯವು. ಇದೀ ಜಗತ್ತಿನ ಸೇವೆಯನ್ನು ಮಾಡುವುದು ಸನ್ಯಾಸಾಶ್ರಮದ ಮುಖ್ಯ ಧರ್ಮವು. ಈ ಆಶ್ರಮ ಧರ್ಮ ಪಾಲನೆಯಿಂದ, ಭಾರತಮಾತೆಯ ಸಂತಾನದೊಂದಿಗೆ ನನ್ನ ಭವಿತವ್ಯವೂ ಉಜ್ವಲಿತವಾಗುವುದೆಂದು ನನಗೆ ಭರವಸೆಯುಂಟಾಗಿದೆ."—<u>ಅಮೃತಸರ ಕಾಂಗ್ರೆಸ್ ಸಭೆಯಲ್ಲಿ ಸ್ವಾಗತ ಸಭೆಯ ಅಧ್ಯಕ್ಷರಾಗಿ ಸ್ವಾಮಿ ಶ್ರದ್ಧಾ ನಂದರು ಮಾಡಿದ ಭಾಷಣದಿಂದ.</u>

ಇಪ್ಪತ್ತೊಂದನೆಯ ಶತಮಾನ ಎಂದರೆ ಈ ಶತಮಾನವು ಈ ದೇಶದ ಮುಂದಿನ ಚರಿತ್ರೆಯಲ್ಲಿ ಸುವರ್ಣದಿಂದ ಅಂಕಿತವಾಗುವುದಾಗಿದೆ. ಏಕೆಂದರೆ ಈಗ ಹಿಂದೂ ಸಮಾಜೋದ್ಧಾರಣೆಗಾಗಿ ಹಿಂದೂ ಸಮಾಜವು ಜಾಗೃತವಾಗಿದ್ದಷ್ಟು ಕಳೆದ ಒಂದೆರಡು ಶತಮಾನಗಳಲ್ಲಿ ಆಗಿರಲಿಲ್ಲ. ಈ ಮುಂಚೆ ಎಂದರೆ ೧೯ನೆಯ ಶತಮಾನದಲ್ಲಿ ಹಿಂದೂ ಧರ್ಮ ಜಾಗೃತಿ ಗಾಗಿ ಅಲ್ಲಲ್ಲಿ ಕೆಲವು ಮಹಾ ಪುರುಷರು ಅವತರಿಸಿ ಆ ಕಾರ್ಯವನ್ನು

ಮಾಡಿದರು. ಆದರೆ ಅವರ ಉಪದೇಶಗಳಿಂದ ಸಮಾಜವು ಜಾಗೃತಿ ಗೊಂಡು ಎಷ್ಟು ಪ್ರಬಲವಾಗಿ ಬೆಳೆಯಬೇಕಾಗಿದ್ದಿತೊ ಆ ರೀತಿಯಾಗಿ ಬೆಳೆಯಲಿಲ್ಲ. ಅದರಿಂದ ನಮ್ಮ ಸಮಾಜದ ತಳಹದಿಯು ಸಡಿಲವಾಗಿ, ಇದರಮೇಲೆ ಜಾಗೃತಿಗೊಂಡಿದ್ದರೂ ಧರ್ಮಾಂಧವಾಗಿರುವ ವಿಧರ್ಮಿಯ ಸಮಾಜದಿಂದ ಹಿಂದೂ ಸಮಾಜದಮೇಲೆ ಅನೇಕ ಅತ್ಯಾಚಾರಗಳು ನಡೆ ಯಲಾರಂಭವಾಗಿವೆ. ಇದುವರೆಗೆ ಕೇವಲ ರಾಜಕಾರಣಗಳಲ್ಲಿಯೆ ಮಗ್ನ ರಾಗಿದ್ದ ಪಂಡಿತ ಮದನಮೋಹನ ಮಾಲವೀಯ, ಲಾಲಾ ಲಜಪತ ರಾಯ—ಇವರೇ ಮೊದಲಾಗಿ ಹಲವು ದೇಶಧುರೀಣರು ಈಗೀಗ ಹಿಂದೂ ಸಮಾಜರಕ್ಷಣೆ, ಹಿಂದೂ ಧರ್ಮರಕ್ಷಣೆಗಳ ಕಾರ್ಯಗಳಲ್ಲಿ ಕೈಹಾಕಿ ರುವುದನ್ನು ನೋಡಿದರೆ ಅದೊಂದು ಬಗೆಯಾದ ತೃಪ್ತಿಯುಂಟಾಗುತ್ತಿದೆ. ಆದರೆ ಸಮಾಜೋದ್ಧಾರಣೆಯ ಕಾರ್ಯವೆಂದರೆ ಅದೊಂದು ಬಗೆಯ ಯಜ್ಞವು. ಈ ಯಜ್ಞದಿಂದ ವಿಧರ್ಮಿಯರನೇಕರು ಪ್ರಕೋಪಗೊ ಳ್ಳಲು ಕಾರಣವಿದೆ. ಏಕೆಂದರೆ ನಿಜವಾಗಿ ಹಿಂದೂ ಸಮಾಜವು ಪುಷ್ಟಿ ಗೊಂಡುದಾದರೆ ಸಮಗ್ರ ಮಾನವ ಪ್ರಪಂಚದಲ್ಲಿ ಲನೆಯ ೧ ಭಾಗವು ಪುಷ್ಟಿಗೊಂಡಂತಾಗುವುದು. ಆದುದರಿಂದ ಈ ದೊಡ್ಡ ಯಜ್ಞದಲ್ಲಿ ಕೇವಲ ಮೂಕ ಪಶುಗಳ ಬಲಿಯಲ್ಲ, ಮಾನವರ ಬಲಿಯಾಗಬೇಕಾಗಿ ದೈವ ಸಂಕಲ್ಪವಿದ್ದಂತೆ ತೋರುವುದು. ಇದಕ್ಕೆ ತನ್ನ ಸಮಗ್ರ ಆಯುಷ್ಯವನ್ನು ಹಿಂದೂದೇಶ, ಹಿಂದೂಸಮಾಜ, ಹಿಂದೂಧರ್ಮ— ಇವುಗಳ ಉದ್ಧಾರಣೆಗಾಗಿ ಸಮರ್ಪಿಸಿ, ಈ ಯಜ್ಞಕಾರ್ಯವು ನಾಂಗ ವಾಗಿ ಫಲಕಾರಿಯಾಗುವುದಕ್ಕಾಗಿ ತನ್ನ ದೇಹವನ್ನೂ ಕೂಡ ಬಲಿಯಾ ಗರ್ಪಿಸಿ ಆಧುನಿಕ ದಧೀಚಿಯೆನಿಸಿದ ಸ್ವಾಮಿ ಶ್ರದ್ಧಾನಂದರ ಜೀವನದ ಅಂತ್ಯವಿಧಾನವೇ ನಿದರ್ಶನವಾಗಿದೆ.

ಈ ಪುಟ್ಟ ಪುಸ್ತಕದಲ್ಲಿ ಭಾರತವರ್ಷದ ಮುಂದಣ ಜನಾಂಗವಾ ಗುವ ಈಗಣ ಯುವಕರಿಗೆ ಸ್ವಾಮಿ ಶ್ರದ್ಧಾನಂದರವರ ದಿವ್ಯ ಜೀವನದ ಸಂದೇಶವನ್ನು ತಿಳಿಸುವುದೇ ಮುಖ್ಯ ಉದ್ದೇಶವಾಗಿದೆ. ಆದುದರಿಂದ ಇವರ ಬಾಲ್ಯ ವಿದ್ಯಾಭ್ಯಾಸ ಮೊದಲಾದ ಮುಂಚಿನ ಚರಿತೆಯನ್ನು ಇಲ್ಲಿ ಬರೆಯುವುದಿಲ್ಲ. ಶ್ರದ್ಧಾನಂದರು ದೇಶ ಸೇವೆಗಾಗಿ ಎಂದು ಕರ್ತವ್ಯ

ಕ್ಷೇತ್ರದಲ್ಲಿ ಅಡಿಯಿಟ್ಟರೋ ಅಂದಿನಿಂದ ಇವರ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ಇಲ್ಲಿ ಬರೆಯಲಾರಂಭಿಸಲಾಗಿದೆ.

ಸ್ವಾಮಿ ಶ್ರದ್ಧಾನಂದರ ಪೂರ್ವಾಶ್ರಮದ ಹೆಸರು ಲಾಲಾ ಮುನಶೀರಾಮ ಎಂದಿತ್ತು. ಇವರು ಪಂಜಾಬಿಗೆ ಸೇರಿದ ಜಲಂಧರವೆಂಬ ಜಿಲ್ಲೆಯ ಮುಖ್ಯ ನಗರದಲ್ಲಿ ವಕೀಲರಾಗಿದ್ದರು. ಇವರು ಸನ್ ೧೮೮೪ನೆಯ ವರ್ಷದಲ್ಲಿ ಉತ್ತರ ಹಿಂದೂಸ್ಥಾನದಲ್ಲಿ ವೈದಿಕಧರ್ಮ ಪ್ರಚಾರದಲ್ಲಿ ಬದ್ಧಕಂಕಣರಾಗಿದ್ದ ಸ್ವಾಮಿ ದಯಾನಂದ ಸರಸ್ವತಿಗಳ ಮುಖ್ಯ ಅನುಯಾಯಿಗಳಲ್ಲೊಬ್ಬರಾಗಿ ಅವರಿಂದ ಸ್ಥಾಪಿಸಲ್ಪಟ್ಟ ಆರ್ಯ ಸಮಾಜಕ್ಕೆ ಸದಸ್ಯರಾಗಿ ಸೇರಿದರು.

ಪೂರ್ವದಲ್ಲಿ ನಮ್ಮ ಹಿಂದುಸ್ಥಾನದಲ್ಲಿ ಪ್ರಚಾರದಲ್ಲಿದ್ದ ಗುರುಕುಲ ವಿದ್ಯಾಭ್ಯಾಸ ಕ್ರಮವನ್ನು ಆಚರಣೆಯಲ್ಲಿ ತರಬೇಕೆಂದು ಸನ್ ೧೮೮೪ನೆಯ ವರ್ಷದಲ್ಲಿ "ದಿ ದಯಾನಂದ ಆಂಗ್ಲೋ ವೇದಿಕ್ ಕಾಲೇಜ್" ಎಂಬ ಮಹಾ ವಿದ್ಯಾಲಯವು ಲಾಹೋರಿನಲ್ಲಿ ಸ್ಥಾಪಿಸಲ್ಪಟ್ಟಿತು. ಆದರೆ ಸನ್ ೧೮೯೧ನೆಯ ವರ್ಷದಲ್ಲಿ ಈ ವಿದ್ಯಾಲಯದ ಪ್ರೋತ್ಸಾಹಕ ಮಂಡಲಿಯಲ್ಲಿ, "ಈ ವಿದ್ಯಾಲಯದಲ್ಲಿ ಇಂಗ್ಲಿಷ್ ವಿಜ್ಞಾನಕ್ಕೆ ಮುಖ್ಯಸ್ಥಾನವನ್ನು ಕೊಡಬೇಕೊ ವೇದಾಧ್ಯಯನಕ್ಕೆ ಪ್ರಥಮ ಸ್ಥಾನವನ್ನು ಕೊಡಬೇಕೊ" ಎಂಬ ವಿಚಾರವಾಗಿ ಭಿನ್ನಾಭಿಪ್ರಾಯಗಳು ಹುಟ್ಟಿದವು. ಅದುವರೆಗೆ ಇವರು ಆ ವಿದ್ಯಾಲಯದಲ್ಲಿ ಪಂಡಿತ ಗುರುದತ್ತವಿದ್ಯಾರ್ಥಿ, ಲೋಕ ವಿಖ್ಯಾತರಾದ ಲಾಲಾ ಲಜಪತಿರಾಯ ಮೊದಲಾದವರೊಂದಿಗೆ ಸೇರಿಕೊಂಡೇ ಕೆಲಸವನ್ನು ಮಾಡುತ್ತಿದ್ದರು. ಆಮೇಲೆ ಇವರು ಆ ವಿದ್ಯಾಲಯವನ್ನು ಬಿಟ್ಟು ಸನ್ ೧೯೦೧ನೆಯ ವರ್ಷದಲ್ಲಿ ಹರಿದ್ವಾರದ ಈಚೆಗೆ ಕಾಂಗಡೀ ಎಂಬ ಪ್ರದೇಶದಲ್ಲಿರುವ ಅರಣ್ಯದಲ್ಲಿ ಗುರುಕುಲವೆಂಬ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದರು. ಇದರ ಸ್ಥಾಪನೆಯ ವಿಷಯವಾಗಿ ಅವರೇ ಹೇಳಿರುವುದೇನಂದರೆ:—"ನಮ್ಮ ಜೀವನಕ್ರಮದಲ್ಲಿ ವೇದಗಳ ತತ್ವವನ್ನು ಅನುಸರಿಸುವಂತೆ ಶಿಕ್ಷಣವನ್ನು ಕೊಡತಕ್ಕಂಥಾ ಪಾಠಶಾಲೆಯ ಮೂಲಕ ನಮ್ಮ ಸುಧಾರಣೆಯು ಮುಂದರಿಯಬಹುದೆಂದು ನಂಬಿದವರಲ್ಲಿ ನಾನೊಬ್ಬನು. ಧಾರ್ಮಿಕ ಸುಧಾರಣೆಯ ಮೂಲಕವಾದ ದೇಶ ಸುಧಾರ

ಣೆಯೇ ನಮ್ಮ ಮೂಲ ಉದ್ದೇಶವಾಗಿತ್ತು. ಆದುದರಿಂದ ಇಂಗ್ಲೀಷು ಮತ್ತು ವಿಜ್ಞಾನದ ಮೂಲಕವೇ ದೇಶ ಸುಧಾರಣೆಯಾಗುವುದೆಂಬ ಅಭಿಪ್ರಾಯವುಳ್ಳವರು ನಮ್ಮಿಂದ ದೂರರಾದರು. ನಮ್ಮಲ್ಲಿ ಉಳಿದವರೇ ಧರ್ಮಬೋಧೆಯ ಕಡೆ ಹೆಚ್ಚು ಲಕ್ಷ್ಯವಿಟ್ಟು ಕೆಲಸಮಾಡಲಾರಂಭಿಸಿದೆವು. ಈಗ ಜನರಲ್ಲಿ "ಸಚ್ಛೀಲರೂ ಧರ್ಮಜ್ಞರೂ ಆದಂಥವರ ಆವಶ್ಯಕತೆಯು ಹೆಚ್ಚಾಗಿದೆಯೆಂದು ನಮ್ಮ ಅಭಿಪ್ರಾಯವಾಗಿದೆ. ಆದ್ದರಿಂದ ಈ ಕುಂದಕವನ್ನು ಹೋಗಲಾಡಿಸಲು ನಾವು ನಮ್ಮ ಶಕ್ತಿಯನ್ನೆಲ್ಲ ವಿನಿಯೋಗಿಸಿ ಕೆಲಸಮಾಡಲಾರಂಭಿಸಿದೆವು. ಪೂರ್ವಕಾಲದ ಧನಿಕರಿಂದಲೂ ರಾಜರಿಂದಲೂ ಉದಾರವಾಗಿ ಪೋಷಿಸಲ್ಪಟ್ಟು ಅಭಿವೃದ್ಧಿಸ್ಥಿತಿಗೆ ಬಂದಿದ್ದ ತಕ್ಷಶಿಲಾ (Taxila) ನಳಂದ ಇವೇ ಮೊದಲಾದ ಪ್ರಾಚೀನ ಹಿಂದೂ ವಿಶ್ವವಿದ್ಯಾಲಯದ ಶಿಕ್ಷಣ ಕ್ರಮವನ್ನನುಸರಿಸಬೇಕೆಂಬುದೇ ನಮ್ಮ ಧ್ಯೇಯವಾಗಿದೆ." ಈ ಧ್ಯೇಯ ಸಾಧನೆಯು ಎಂದರೆ ಈ ಬಗೆಯಾದ ಜ್ಞಾನದಾನವು ಕೂಡ ದೇಶೀಯ ಭಾಷೆಯ ಮೂಲಕವಾಗಿ ಆಗಬೇಕೆಂದು ಮುನಶೀರಾಮರು ಆಗ ಅಪೇಕ್ಷಿಸಿದ್ದರು. ಆಗ ಮಹಾತ್ಮಾ ಗಾಂಧಿಯವರ ಅಸಹಕಾರದ ಕೂಗಾಗಲಿ, ರಾಷ್ಟ್ರ ಭಾಷೆಯು ಹಿಂದೀ ಆಗಬೇಕೆಂಬ ಕೂಗಾಗಲಿ ಕೇಳಿಸುತ್ತಿರಲಿಲ್ಲ. ಮುನಶೀರಾಮರ ಮಾತೃಭಾಷೆಯು ಹಿಂದೀ ಆಗಿದ್ದರೂ ಅವರ ಶಿಕ್ಷಣವು ಊರ್ದು ಮತ್ತು ಇಂಗ್ಲೀಷು ಭಾಷೆಯ ಮೂಲಕವಾಗಿ ಆಗಿತ್ತು. ಆದಾಗ್ಯೂ ಅವರು ಅದೊಂದು ಬಗೆಯ ದೀರ್ಘ ದೃಷ್ಟಿಯನ್ನಿಟ್ಟು, ತಮ್ಮ ಗುರುಕುಲದಲ್ಲಿ ಹಿಂದೀ ಭಾಷೆಯ ಮೂಲಕವಾಗಿಯೆ ಶಿಕ್ಷಣ ಕೊಡಬೇಕೆಂದು ನಿಶ್ಚಯಿಸಿದರು. ಈಗಲೂ ಈ ಭಾಷೆಯಲ್ಲಿ ಜ್ಞಾನದಾನವು ನಡೆಯುತ್ತಿದೆ. ಇದೊಂದರಿಂದಲೆ ಮುನಶೀರಾಮರ ದೇಶಭಾಷೆಯ ಮೇಲಣ ಪ್ರೀತಿಯೂ ದೇಶಾಭಿಮಾನವೂ ವ್ಯಕ್ತವಾಗುವವು. ಅವರಿಂದ ಸ್ಥಾಪಿಸಲ್ಪಟ್ಟಿರುವ ಗುರುಕುಲವು ಮೊದಲುಮೊದಲು ಇದೊಂದು ರಾಜನೈತಿಕ ವಿದ್ಯಾಲಯ (Political Seminary) ವೊ ಎಂದು ಬಹುಜನ ಅಧಿಕಾರಿಗಳಿಗೆ ಸಂದೇಹವನ್ನುಂಟುಮಾಡಿತು. ಆ ಗುರುಕುಲದಲ್ಲಿ ಜರಗುತ್ತಿರುವ ಶಿಕ್ಷಣಕ್ರಮ, ಶರೀರವ್ಯಾಯಾಮ, ಗುರುಶಿಷ್ಯ ಜೀವನದ ಬಗೆ, ಬ್ರಹ್ಮಚರ್ಯ ನಿಯಮಗಳನ್ನು ನೋಡಿ, ಕೆಲವು ಜನ ಅಧಿಕಾರಿ

ಗಳು "ಮುನಶಿರಾಮರು ಬಲಿಷ್ಟರಾದ ಕೆಲವು ಮಂದಿ ವಿದ್ರೋಹಿಗಳನ್ನು ನಿರ್ಮಿಸಲು ಈ ಗುರುಕುಲವನ್ನು ಸ್ಥಾಪಿಸಿರುವರು" ಎಂದು ಸಂಶಯ ಪಟ್ಟರು. ಮುನಶೀರಾಮರು ತಮ್ಮ ವಿದ್ಯಾಲಯಕ್ಕೆ ಸರಕಾರದವರ ಸಹಾಯವು ಬೇಡವೆಂದು ಹೇಳಿದುದೇ ಇದಕ್ಕೆ ಕಾರಣ. ಆದರೆ ೧೯೧೩ರಲ್ಲಿ ಸಂಯುಕ್ತ ಪ್ರಾಂತದ ಗವರ್ನರಾಗಿದ್ದ ಸರ್. ಜೇಮ್ಸ್ ಮೆಸ್ಟನ್ ಸಾಹೇಬರು ಈ ಗುರುಕುಲವನ್ನು ಸಂದರ್ಶಿಸಿ, ಅಲ್ಲಿನ ಪಾಠ ಕ್ರಮಗಳನ್ನೂ, ವಿದ್ಯಾರ್ಥಿಗಳ ದೃಢಕಾಯಗಳನ್ನೂ, ಅವರ ನಡೆನುಡಿಗ ಳನ್ನೂ ನೋಡಿ, ಬಹು ಸಂತೋಷಪಟ್ಟು "ಇದು ಇತರರು ಅನುಸರಿ ಸಲು ಯೋಗ್ಯವಾದ ವಿದ್ಯಾಲಯವು" ಎಂದು ಹೇಳಿರುವರು. ಆಮೇಲೆ ಅವರು ವಿರಾಮದಿಂದಿರುವಾಗಲೆಲ್ಲ ಅಲ್ಲಿಗೆ ಹೋಗಿ ಗುರುಕುಲವನ್ನು ನೋಡಿ ಸಂತೋಷಪಡುತ್ತಿದ್ದರಲ್ಲದೇ ಮಥುರಾ (ಬೃಂದಾವನದ ಹತ್ತಿರ ವಿರುವುದು) ನಗರದಲ್ಲಿ ಆ ಗುರುಕುಲದ ಶಾಖೆಯಾದ ಮತ್ತೊಂದು ವಿದ್ಯಾಲಯಕ್ಕೆ ಅಡಿಗಲ್ಲನ್ನು ತಮ್ಮ ಸ್ವಂತ ಕೈಯಿಂದ ಇಟ್ಟರು. ಆಗ ಅವರು "ಈ ವಿದ್ಯಾಲಯದವರು ತಮ್ಮ ಪ್ರಾಚೀನ ಋಷಿಗಳ ಜೀವನ ಕ್ರಮವನ್ನನುಸರಿಸತಕ್ಕವರು, ರಾಜಭಕ್ತಿ ವಿಶ್ವಾಸವುಳ್ಳವರು. ಈಗಿನ ಪರಿಸ್ಥಿತಿಗೆ ತಕ್ಕಂತೆ ತಮ್ಮ ಧಾರ್ಮಿಕ ಮಾರ್ಗಗಳನ್ನುನೇರ್ಪಡಿಸಿರುವರು. ಮತ್ತೆ ಅಲ್ಲಿರುವ ವಿದ್ಯಾರ್ಥಿಗಳು ಬಲಿಷ್ಠರಾಗಿಯೂ, ವಿಧೇಯರಾಗಿಯೂ, ರಾಜಭಕ್ತಿಯುಳ್ಳವರಾಗಿಯೂ, ಬುದ್ಧಿಶಾಲಿಗಳಾಗಿಯೂ ಒಂದೇ ಮನಸ್ಸಿ ನಿಂದ ಕೆಲಸಮಾಡತಕ್ಕವರೂ ಆಗಿರುವರು. ಇತರ ವಿದ್ಯಾಲಯಗಳ ವಿದ್ಯಾರ್ಥಿಗಳಿಗಿಂತಲೂ ಹೆಚ್ಚು ಸೌಖ್ಯದಿಂದಿರುವವರು" ಎಂದು ಕಟ್ಟ ಡಕ್ಕೆ ಅಡಿಗಲ್ಲನ್ನಿಡುವಾಗ ಹೇಳಿರುವರು. ಈ ವಿದ್ಯಾಲಯವನ್ನು ಅನೇಕ ಜನ ಪಾಶ್ಚಾತ್ಯ ವಿದ್ವಾಂಸರು ನೋಡಿ ತಲೆದೂಗಿರುವರು. ಬೇಕಾದವರು ಆ ವಿದ್ಯಾಲಯದ ವರದಿ (ರಿಪೋರ್ಟು) ತರಿಸಿ ಅಲ್ಲಿಯ ಶಿಕ್ಷಣಕ್ರಮ ವನ್ನರಿಯಬಹುದು. ಮಹಾತ್ಮ ಮುನಶೀರಾಮರಂತಹ ವಿದ್ಯಾಭಿಮಾನಿ ಗಳು ಇನ್ನೂ ಹೆಚ್ಚುಜನ ಹುಟ್ಟಿ, ನಮ್ಮ ತರುಣರಿಗೆ ಬೇಕಾಗಿರುವ ಶಿಕ್ಷಣವನ್ನ ಕೊಡಲು ಹಿಂದೂದೇಶದ ಅನೇಕ ಭಾಗಗಳಲ್ಲಿ ಗುರು

ಕುಲದಂತಹ ವಿದ್ಯಾಲಯಗಳನ್ನು ಸ್ಥಾಪಿಸಿದರೆ ನಿಜವಾಗಿ ಅವರಿಂದ ದೇಶೋನ್ನತಿಯಾಗುತ್ತಿದ್ದಲ್ಲದೇ ಹಿಂದೂ ಸಮಾಜ ರಕ್ಷಣೆಯೂ ಆಗುವುದು.

ವೈದಿಕಧರ್ಮ ಪ್ರಚಾರ, ಬ್ರಹ್ಮಚರ್ಯ, ಗುರುಕುಲ ಜೀವನ, ಅಂತ್ಯಜೋದ್ಧಾರ, ಈಗ ರಾಷ್ಟ್ರ ಭಾಷೆಯಾಗಿರುವ ಹಿಂದೀ, ದೇವ ಭಾಷೆಯಾದ ಸಂಸ್ಕೃತ ಇವುಗಳ ಪುನಪ್ರತಿಷ್ಠಾಪನಕ್ಕಾಗಿ ತಮ್ಮ ಜೀವನವನ್ನು ಧಾರೆಯಾಗಿ ಕೊಟ್ಟು, ಅಂತರಂಗದಲ್ಲಿ ಮುನಶೀರಾಮರು ಸನ್ಯಾಸಿಗಳೇ ಆಗಿದ್ದರು. ಮುಂದೆ ಅವರ ಇಬ್ಬರು ಮಕ್ಕಳೂ ಗುರುಕುಲದಲ್ಲಿ ಶಿಕ್ಷಣವನ್ನು ಹೊಂದಿ, ಪದವಿಗಳನ್ನು ಪಡೆದರು. ಇವರಲ್ಲಿ ಒಬ್ಬನು ಜರ್ಮನಿ ದೇಶಕ್ಕೆ ಮುಂದಿನ ವಿದ್ಯಾಭ್ಯಾಸಕ್ಕಾಗಿ ಹೋಗಿ ಅಲ್ಲಿಯೂ ದೊಡ್ಡ ಪ್ರಶಸ್ತಿಯನ್ನು ಪಡೆದನು. ಆದರೆ ಆತನು ಅಲ್ಲಿದ್ದ ಹಿಂದೀಯ ವಿದ್ರೋಹಿಗಳೊಂದಿಗೆ ಸೇರಿದ್ದನೆಂಬ ದೋಷವನ್ನಾರೋಪಿಸಿ, ಆತನು ಹಿಂದೂ ದೇಶಕ್ಕೆ ಬರಲು ಅಪ್ಪಣೆಯನ್ನು ಕೊಡಲಿಲ್ಲ. ಈಗಲೂ ಆತನು ಯೂರೋಪುಖಂಡದಲ್ಲಿರುವನು. ಕಿರಿಯಮಗನಾದ ಪ್ರೊಫೆಸರ್ ಇಂದ್ರ ಎಂಬಾತನು ಈಗ "ಅರ್ಜುನ" ಎಂಬ ದೈನಿಕ (Daily) ಪತ್ರಿಕೆಯನ್ನು ಪ್ರಕಟಿಸುತ್ತಿರುವನು. ಈತನು ಮುನಶೀರಾಮರಿಗೆ ಮಂತ್ರಾಲೋಚಕನಾಗಿ ಸಹಾಯವನ್ನು ಮಾಡಲು ಸಿದ್ಧನಾದನು. ಆಗ ಮಹಾತ್ಮಾ ಮುನಶೀರಾಮರ ಕಾರ್ಯಗಳಿಂದ ಅವರ ಹೆಸರು ಉತ್ತರ ಹಿಂದೂಸ್ಥಾನದಲ್ಲಿ ಪ್ರಸಿದ್ಧವಾಗಿತ್ತು. ಪಾಶ್ಚಾತ್ಯ ದೇಶದಲ್ಲಿದ್ದರೂ ಪೌರ್ವಾತ್ಯಪ್ರಿಯರು ಪೂರ್ಣಪರರಾಗಿ ನಿಜವಾದ ಕ್ರೈಸ್ತಧರ್ಮಿಗಳಾಗಿ ದೀನಬಂಧುಗಳೆಂದು ಹಿಂದೀಯರಿಂದ ಸಂಬೋಧಿಸಲ್ಪಟ್ಟಿರುವ ಮಿಸ್ಟರ್. ಸಿ. ಎಫ್. ಆಂಡ್ರೂಜರವರು, ದಕ್ಷಿಣ ಆಫ್ರಿಕಾದಿಂದ ಮಹಾತ್ಮ ಗಾಂಧಿಯವರು ಹಿಂದೂದೇಶಕ್ಕೆ ಬರುವುದಕ್ಕೆ ಮುಂಚೆ "ನೀನು ಹಿಂದೂದೇಶಕ್ಕೆ ಹಿಂದಿರುಗಿದಾಗ ಮೂರು ನರರತ್ನಗಳನ್ನು ನೋಡಬೇಕು. ಆ ರತ್ನಗಳು ಯಾವುವೆಂದರೆ, ಸ್ವಾಮಿ ರಾಮತೀರ್ಥ, ಮಹಾತ್ಮ ಮುನಶೀರಾಮ, ಪ್ರಿನ್ಸಿಪಾಲ್ ರುದ್ರ ಇವರು." ಎಂದು ಬರೆದಿದ್ದರು. ಇದರಿಂದ ಮಾನವಕೋಟಿಯಲ್ಲಿ ಮುನಶೀರಾಮರ ಹೆಸರು ಎಷ್ಟು ಮೇಲೆ ಹೋಗಿರುವುದೆಂದು ತಿಳಿಯುವುದು. ಹೀಗೆ ಪ್ರಸಿ

ದ್ಧರಾದ ಮಹಾತ್ಮಾ ಮುನಶೀರಾಮರು ದೇಶೋದ್ಧಾರಕ್ಕಾಗಿ ತಮ್ಮ ಸರ್ವ ಸ್ವವನ್ನೂ ಸಮರ್ಪಿಸಿ ಜಗತ್ತಿನ ಸೇವೆಗಾಗಿ ಸನ್ಯಾಸ ದೀಕ್ಷೆಯನ್ನು ತೆಗೆದುಕೊಂಡು ಸ್ವಾಮಿ ಶ್ರದ್ಧಾನಂದರೆಂದು ಪ್ರಸಿದ್ಧರಾದರು.

ಮುಂದೆ, ಮಾಂಟೆಗ್ಯೂ-ಚೆಮ್ಸ್‌ಫರ್ಡರ ರಾಜಕೀಯ ಸುಧಾರಣೆಯ ಮಸೂದೆಯಿಂದ ಹಿಂದೂದೇಶದಲ್ಲಿ ಅದೊಂದು ಬಗೆಯಾದ ಉತ್ಸಾಹವು ಹುಟ್ಟಿತು. ಆಗ (೧೯೧೯ರಲ್ಲಿ) ಸ್ವಾಮಿ ಶ್ರದ್ಧಾನಂದರವರು ಗುರುಕುಲ ಭೂಮಿಯನ್ನು ಬಿಟ್ಟು ರಾಜನೀತಿಯ ಪವಿತ್ರಕ್ಷೇತ್ರದಲ್ಲಿಳಿಯಿಟ್ಟರು. ರಾಜಕೀಯ ವಿಚಾರದಲ್ಲಿ ಇವರು ಆಗತಾನೆ ಪ್ರವೇಶಿಸಿದ್ದರು. ಆ ವರ್ಷದಲ್ಲಿ ರೌಲತ್ ಕಾನೂನು ಎಂಬ ಪ್ರಜೆಗಳ ಸ್ವಾತಂತ್ರ್ಯವನ್ನು ಹಾಳು ಮಾಡತಕ್ಕ ಕಾನೂನು ನ್ಯಾಯನಿರ್ಣಾಯಕ ಸಭೆಯಲ್ಲಿ ಪ್ರಜಾಪ್ರತಿನಿಧಿಗಳಿಂದ ವಿರೋಧಿಸಲ್ಪಟ್ಟರೂ ವೈಸ್ರಾಯರಿಂದ ಅನುಮೋದಿಸಲ್ಪಟ್ಟಿತು. ಆಗ ಸಮಗ್ರ ಹಿಂದೂದೇಶದಲ್ಲಿ ದೊಡ್ಡ ಗಲಭೆಯೆದ್ದಿತು. ಆ ಸಂದರ್ಭದಲ್ಲಿ ಕವಿವರ್ಯರಾದ ರವೀಂದ್ರನಾಥ ಠಾಕೂರರೂ, ಶ್ರೀಮತಿ ಸರಳಾದೇವಿ ಚೌಧುರಾಣಿಯವರೂ ಬ್ರಿಟಿಷ್ ಸರಕಾರದಿಂದ ತಮಗೆ ದೊರೆತಿದ್ದ ಪದವಿ ಪದಕಗಳನ್ನು ಸರಕಾರಕ್ಕೆ ಹಿಂದಿರುಗಿ ಕಳುಹಿಸಿದರು. ಆ ಸಂದರ್ಭದಲ್ಲಿ ಮಹಾತ್ಮ ಗಾಂಧಿಯವರು ಸತ್ಯಾಗ್ರಹ ಚಳವಳವನ್ನಾರಂಭಿಸಿದರು. ಆಗ ದೇಶದ ಕೆಲವೆಡೆಗಳಲ್ಲಿ ಪ್ರಜೆಗಳಿಗೆ ವಿರೋಧವಾಗಿದ್ದ ಸರಕಾರಕ್ಕೆ ವಿರೋಧವಾಗಿ ಹರತಾಳಗಳು ಆಚರಿಸಲ್ಪಟ್ಟವು. ದಿಲ್ಲಿಯಲ್ಲಿ ಘೂರ್ಖಾ ಸೈನಿಕರು ಮೆರವಣಿಗೆ ಮಾಡುತ್ತಿದ್ದ ಪ್ರಜೆಗಳ ಗುಂಪನ್ನು ತಡೆದು ಗುಂಡು ಹಾರಿಸುವುದಕ್ಕೆ ಸಿದ್ಧರಾದರು. ಆಗ ಆ ಗುಂಪಿನಲ್ಲಿದ್ದ ಸ್ವಾಮಿ ಶ್ರದ್ಧಾನಂದರು ತಾವೇ ಮುಂದಾಳುಗಳಾಗಿ ಬಂದು ತಮ್ಮ "ಎದೆಗೆ ಹಾರಿಸಿ ಗುಂಡು ಹೊಡೆಯಿರಿ" ಎಂದು ಎದೆಯೊಡ್ಡಿ ನಿಂತರು. ಆ ದಿವ್ಯ ತೇಜಸ್ಸಿನ ಸನ್ಯಾಸಿಯನ್ನು ನೋಡಿ ಸೈನಿಕರು ಭ್ರಮೆಗೊಂಡು ನಿಂತುಬಿಟ್ಟರು.

ಬಳಿಕ ಅದೇ ವರ್ಷದಲ್ಲಿ ರಾಷ್ಟ್ರೀಯ (ಕಾಂಗ್ರೆಸ್) ಸಭೆಯು ಡಾಯರ್ ಸಾಹೇಬನ ಕ್ರೂರವಾದ ಜಲಿಯನ್‌ವಾಲಾಬಾಗಿನ ಕೊಲೆಯಿಂದ ಪವಿತ್ರ ಕ್ಷೇತ್ರವಾಗಿ ಮಾಡಲ್ಪಟ್ಟ ಅಮೃತಸರ ಪಟ್ಟಣದಲ್ಲಿ

ಸೇರಿತು. ಸ್ವಾಮಿ ಶ್ರದ್ಧಾನಂದರು ರಾಜಕೀಯ ಕ್ಷೇತ್ರವನ್ನು ಪ್ರವೇಶಿಸಿ ಸ್ವಲ್ಪ ಕಾಲವಾಗಿದ್ದರೂ ಅವರಾ ಅಮೋಘವಾದ ಸೇವೆಯಿಂದ ಅವರ ಹೆಸರು ಹಿಂದುಸ್ಥಾನದಲ್ಲಿ ಎಲ್ಲರಿಗೂ ಪರಿಚಯವಾಗಿತ್ತು. ಇನ್ನು ಅವರ ಕಾರ್ಯ ಕ್ಷೇತ್ರವಾಗಿದ್ದ ಪಂಜಾಬಿನಲ್ಲಿ ಕೇಳುವುದೇನು? ಅಲ್ಲಿ ಪ್ರಜೆಗಳೆಲ್ಲರೂ ಏಕಕಂಠದಿಂದ ಕಾಂಗ್ರೆಸ್ಸಿನ ಸ್ವಾಗತ ಸಮಿತಿಗೆ ಸ್ವಾಮಿಶ್ರದ್ಧಾನಂದರನ್ನೇ ಅಧ್ಯಕ್ಷರನ್ನಾಗಿ ಮಾಡಿದರು. ಶ್ರದ್ಧಾನಂದರು ಆ ಸಂದರ್ಭದಲ್ಲಿ ಎಲ್ಲ ಸನ್ಯಾಸಿಗಳಿಗೂ ಆದರ್ಶವಾಗಿರುವಂತೆ ಕೊಟ್ಟ ಸಂದೇಶ (message)ದಿಂದ ಒಂದು ಭಾಗವನ್ನು ಈ ಪುಟ್ಟ ಪುಸ್ತಕದ ಮೊದಲಿನಲ್ಲಿಯೆ ಕೊಟ್ಟಿರುವೆವು. ಅದು ಕೇವಲ ಸನ್ಯಾಸಿಗಳು ಮಾತ್ರವೇ ಅಲ್ಲ, ನಿಜವಾಗಿ ದೇಶಸೇವೆಮಾಡಬೇಕೆಂಬುವರು ಯಾವ ಭಾವನೆಗಳಿಂದ ಪ್ರೇರಿತರಾಗಬೇಕು ಎಂಬುದನ್ನು ತಿಳಿಸುವುದು. ಅಷ್ಟುಮಾತ್ರವಲ್ಲದೆ, ಆ ಸುಮುಹೂರ್ತದಲ್ಲಿ. ಸಭೆಯಲ್ಲಿ ನೆರೆದಿದ್ದ ಪ್ರತಿನಿಧಿಗಳಿಗೂ, ಸಭಿಕರಿಗೂ ಸರಿಯಾಗಿ ತಿಳಿಯುವಂತೆ ಇದೇ ಹಿಂದೀ ಭಾಷೆಯೆ ರಾಷ್ಟ್ರೀಯ ಭಾಷೆಯಾಗಬೇಕೆಂದು ನಿರ್ದೇಶಿರುವರೋ ಎಂಬ—ಪವಿತ್ರ ಕಾವೀ ವಸ್ತ್ರ ಭೂಷಿತರಾಗಿ ದಿವ್ಯ ತೇಜಸ್ಸಿನಿಂದ ಪ್ರಕಾಶಿಸುತ್ತ ಆ ಕ್ಷತ್ರಿಯ ಸನ್ಯಾಸಿಯು (ಶ್ರದ್ಧಾನಂದರು) ಕಾಂಗ್ರೆಸ್ಸಿನ ವೇದಿಕೆಯಮೇಲೆ ನಿಂತು, ಸಾವಿರಾರು ಸ್ತ್ರೀಪುರುಷರ ಸಮ್ಮುಖದಲ್ಲಿ ಗಂಭೀರವಾದ ಓಜಸ್ವಿಯೂ ಸ್ಫೂರ್ತಿಪ್ರದವೂ ಆದ ತಮ್ಮ ಭಾಷಣವನ್ನು ಹಿಂದೀಯಲ್ಲಿಯೇ ಮಾಡಿದರು. ಆ ಕಾಂಗ್ರೆಸ್ಸಿನಲ್ಲಿ ದೇಶೀಯ ಭಾಷೆಯಲ್ಲಿ ಉಪನ್ಯಾಸವಾದುದು ಅದೇ ಮೊದಲು. ಅದು ಮೊದಲು ಈಗ ದೇಶೀಯ ಭಾಷೆಗಳಿಗೂ ಕಾಂಗ್ರೆಸ್ಸಿನಲ್ಲಿ ಸನ್ಮಾನ ದೊರೆಯುತ್ತಲಿದೆ.

ಇನ್ನು ಸ್ವಾಮಿ ಶ್ರದ್ಧಾನಂದರ ಉಳಿದ ಕೆಲಸವೆಂದರೆ ಅಂತ್ಯಜರ ಉದ್ಧಾರ. ಅದಕ್ಕಾಗಿ ಅವರು ಏನು ಮಾಡಿದರೆಂಬುದನ್ನು ವಿವರವಾಗಿ ಈ ಪುಟ್ಟಪುಸ್ತಕದಲ್ಲಿ ಬರೆಯಲಾಗದು. ಆದರೆ ಉತ್ತರ ಹಿಂದೂಸ್ಥಾನದಲ್ಲಿ, ಅದರಲ್ಲಿಯೂ ಪಂಜಾಬಿನಲ್ಲಿ, ಸ್ವಾಮಿ ದಯಾನಂದ ಸರಸ್ವತಿಗಳು ಮತ್ತು ಸ್ವಾಮಿ ಶ್ರದ್ಧಾನಂದರು—ಇವರಿಬ್ಬರು ಇಲ್ಲದಿದ್ದರೆ, ಅಲ್ಲಿ ವೇದಗಳ ಹೆಸರಾಗಲಿ, ಹಿಂದೂಧರ್ಮವಾಗಲಿ ಉಳಿಯುತ್ತಿರಲಿಲ್ಲ.

ಇವರೀರ್ವರ ಕಾರ್ಯಕಲಾಪಗಳಿಂದ, ಸ್ವಾರ್ಥತ್ಯಾಗದಿಂದ, ಅಲ್ಲಿ ಹಿಂದೂ ಸಮಾಜವು ಪ್ರಬಲವಾಗುತ್ತ ಬಂದಿತು. ಇದರಮೇಲೆ ಇತ್ತೀಚಿಗೆ ಹಿಂದೂ ಸಭೆಯವರ ಸಹಾಯವೂ, ಸಹಾನುಭೂತಿಯೂ ಶ್ರದ್ಧಾನಂದರಿಗೆ ಸಿಕ್ಕಿ ಅವರ ಕಾರ್ಯವು ಹೆಚ್ಚು ಸ್ಫೂರ್ತಿಗೊಂಡಿತು. ಹಿಂದೂ ಧರ್ಮವನ್ನು ಬಿಟ್ಟವರನೇಕರು ಪುನಃ ಹಿಂದೂ ಧರ್ಮವನ್ನವಲಂಬಿಸಿದರು. ಸಾವಿರಾರು ಜನ ಮಾಲಖಾನಾ ರಾಜಪುತ್ರರು (ಮುಂಚೆ ಬಲಾತ್ಕಾರವಾಗಿ ಮುಸಲ್ಮಾನ ಮತಕ್ಕೆ ಸೇರಿಸಲ್ಪಟ್ಟಿರುವರು) ಪುನಃ ಹಿಂದೂ ಧರ್ಮವನ್ನವಲಂಬಿಸಿದರು. ಸ್ವಾಮಿಜಿಯವರ ಈ ಕೆಲಸಗಳನ್ನು ನೋಡಿ ಅನೇಕ ಜನ ಧರ್ಮಾಂಧರಾದ ಮುಸಲ್ಮಾನರಿಗೆ ತಲೆ ತಿರುಗಿತು. ಆಗ ಸ್ವಾಮಿಯವರಿಗೆ ಅನೇಕರು " ನೀವು ಈ ಕೆಲಸವನ್ನು ನಿಲ್ಲಿಸಿರಿ. ಇಲ್ಲವಾದರೆ ನಿಮ್ಮನ್ನು ಕೊಲ್ಲುವೆವು " ಎಂದು ಹೆದರಿಸಿದರು. ಮಹಾತ್ಮ ಗಾಂಧಿಯವರು ಕಾರಾಗೃಹಕ್ಕೆ ತೆರಳಿದನಂತರ ನರವೀರರೆಂದು ಪ್ರಸಿದ್ಧರಾಗಿರುವ ಸೀಖರ ಗುರೂಖಾಬಾಗಿನ ಪ್ರಕರಣದಲ್ಲಿ ಸೀಖರಿಗೆ ಮುಂದಾಳಾಗಿನಿಂತು ೬ ತಿಂಗಳ ಕಾರಾಗೃಹವನ್ನನುಭವಿಸಿ ಬಂದ, ವಯಸ್ಸಾಗಿದ್ದರೂ ಬ್ರಹ್ಮಚರ್ಯ ನಿಯಮದಿಂದ, ವಜ್ರಕಾಯವನ್ನುಳ್ಳವರಾಗಿದ್ದ ಸ್ವಾಮಿಜಿಯವರು ಆ ಗೊಡ್ಡು ಬೆದರಿಕೆಗೆ ಹೆದರದೇ " ನನ್ನ ಜೀವನವು ಹಾಗೆ ಕೊನೆಗಾಣುವುದು ಭಗವಂತನ ಇಚ್ಛೆಯಾಗಿದ್ದರೆ ಅದರಂತೆಯೆ ಆಗಲಿ " ಎಂದು ತಮ್ಮ ಕಾರ್ಯವನ್ನು ಮೊದಲಿಗಿಂತಲೂ ಹೆಚ್ಚು ಉತ್ಸಾಹದಿಂದ ಮುಂದರಿಸಿದರು. ಕೊನೆಗೆ ಅಸ್ವಸ್ಥರಾಗಿ ಹಾಸಿಗೆಯಲ್ಲಿ ಮಲಗಿದ್ದಾಗ ಅಬ್ದುಲ್ ರಶೀದ್‌ನೆಂಬ ಧರ್ಮಾಂಧನೊಬ್ಬನು ಸ್ವಾಮಿಜಿಯವರ ಕೊಲೆ ಮಾಡಿದನು. ಈ ಕೊಲೆಯ ವಿಚಾರವಾಗಿ ಅನೇಕಜನ ಇಸ್ಲಾಮ ಧರ್ಮೀಯರು ತಮ್ಮ ತಿರಸ್ಕಾರವನ್ನು ಸೂಚಿಸಿರುವರು. ಈ ವಿಷಯವಾಗಿ ಪ್ರಕೃತ ನಾವು ಹೆಚ್ಚೇನೂ ಬರೆಯಲಾರೆವು. ಆದರೆ ಈ ಬಗೆಯಾಗಿ ಆದ ಸ್ವಾಮಿಜಿಯವರ ಕೊಲೆಯಿಂದ, ಅವರು ವೀರಸ್ವರ್ಗಕ್ಕೆ ತೆರಳಿದರೂ, ಅವರಿಂದ ಪ್ರಾರಂಭಿಸಲ್ಪಟ್ಟ ಕಾರ್ಯವನ್ನು ಮುಂದರಿಸುವ ಭಾರವು ಹಿಂದೂಸ್ಥಾನದ ತರುಣ ವಿದ್ಯಾರ್ಥಿಗಳನ್ನವಲಂಬಿಸಿರುವುದು. ಆದುದರಿಂದ ಸ್ವಾಮಿಜಿಯವರ ಜೀವನಕ್ರಮದಿಂದ ದೊರೆಯಬಹುದಾದ

ಸಂದೇಶವನ್ನು ತರುಣರಿಗಾಗಿ ಇಲ್ಲಿ ಬರೆದು ಈ ಚಿಕ್ಕ ಲೇಖನವನ್ನು ಮುಗಿಸುವೆನು.—ಸ್ವಾಮಿಜಿಯವರು ತರುಣರನ್ನು ವಿಶೇಷವಾಗಿ ಪ್ರೀತಿಸುತ್ತಿದ್ದರು. ಅದಕ್ಕಾಗಿ ಅವರು ತರುಣರಿಗೆ ಹೇಳುತ್ತಿದ್ದುದುದೇನಂದರೆ:—

"ನಿಮ್ಮ ಶರೀರವನ್ನು ಬ್ರಹ್ಮಚರ್ಯದಿಂದಲೂ ನಿತ್ಯವ್ಯಾಯಾಮದಿಂದಲೂ ಗಟ್ಟಿಮಾಡಿಕೊಳ್ಳಿರಿ. ನೀವು ಸ್ವಂತವಾಗಿ ಸಂಪಾದನೆ ಮಾಡುವವರೆಗೆ ಮದುವೆಮಾಡಿಕೊಳ್ಳದೆ ನಿಮ್ಮ ಶಕ್ತಿಯನ್ನೆಲ್ಲ ಹಿಂದೂ ಸಮಾಜ ರಕ್ಷಣೆಗಾಗಿ ಸವೆಯಿಸಿರಿ. ಹಿಂದೂಧರ್ಮ ರಕ್ಷಣೆಗಾಗಿ ನಿಮ್ಮ ಎದೆಯಿಂದ ಭಯವನ್ನು ದೂರವಾಗಿ ಓಡಿಸಿ, ಅದನ್ನು ಕಲ್ಲೆದೆಯಾಗಿ ಮಾಡಿರಿ. ಅಂತ್ಯದೋದ್ಧಾರವನ್ನು ಕೈಕೊಂಡು ಹಿಂದೂ ಸಮಾಜವನ್ನು ಪುಷ್ಟಿಗೊಳಿಸಿರಿ. ನಿಮ್ಮ ಕಾರ್ಯಕ್ರಮದಲ್ಲಿ ಯಾರನ್ನೂ ದ್ವೇಷಿಸಬೇಡಿರಿ. ಹಿಂದೀಭಾಷೆಯನ್ನು ಚೆನ್ನಾಗಿ ಕಲಿತು ಆ ಭಾಷೆಯ ಮೂಲಕ ದೇಶೀಯರೊಂದಿಗೆ ನಿಮ್ಮ ಹೃದಯ ಸಂಬಂಧ (ಪ್ರೇಮ)ವನ್ನು ಹೆಚ್ಚಾಗಿ ಬೆಳೆಯಿಸಿ. ನೀವು ಮಾಡುವ ಕೆಲಸದಲ್ಲಿ ವಿಶ್ವಾಸವಿಟ್ಟು ಕೆಲಸಮಾಡಿ. ಅದಕ್ಕೆ ಬೇರೆಯವರಿಂದ ಸಹಾಯವಾಗುವುದೆಂದು ನಂಬಿ ಸುಮ್ಮನೆ ಕೈಕಟ್ಟಿ ಕುಳಿತುಕೊಳ್ಳಬೇಡಿ. ಪಾಶ್ಚಾತ್ಯನಾಗರಿಕತೆಯ ಜೀವನಕ್ಕೆ ಮರುಳಾಗದೆ ಸುಲಭ ಜೀವನವನ್ನೇ ನಿಮ್ಮ ಆದರ್ಶವಾಗಿಟ್ಟುಕೊಳ್ಳಿ. ಇದೇ ಕ್ರಮದಲ್ಲಿ ನೀವು ಧೈರ್ಯದಿಂದ ಕೆಲಸಮಾಡಿದರೆ ದೇಶೋದ್ಧಾರವೂ, ಹಿಂದೂಧರ್ಮ ರಕ್ಷಣೆಯೂ, ಹಿಂದೂ ಸಮಾಜ ರಕ್ಷಣೆಯೂ, ಆ ಮೂಲಕ ನಿಮ್ಮ ರಕ್ಷಣೆಯೂ ಆಗುವುದು." ಈ ಉಪದೇಶದಂತೆ ನಮ್ಮ ತರುಣರು ನಡೆದುಕೊಳ್ಳಲು ಇಂದು, ಸ್ವಾಮಿಜಿಯವರ ಪುಣ್ಯಜೀವನ ಸ್ಮಾರಕದ ದಿನ, ಪ್ರತಿಜ್ಞೆ ಮಾಡುವರೆ? ಅದರಿಂದ ಸ್ವಾಮಿಜಿಯವರ ಆತ್ಮಕ್ಕೆ ಶಾಂತಿಯನ್ನುಂಟುಮಾಡುವರೆ?

|| ಓಂ ಶಾಂತಿಃ ಶಾಂತಿಃ ಶಾಂತಿಃ ||



# ಹಯಾತನ ಸನ್ಯಾಸ



ದೇವರ ದರುಶನಕ್ಕೆ ಒಂದೇ ಬಾಗಿಲಿನಿಂದ ಬರಬೇಕೆಂಬ ಕಟ್ಟಲೆಯೇನಿಲ್ಲ. ಯಾವ ಭಕ್ತನಿಗೆ ಯಾವ ಬಾಗಿಲು ಸಲೀಸಿರುವುದೋ ಅದೇ ಆಗಬಹುದು. ಬೇರೆ ಬೇರೆ ಬಾಗಿಲಿನಿಂದ ಬಂದವರೆಂದು ಆ ನಿರ್ಲಿಪ್ತನಾದ, ತತ್ವಮೂರ್ತಿಯಾದ ಭಗವಂತನ ಅಭಿಮಾನದಲ್ಲಿ ಹೆಚ್ಚು ಕಡಿಮೆಯಾಗಲಿ, ಭೇದಭಾವನೆಯಾಗಲಿ ಇರಲಿಕ್ಕಿಲ್ಲ. ಬಾಗಿಲು ಚರ್ಚಿನ ಕಡೆಗೆ ತಿರುಗಿದರೇನು, ಮಸೀದಿಯ ಮುಖವಾಗಿದ್ದರೇನು, ಇಲ್ಲ; ಹನುಮಂತರಾಯನ ಗುಡಿಗೆ ಹತ್ತಿರವಾಗಿದ್ದರೇನು ? ಒಳಗೆ ಬಂದುದೆಲ್ಲಾ ಒಂದು ; ಆ ಪರಮಾತ್ಮನ ಎದುರಿಗೆ ನಿಂತಿದ್ದೆಲ್ಲಾ ಒಂದು; ಉಕ್ಕಿ ಸುರಿಯುವ ಭಕ್ತಿ, ಮೈಮರೆತ ಪೂಜೆ, ಲೋಕದ ಕತ್ತಲೆಯನ್ನೋಡಿಸಲು ಬೇಕಾದ ತತ್ವ, ಇವು ಸಿಕ್ಕಿತೆಂದರೆ ಮುಗಿಯಿತು.

ದಡ್ಡರು ಹೊಡೆದಾಡಿಕೊಳ್ಳುತ್ತಿರಲಿ. ತಾವೇ ನಚ್ಚಿನ ಭಕ್ತರೆಂದು ಹೆಮ್ಮೆಯಿಂದ ಹೊರಗೆಲ್ಲಾ ಮೆರೆಯುತ್ತಿರಲಿ. ನಮಗೆ ಮುಸಲ್ಮಾನರಾದರೂ ಸರಿಯೆ. ಶಿವನ ಭಕ್ತನಾದರೂ ಸರಿಯೆ ; ಬುದ್ಧನ ಉಪಾಸಕ

ನಾದರೂ ಸರಿಯೆ; ಮನುಷ್ಯ ಕುಲಕ್ಕೆ ಸೇರಿದವನೆಂ
ಬುದೊಂದು ದೊಡ್ಡ ಲೆಕ್ಕ. ತನ್ನ ದಾರಿಯನ್ನು
ಹಿಡಿದು ನಿಶ್ಚಯ ಬುದ್ಧಿಯಿಂದ ಹೊರಟಿರುವನೆಂಬು
ದೊಂದು ದೊಡ್ಡಲೆಕ್ಕ.

ನಮ್ಮ ಹಯಾತನು ಈ ತರದವನು. ಮುಸ
ಲ್ಮಾನನಾಗಿ ಹುಟ್ಟಿ, ಮುಸಲ್ಮಾನನಾಗಿ ಬಳೆದು,
ಮುಸಲ್ಮಾನನಂತೆ ಸಂಸಾರ ನಿರ್ವಹಿಸಿಕೊಂಡಿದ್ದನು.
ಹೆಂಡತಿ ಮಕ್ಕಳ ಜತೆಗೆ ಅನೇಕ ವರ್ಷಗಳು ಕಾಲ
ಕಳೆಯುತ್ತಿದ್ದು, ಇದ್ದಕ್ಕಿದ್ದ ಹಾಗೆ ಮನಸ್ಸಿಗೆ ಏನೋ
ತೋರಿ ಮನೆಯನ್ನು ಬಿಟ್ಟು ಹೊರಹೊರಟನು. ಆದರೆ
ಊರು ಬಿಟ್ಟು ಓಡಿಹೋಗಲಿಲ್ಲ ಗುಡ್ಡದಲ್ಲಿ ಗುಹೆ
ಗಳನ್ನಾಗಲೀ, ಕಾಡಿನಲ್ಲಿ ಮರದ ಬುಡಗಳನ್ನಾಗಲೀ,
ಹುಡುಕಲಿಲ್ಲ. ಸುಮ್ಮನೆ ನಾಲ್ಕು ಗೋಡೆಗಳ ಬಂಧ
ನದಿಂದ ತಪ್ಪಿಸಿಕೊಂಡು ಹೊರಗಿನ ವಿಶ್ವಪ್ರಪಂಚ
ದಲ್ಲಿ ಒಂದಾದನು.

ಆ ಸಮಯ ಅವನ ದೇಹವು ಕಜ್ಜಿಯಿಂದ ತುಂಬಿ
ಹುಳಿಯುತ್ತಿದ್ದಿತು. ಮೈಮೇಲೆ ಬಟ್ಟೆಗಳ ಹೆಸರಿಲ್ಲದೆ
ಲಂಗೋಟಿಯೊಂದು ಮಾತ್ರ ಮಾನರಕ್ಷಣೆಯ ಭಾರ
ವನ್ನು ವಹಿಸಿದ್ದಿತು. ಹಯಾತನು ಕೂತಲ್ಲೇ ಶಿಬಿರ,
ಮಲಗಿದಲ್ಲೇ ಹಾಸಿಗೆ. ಯಾರಿಗೂ ಬೇಡದ ಕಡ್ಡಿ
ಕಸಗಳಿಂದ ತುಂಬಿದ ಒಂದು ಹಳೆಯ ನೆಲಗಟ್ಟಾದರೆ
ಸಾಕು. ಅದೇ ಇಂದ್ರಭವನವಾಗಿ ಪರಿಣಮಿಸುತ್ತಿ
ದ್ದಿತು. ಅಲ್ಲಿ ಹಯಾತನು ಕಾಲುನೀಡಿಕೊಂಡು
ಕಣ್ಣುಮುಚ್ಚಿಕೊಂಡು ಮಲಗಿ ನಿದ್ರೆಮಾಡುತ್ತಲೋ,
ಕೂತು ತೂಕಡಿಸುತ್ತಲೋ ನೋಡುವವರಿಗೆ ಹಗಲು

ರಾತ್ರಿಗಳ ಲೆಕ್ಕವನ್ನೇ ಇಟ್ಟುಕೊಂಡಿಲ್ಲದವನ ಹಾಗೆ ಕಾಣಿಸಿಕೊಳ್ಳುತ್ತಿದ್ದನು

ಒಂದೊಂದು ಸಮಯದಲ್ಲಿ ಹೊಟ್ಟೆಯ ಕಡೆ ದೃಷ್ಟಿ ಬಿದ್ದು ಹಸಿವೆಂದು ತೋರಿದಾಗ ತನ್ನ ಇಂದ್ರಭವನವನ್ನು ಬಿಟ್ಟುಹೊರಟು, ತನ್ನ ಪ್ರೀತಿಯ ಗೆಳೆಯರಾದ ಆ ಬೀದಿಯ ನಾಯಿಗಳನ್ನೆಲ್ಲಾ ಜತೆಗೆಕರೆದುಕೊಂಡು ಕಣ್ಣಿಗೆಬಿದ್ದ ಅಥವಾ ಮನಸ್ಸಿಗೆ ತೋರಿದ ಯಾವದೋ ಒಂದು ಮನೆಯ ಮುಂದೆ ಹೋಗಿ ನಿಂತು "ಯಾರು ಮನೆಯೊಳಗೆ? ಬಾಗಿಲನ್ನು ತೆಗೆ, ಹೊರಕ್ಕೆ ಬಾ; ಹಯಾತನಿಗೆ ಹೋಳಿಗೆಯನ್ನು ತಂದುಕೊಡು" ಎಂದು ಕೇಳುವನು. ಆ ಹೊತ್ತು ಅದೃಷ್ಟವಶಾತ್ ಹಬ್ಬದ ದಿನವಾಗಿ ಆ ಮನೆಯಲ್ಲಿ ಹೋಳಿಗೆಯನ್ನೇ ಮಾಡಿರುವರು, ಹಯಾತನು ತಮ್ಮ ಮನೆಗೆ ಬಂದನೆಂದು ಸಂತೋಷದಿಂದ ಭಿಕ್ಷವನ್ನು ತರುವರು. ಹೋಳಿಗೆಯ ಜತೆಯಲ್ಲಿ ಅಂಬೊಡೆಗಳನ್ನೂ, ಹುಳಿಯನ್ನವನ್ನೂ ಸಹ ತಂದುಕೊಡಲು ಹೋದರೆ, ಇವನು ಅವೊಂದನ್ನೂ ತೆಗೆದುಕೊಳ್ಳನು. ತಾನು ಕೇಳಿದುದು ಮಾತ್ರ ತನಗೆ ಬೇಕು. ಅದನ್ನು ಮುರಿದು ಚೂರು ಮಾಡಿ ತನ್ನ ಜತೆಯ ನಾಯಿಗಳಿಗೆಲ್ಲಾ ಕೊಟ್ಟು ತಾನು ಒಂದು ಮಿಕ್ಕಚೂರನ್ನು ತಿಂದು, ಅವುಗಳ ತಲೆಯನ್ನು ಸವರಿ, ಮುದ್ದಿಸಿ ಮುಂದಕ್ಕೆ ಹೊರಡುವನು.

ಇನ್ನೊಂದು ಮನೆಯ ಬಾಗಿಲಲ್ಲಿ ನಿಂತು "ಎಲ್ಲಿ, ಅನ್ನ ತಂದುಕೊಡು" ಎಂದು ಕೂಗಿ ಯಜಮಾನನಿಗಿಂತಲೂ ಗಟ್ಟಿಯಾಗಿ ಅಪ್ಪಣೆಮಾಡುವನು. ಅವರೆಲ್ಲರೂ ಹಯಾತನನ್ನು ಬಲ್ಲವರಾದ್ದರಿಂದ ನಗುತ್ತಾ ಅವ

ನಿಗೂ ಅವನ ಬಳಗಕ್ಕೂ ಆಗಬೇಕೆಂದು ಸ್ವಲ್ಪ ಹೆಚ್ಚಾ
ಗಿಯೇ ತಂದು ಕೊಡುವರು. ಹಯಾತನು ಮಧ್ಯ
ದಲ್ಲಿ ಕುಳಿತು ಆ ಬೀದಿಯ ನಾಯಿಗಳೂ, ಆ ಸುತ್ತಿನ
ಕಾಗೆಗಳೂ ಕಚ್ಚಾಡಿಕೊಂಡು ಜತೆಯಲ್ಲೇ ತಿನ್ನುತ್ತಿ
ರುವಾಗ ಅವಕ್ಕೆಲ್ಲಾ ಸಮಾಧಾನಹೇಳುತ್ತಾ, ಹಾಸ್ಯದ
ಮಾತುಗಳನ್ನಾಡುತ್ತಾ ಊಟವನ್ನು ಪೂರೈಸುವನು.

ಒಂದೊಂದು ಸಾರಿ ಜೇಕೆಂದು ಪರೀಕ್ಷೆಗೋಸ್ಕರ
ಕೊಡುವ ಅನ್ನದಲ್ಲಿ ಬಿಲ್ಲೆಗಳನ್ನೋ ಪಾವಲಿಗಳನ್ನೋ
ಬಚ್ಚಿಟ್ಟುಬಿಡುವರು. ಎಲ್ಲೋ ರಸ್ತೆಯ ಮಧ್ಯದಲ್ಲೋ
ಮರದ ಬುಡದಲ್ಲೋ, ಹಾಳು ನೆಲಗಟ್ಟಿನ ಮೇಲೋ
ಕೂತು ತನ್ನ ಆಪ್ತಸ್ನೇಹಿತರುಗಳ ಬಳಗದಲ್ಲಿ ಭೋ
ಜನ ಸಮಾರಂಭವನ್ನು ನಡೆಸುತ್ತಿರುವಾಗ, ಈ ದುಡ್ಡಿ
ನ ಚೂರು ಕಣ್ಣಿಗೆ ಬಿದ್ದು, ಕೂಡಲೆ ಅದನ್ನು ತೆಗೆದು
ಕೊಂಡು ಆ ಮನೆಗೇ ನೆಟ್ಟಗೆ ಓಡುವನು -ಬೇರೆ
ಮನೆಗೆ ಹೋಗಲು ಕಾರಣವಿರುವುದಿಲ್ಲ. ಏಕೆಂದರೆ
ಒಂದು ಸಾರಿಗೆ ಅವನು ಎರಡು ಮನೆಯ ಭಿಕ್ಷವನ್ನು
ಎಂದೂ ತೆಗೆದುಕೊಳ್ಳುವವನಲ್ಲ -ಜಗುಲಿಯ ಮೇ
ಲಕ್ಕೆ ಅದನ್ನೆಸೆದು, "ಇಗೋ ನಿನ್ನ ರೊಕ್ಕವನ್ನು
ನೀನೇ ತೆಗೆದುಕೋ. ಹಯಾತನನ್ನು ಕೆಡಿಸೋಣ
ವೆಂದೋ ಇದನ್ನು ಬಚ್ಚಿಟ್ಟಿದ್ದು?" ಎಂದು ಹುಸಿ
ನಗುವನ್ನು ನಕ್ಕು ಹಿಂತಿರುಗುವನು.

ಎಲ್ಲಿಯಾದರೂ ಒಂದು ಬಿದ್ದ ಮರದ ತುಂಡಿನ
ಮೇಲೆ ಹಯಾತನು ಕಾಲನ್ನಾಡಿಸುತ್ತಾ, ಬಿಸಿಲು
ಕಾಯಿಸುತ್ತಾ ಕುಳಿತಿರುವಾಗ, ಯಾರಾದರೂ ಬಂದು
ತಮ್ಮ ದುಃಖವನ್ನು ಹೇಳಿಕೊಳ್ಳುವರು. "ಹೋಗು

ಎಲ್ಲವೂ ಸರಿಹೋಗುವುದು” ಎಂದು ಹೇಳಿಬಿಟ್ಟನೆಂದರೆ ಇವರಿಗೆ ಬಹು ಧೈರ್ಯವಾಗುವುದು. ಇಲ್ಲ, ಮಾತನಾಡದೆ ಸುಮ್ಮನಿದ್ದುಬಿಟ್ಟನೆಂದರೆ, ಏನೋ ಅರಿಷ್ಟವು ಕಾದಿರುವುದೆಂದು ಖಂಡಿತ ಮಾಡಿಕೊಂಡು ಹಿಂತಿರುಗುವರು.

ಇದೇ ರೀತಿಯಲ್ಲಿ ಕೆಲವು ವರ್ಷಗಳು ಹಯಾತನ ದೇಹಯಾತ್ರೆಯು ಸಾಗಿತು. ನಂತರ ಯಾವದೋ ಒಂದು ಹೊತ್ತಿನಲ್ಲಿ, ಯಾವದೋ ಒಂದು ಮೂಲೆಯಲ್ಲಿ, ಯಾರಿಗೂ ಹೇಳದೆ, ಯಾರನ್ನೂ ಕೇಳದೆ ಹಯಾತನು ತನ್ನ ಕಳೇಬರವನ್ನು ಬಿಟ್ಟು ಹೊರಟು ಹೋದನು.

ಈಗಲೂ ಹಯಾತನ ಗೋರಿಗೆ ಬಹು ಮರ್ಯಾದೆಯುಂಟು. ಮತ್ತು ಬಹುತರದ ಪೂಜೆಯು ನಡೆಯುತ್ತದೆ. ಇವನ ಸಮೀಪದಲ್ಲಿ ಹಿಂದೂ ಮುಸಲ್ಮಾನರೆಂಬುವ ಭೇದವಿಲ್ಲ. ಇಬ್ಬರೂ ಜತೆಗೇ ನಿಂತು ಕಾರ್ಯಸಿದ್ಧಿಯಾಗಲೆಂದೋ, ವ್ಯಾಪಾರದಲ್ಲಿ ಲಾಭ ಬರಲೆಂದೋ, ರೋಗ ವಾಸಿಯಾಗಲೆಂದೋ ಬೇಡಿಕೊಳ್ಳುತ್ತಾರೆ.

ಅಂತು, ಹಯಾತನಿಗೆ ಜೀವನದ ಗುಟ್ಟು ಗೊತ್ತಿತ್ತು. ಅದಕ್ಕೋಸ್ಕರಲೇ ಅವನಿಗೆ ಅದು ಅಷ್ಟು ಸುಲಭವಾಗಿ ಪರಿಣಮಿಸಿತು. ಆದರಿಂದಲೇ ಅವನು ಅದನ್ನು ಆಟವಾಗಿ ಕಳೆದನು.

“ಅನಂತ ಶರ್ಮ”

|| ಶ್ರೀಃ ||

# ಸತ್ಯಾಗ್ರಹ

ಅಥವಾ

## ನ್ಯಾಯದೇವತೆಯ ಅವತಾರ

ಆ. ಸರ್ವಾಭಟ್ಟ.

ಕೃಷ್ಣಾ ಕಂಪೆನಿ,
ಬೆಂಗಳೂರು ಸಿಟಿ.

|| ಶ್ರೀಃ ||

# ಸತ್ಯಾಗ್ರಹ

ಅಥವಾ

## ನ್ಯಾಯದೇವತೆಯ ಅವತಾರ



" ಸತ್ಯಾಗ್ರಹವೇ ಬ್ರಹ್ಮಾಸ್ತ್ರವು "

"ದೈವನಿರ್ಭರತೆ ಮತ್ತು ಅಹಿಂಸೆ—ಇವೇ ಸತ್ಯಾಗ್ರಹದ ಮುಖ್ಯ ಅಂಗಗಳು".

" ಭಗವದ್ಧ್ಯಾನಕ್ಕೆ ಮೌನವು ಆವಶ್ಯಕ ;

ಇದೇ ತಪಸ್ಸು

" ದಾನವರ ದಾರಿಯೇ ಬೇರೆ ;

ದೇವತೆಗಳ ಹಾದಿಯೇ ಬೇರೆ "

# ಮುನ್ನುಡಿ.



ಸಾತ್ವಿಕಜ್ಯೋತಿಯ ಪ್ರಕಾಶನಕ್ಕೆ ಸಾಧಕವಾದ ಎಣ್ಣೆ ಬತ್ತಿಗಳ ಸಂಗ್ರಹವಾದ ಸತ್ಯಾಗ್ರಹವನ್ನು ಮಹಾತ್ಮರು ಹೂಡಿದರು. ಇದುವರೆಗೂ ಸತ್ಯಾಗ್ರಹವನ್ನು ಮಾಡಬೇಕಾದವರು ಹೇಗೆ ಮಾಡಬೇಕು? ಎಂಬ ವಿಚಾರವಾಗಿ ಹಲವರಿಗಿದ್ದ ಹಲವಭಿಪ್ರಾಯಗಳನ್ನು ಶೇಖರಿಸಿ, ಅವನ್ನು ನಿಷ್ಪಕ್ಷಪಾತದ ಒಂದರಿಯಲ್ಲಿ ಸೋಸಿ, ಆಧ್ಯಾತ್ಮಿಕದ ಬಣ್ಣ ಕಟ್ಟಿ, ಲೋಕಮಾನ್ಯವಾಗುವಂತೆ ಬರೆದಿರುವ ಈ ಗ್ರಂಥರತ್ನವನ್ನು ಪ್ರಕಟಿಸುವ ಭಾಗ್ಯವು ನಮ್ಮ ಪಾಲಿಗೆ ಬಂದಿತೆಂದು ಆನಂದಿಸುತ್ತೇವೆ. ಕನ್ನಡಿಗರು ಈ ಗ್ರಂಥವನ್ನು ಪಾರಾಯಣಮಾಡಿ, ಇದರಲ್ಲಿ ಸಾರಿರುವ ಸೊಗಸಿನ ತತ್ವದ ಸಿರಿಬೆಳೆ ಬೆಳೆಸುವರೆ?

ಇತಿ,

ಪ್ರಕಾಶಕರು.

|| ಶ್ರೀಃ ||

# ನಾಡಿನ ಪರಿಸ್ಥಿತಿ

---

ದೇಶಬಾಂಧವರೇ !

ಇನ್ನೂ ಮೊನ್ನೆ ತಾನೇ ಮಹಾತ್ಮಾ ಗಾಂಧಿಯವರಂತಹ ಸತ್ಯಪ್ರಿಯರಿಂದ ರಾಮರಾಜ್ಯವೆಂದು ಕರೆಯಲ್ಪಟ್ಟ ನಮ್ಮಾ ರಾಷ್ಟ್ರದಲ್ಲಿ ಇಷ್ಟುಬೇಗನೆ ಸತ್ಯಧರ್ಮಗಳು ಲುಪ್ತವಾಗಿ ಹೋಗಲು ಕಾರಣವೇನು? ಮಾದರಿಯ ಸಂಸ್ಥಾನವೆಂದು ದಿಗಂತ ವ್ಯಾಪಿಯಾದ ಕೀರ್ತಿಯನ್ನು ಪಡೆದಿದ್ದ ನಮ್ಮ ದೇಶದಲ್ಲಿ ಇದ್ದಕ್ಕಿದ್ದ ಹಾಗೆ ಶಾಂತಿ ಸಮಾಧಾನಗಳು ಅಳಿದು ಹೋದುದೇಕೆ? ಪ್ರಜಾನಾಂ.... ....................ಸಪಿತಾ, ಪಿತರಸ್ತಾಸಾಂ ಕೇವಲಂ ಜನ್ಮ ಹೇತವಃ—ಎಂಬ ಕಾಳಿದಾಸೋಕ್ತಿಯಂತೆ ಪ್ರಜೆಗಳಿಗೆ ನಿಜವಾದ ತಾಯಿ ತಂದೆಯು ಈತನೇ; ಸ್ವಂತ ತಾಯಿ ತಂದೆಗಳು ಕೇವಲ ಜನ್ಮಕ್ಕೆ ಮಾತ್ರ ಕಾರಣಭೂತರು;—ಎಂದು ಪ್ರಜೆಗಳಿಂದಲೂ ಹೊರಗಿನವರಿಂದಲೂ ಏಕಪ್ರಕಾರವಾಗಿ ಹೊಗಳಿಸಿಕೊಂಡು, ಇನ್ನೂ ಹಲವು ತಿಂಗಳ ಕೆಳಗೆ ರಜತ ಮಹೋತ್ಸವದ ರನ್ನಮಂಟಪದಲ್ಲಿ ರಾರಾಜಿಸಿದ ನಮ್ಮ ರಾಜಮಣಿಯ ರಾಜ್ಯದಲ್ಲಿ ಇಷ್ಟೊಂದು ಆಕಸ್ಮಿಕವಾಗಿ ಭೀತಿ ಸಂಶಯಗಳು ತಲೆದೋರಿ ಮಂದಿಯ ಹೃದಯವು ಡವಡವನೆ ಬಡಿದುಕೊಳ್ಳುವಂತಾದುದೇಕೆ? ಇದೇನು ವಿಪರ್ಯಾಸ? ವಿದ್ಯೆಯಲ್ಲಾಗಲಿ, ರಾಜ್ಯ ನಿರ್ವಹಣದಲ್ಲಾಗಲಿ, ಯಾವ ದೇಶದ, ಹಾಗೂ, ಯಾವ ಜನಾಂಗದ ನೌಕರಶಾಹಿಗೂ ಕಡಿಮೆ

ಇಲ್ಲವೆಂಬ ಪ್ರಸಿದ್ಧಿಯನ್ನು ಪಡೆದಿದ್ದ ನಮ್ಮ ಅಧಿಕಾರಿ ವರ್ಗವು ಇಂದು ಒಮ್ಮೆಲೇ ಹೀಗೆ ನೀತಿ ನಿಯಮಗಳನ್ನು ಬದಿಗೊತ್ತಿ ಪಾಪಿ ರಾವಣನಂತೆ, ಜಗನ್ಮಾತೆಯಾದ ನ್ಯಾಯ ದೇವತೆಯನ್ನು ಭಂಗ ಪಡಿಸಲು ಪ್ರಯತ್ನಿಸುತ್ತಿರುವುದರ ಅರ್ಥವಾದರೂ ಏನು? ಯಾವ ಈ ಸೊಬಗಿನ ನಾಡನ್ನು, ಚಿನ್ನದ ಬೀಡನ್ನು, ದುಷ್ಟರ ಆಕ್ರಮಣದಿಂದ ಉದ್ಧರಿಸಲು ರಣಧೀರ ಕಂಠೀರವರಂತಹ ರಾಜ ಶ್ರೇಷ್ಠರೂ, ಮಹಾರಾಣಿ ಲಕ್ಷ್ಮಮ್ಮಣ್ಣಿಯವರಂತಹ ಸಾಧ್ವೀಮಣಿಯರೂ, ತಿರುಮಲರಾಯರಂತಹ ಮಂತ್ರಿವರ್ಯರೂ, ತಮ್ಮ ದೇಹಗಳನ್ನೇ ಧಾರೆಯೆರೆದರೋ; ಹಾಗೂ ಯಾವ ನಾಡು ಶ್ರೀ ಕೃಷ್ಣಪರಮಾತ್ಮನ ಆ ಸದ್ವಂಶದ ಏಕ ಮಾತ್ರ ನೆಲೆಯಾಗಿ ಇಂದು ಭರತ ಖಂಡದಲ್ಲಿ ನಿಂತಿರುವುದೋ,—ಹೆಚ್ಚೇಕೆ!—ಯಾವ ಪುಣ್ಯಭೂಮಿಯಲ್ಲಿ ಪ್ರಾಚೀನ ಅರ್ವಾಚೀನ ನಾಗರೀಕತೆಗಳೆರಡೂ ಅಪೂರ್ವ ಕಲಾಸಂವಿಧಾನದಿಂದ ಸಮನ್ವಯಗೊಂಡು ಪ್ರಪಂಚವನ್ನೇ ಮುಗ್ಧಗೊಳಿಸುತ್ತಿರುವುವೋ; ಅಂತಹ ಮಂಗಳ ಮಂಡಲದ, ಶ್ರೀ ಸುಂದರೇಶ್ವರನ ಪಟ್ಟಮಹಿಷಿಯ ಭವ್ಯ ಮಂದಿರದ,—"ಸತ್ಯಮೇವೋದ್ಧರಾಮ್ಯಹಮ್"—ಎಂಬ ಆಧಾರಸ್ತಂಭದ ಮೇಲೆ ಇಂದು ಆಘಾತವಾಗುತ್ತಿರುವುದೆಲ್ಲಿಂದ? ಈ ಬಗೆಯ ತರ್ಕ ವಿತರ್ಕಗಳು ನಾಡಿನ ಮೂಲೆಯಿಂದ ಮೂಲೆಗೆ ಪ್ರತಿಯೊಬ್ಬನ ಹೃದಯದಲ್ಲಿಯೂ ಯಾವುದಾದರೊಂದು ಬಗೆಯಲ್ಲಿ ತಲೆ ದೋರುತ್ತಲೇ ಇವೆ. ಪ್ರತಿಯೊಬ್ಬರೂ ತಮಗೆ ತೋರಿದ ಕಾರಣಗಳನ್ನೂ, ನಿವಾರಣೋಪಾಯಗಳನ್ನೂ ತಮ್ಮ ತಮ್ಮಲ್ಲಿಯೇ ಹೇಳಿಕೊಳ್ಳುತ್ತಾ, ಹೇಗೂ ತಮ್ಮ ಅಂತರಾತ್ಮವನ್ನು ಸಮಾಧಾನ ಮಾಡಿಕೊಳ್ಳಲಾರದೆ ತಳಮಳಗೊಳ್ಳುತ್ತಿದಾರೆ. ಇನ್ನೊಂದು ಕಡೆ, ಏನೀಗ?—ಮಹಾಪ್ರಮಾದ ನಡೆದಿರುವುದು?—ಎಂದು ದೀರ್ಘವಾಗಿ ರಾಗ ತೆಗೆದು ಇತರರನ್ನು ಹೀಯಾಳಿಸುತ್ತಾ, ಇತರರು ಅಲ್ಲಗಳೆದ ಪದಾರ್ಥಗಳನ್ನು ತಿಂದು ತೇಗಿ ನಲಿಯುವವರೂ ಹಲವರಿದಾರೆ. ಇವರಂತೂ ಪುಣ್ಯಾತ್ಮರು! ಕಾಗೆಯ ಮನೆಯ ಕೋಗಿಲೆಗಳು!

ಪಾಪ! ಈ ಭಾಗ್ಯವು ಎಲ್ಲರಿಗೂ ಬರುವುದೆ? ಯಾರ ಆತ್ಮವು ನಾಡಿನ ಆತ್ಮದೊಂದಿಗೆ ಬೆರೆತು ಹೋಗಿದೆಯೋ, ನಾಡಿನ ಸುಖ ಸಂತೋಷಗಳಿಂದ ಭಿನ್ನವಾದ ಸುಖ ಸಂತೋಷಗಳನ್ನು ಯಾರು ಸ್ವಪ್ನದಲ್ಲಿಯೂ ಊಹಿಸಲಾರರೋ, ಯಾರ ಪಾರತ್ರಿಕ ಯಾತ್ರೆಯೂ ಕೂಡ ನಾಡಿನ ಧರ್ಮಕರ್ಮಗಳನ್ನು ಅನುವರ್ತಿಸಿಕೊಂಡಿರುವುದೋ, ಅಂತಹ ನಾಡಿನ ಮಂದಿಯು ತನ್ನ ದುರದೃಷ್ಟದಿಂದ ಒದಗಿ ಬಂದ ಇಂದಿನ ಪರಿಸ್ಥಿತಿಯನ್ನು ನೋಡಿ, ಅತ್ತು ಕರೆದು ಗೋಳಿಡದೆ ಸುಮ್ಮನಿರುವುದು ಹೇಗೆ ಸಾಧ್ಯ? ನಾಡಿನ ಸೌಭಾಗ್ಯ ಲಕ್ಷ್ಮಿಯ ಸಾಕ್ಷಾತ್ಕಾರವನ್ನು ಹೊಂದಿ ಆಕೆಯ ಚರಣ ತಲದಲ್ಲಿ ನಲಿನಲಿಯುತಲಿದ್ದ ನವಯುವಕ ಬೃಂದವು ಇಂದು ಒಮ್ಮೆಲೇ ಆಕೆಯ ಮುಖದಲ್ಲಿ ತೋರಿ ಬರುವ ವಿಕಾರವನ್ನು ಕಂಡು ಸಹಿಸಿಕೊಂಡಿರುವುದಾದರೂ ಸಂಭವವೇ? ನಿಜವಾಗಿಯೂ ಯಾವನೊಬ್ಬನೇ ಆಗಲಿ, ತನ್ನ ಆಯುಷ್ಯದಲ್ಲಿ ಒಂದು ಗಳಿಗೆಯ ಹೊತ್ತು ತನ್ನ ಅಹಂಕಾರವನ್ನು ಬದಿಗೊತ್ತಿ, ದೇಶಮಾತೆಯ ಮಡುಲಲ್ಲಿ ತನ್ನನ್ನು ಸಮರ್ಪಿಸಿ, ಆಕೆಯ ಕೃಪಾಕಟಾಕ್ಷದಲ್ಲಿ ಮಿಂದು, ಆ ದಿವ್ಯಸುಂದರವದನದಿಂದ ಆಕೆಯು ಪಾಡಿದ ಜೋಗುಳದ ಇನಿದನಿಯನ್ನು ಕೇಳಿ ಮೈ ಮರೆತಿದ್ದರೆ, ಆ ಮುಖದಲ್ಲಿಂದು ಕೂದಲೊಂದು ಕೊಂಕಿದರೂ ನೋಡಿ ಸಹಿಸಲಾರನು. ಆದರೂ ಇವನಲ್ಲಿ ಬರುವ ದೋಷವೆಂದರೆ; ವಿಪತ್ತನ್ನು ಇರುವುದಕ್ಕಿಂತಲೂ ಹೆಚ್ಚಾಗಿ ಭಾವಿಸುವುದು. ಮಹಾಕವಿಯು ಹೇಳುವಂತೆ, "ನಮಗೆ ಅತ್ಯಂತ ಪ್ರಿಯವಾದ ವಸ್ತುಗಳ ವಿಷಯವಾಗಿ ಯಾವಾಗಲೂ ಏನಾದರೊಂದು ಆಪತ್ತನ್ನೇ ಚಿಂತಿಸುವುದು ಮನಸ್ಸಿನ ಲಕ್ಷಣ!"

ಒಬ್ಬರು ಹೇಳುವಂತೆ ಸ್ವಲ್ಪ ಹೆಚ್ಚಾಗಿಯೋ, ಮತ್ತೊಬ್ಬರು ಹೇಳುವಂತೆ ಸ್ವಲ್ಪ ಕಡಿಮೆಯಾಗಿಯೋ, ಅಂತೂ ನಮ್ಮ ನಾಡಿಂದು ವಿಪತ್ತಿಗೆ ಸಿಲುಕಿದೆ ಎಂಬುದು ನಿರ್ವಿವಾದ ವಿಷಯ.

## ಕಾರಣ ನಿರೂಪಣ

ಇನ್ನು ಇದಕ್ಕೆ ಕಾರಣ. ಇದರಲ್ಲಿಯೂ ಎರಡು ಪಕ್ಷಗಳುಂಟು. ಇದೊಂದು ದೈವಿಕವಾದ ಘಟನೆ ಎಂಬುದೊಂದು ಪಕ್ಷ. ಅಲ್ಲಲ್ಲ;-ಅಧಿಕಾರ ವ್ಯೂಹದ ಅಂತರಂಗದಲ್ಲಿ ಅಡಗಿದ್ದ ಆಸುರೀ ವೃತ್ತಿಯ ಉಲ್ಬಣಾವಸ್ಥೆ ಇದು-ಎಂಬುದು ಮತ್ತೊಂದು ಪಕ್ಷ.

## ದೈವಿಕ ಸ್ವರೂಪ

ಮೊದಲನೆಯ ಪಕ್ಷದ ವಾದವು ಹೀಗೆ:—ಹಿಂದೆ ಶ್ರೀರಾಮಚಂದ್ರನ ಪಟ್ಟಾಭಿಷೇಕವು ನಿಂತು ಕಾಡಿಗೆ ಹೋಗುವ ಸಂಭವ ಬಂದಾಗ ಶ್ರೀ ಲಕ್ಷ್ಮಣ ಸ್ವಾಮಿಯು ಅದೆಲ್ಲವೂ ಕೈಕಯೀದೇವಿಯ ಕುಬುದ್ಧಿಯಿಂದ ಆದುದೆಂತಲೂ, ತನ್ನ ಪೌರುಷದಿಂದ ಪ್ರತಿಪಕ್ಷಿಗಳಾಗಿ ನಿಲ್ಲುವವರೆಲ್ಲರನ್ನೂ ನಿಗ್ರಹಿಸಿ ತಾನು ಅಣ್ಣನಿಗೆ ಪಟ್ಟಾಭಿಷೇಕ ಮಾಡುವುದಾಗಿಯೂ ತಿಳಿಸಿದನು. ಆಗ ಶ್ರೀರಾಮಚಂದ್ರಮೂರ್ತಿಯು ತಮ್ಮನಿಗೆ ಹೇಳಿದುದೇನೆಂದರೆ :—

ಶ್ಲೋ|| ಕೈಕಯ್ಯಾಃ ಪ್ರತಿಪತ್ತಿರ್ಹಿ ಕಥಂ ಸ್ಯಾತ್ ಮಮ ಪೀಡನೇ|
ಯದಿ ಭಾವೋ ನ ದೈವೋಽಯಂ ಕೃತಾನ್ತವಿಹಿತೋಭವೇತ್||

ಕಥಂ ಪ್ರಕೃತಿ ಸಂಪನ್ನಾ ರಾಜಪುತ್ರೀ ತಥಾ ಗುಣಾ |
ಬ್ರೂಯಾತ್ ಸಾ ಪ್ರಾಕೃತೇವ ಸ್ತ್ರೀ ಮತ್ಪೀಡಾಂ ಭರ್ತೃಸನ್ನಿಧೌ ||

ಕಶ್ಚಿದ್ದೈವೇನ ಸೌಮಿತ್ರೇ! ಯೋದ್ಧುಮುತ್ಸಹತೇ ಪುಮಾನ್|
ಯಸ್ಯ ನಗ್ರಹಣಂ ಕಿಂಚಿತ್ ಕರ್ಮಣೋಽನ್ಯತ್ರ ದೃಶ್ಯತೇ ||

ಅಸಂಕಲ್ಪಿತಮೇವೇಹ ಯದಕಸ್ಮಾತ್ ಪ್ರವರ್ತತೇ |
ನಿವರ್ತ್ಯಾರಂಭ ಮಾರಬ್ಧಂ ನನುದೈವಸ್ಯ ಕರ್ಮತತ್ ||

ಇಲ್ಲಿ ಶ್ರೀರಾಮಚಂದ್ರ ಮೂರ್ತಿಯು ಎರಡು ಕಾರಣಗಳಿಂದ ತನ್ನ ಪಟ್ಟಾಭಿಷೇಕ ವಿಘಾತವು ದೈವಿಕವೆಂದು ಸಾಧಿಸುತ್ತಾನೆ. ರಾಜರಮಣಿಯೂ ಮಹಾರಾಜ ಪುತ್ರಿಯೂ ಆದ ಕೈಕಯಿಯು, ಸಾಮಾನ್ಯಳಾದ ಒಬ್ಬ ತುಚ್ಛ ಹೆಂಗಸಿನಂತೆ ನೀತಿ ಲಜ್ಜೆಗಳನ್ನು ತೊರೆದು, ತನ್ನ ಗಂಡನ ಪ್ರತ್ಯಕ್ಷದಲ್ಲಿ ಪಟ್ಟಾಭಿಷೇಕ ವಿಘಾತ ಹಾಗೂ ವನವಾಸದ ಉದ್ದೇಶವಾಗಿ ಆಡಿದ ಮಾತು ಕತೆಗಳೂ, ನಡಿಸಿದ ನಡವಳಿಕೆಗಳೂ, ಅಂದಿಗೆ ಮೊದಲು ಎಂದಿಗೂ ಆಕೆಯಲ್ಲಿ ಕಂಡು ಬಂದವುಗಳಲ್ಲ ; ಹಾಗೂ ಆಕೆಯ ಯೋಗ್ಯತೆಗೆ ಬಹು ದೂರ ವಾದುವು. ಇದು ಒಂದು. ಎರಡನೆಯದಾಗಿ, ಉದ್ದೇಶ ಪ್ರಯತ್ನ ಗಳಿಂದ ಸಿದ್ಧಗೊಳಿಸಲ್ಪಟ್ಟ ಪಟ್ಟಾಭಿಷೇಕ ಕಾರ್ಯವು ಅನಿರೀಕ್ಷ್ಯ ವಾಗಿ ನಿಂತುಹೋಗಿ, ಯಾವ ಸಂಕಲ್ಪ ಪ್ರಯತ್ನಗಳೂ ಇಲ್ಲದ ವನವಾಸವು ಅನುವಾದುದು. ಹೀಗೆ ಈ ಎರಡು ಕಾರಣಗಳಿಂದ ದೈವಿಕವೆಂದು ನಿರ್ಧರಿಸಿ ಶ್ರೀರಾಮಚಂದ್ರನು ತಾನೇ ಹೇಳುವಂತೆ,-

ಶ್ಲೋ|| ಏತಯಾ ತತ್ವಯಾ ಬುದ್ಧ್ಯಾ ಸಂಸ್ತಭ್ಯಾತ್ಮಾನ ಮಾತ್ಮನಾ |
ವ್ಯಾಹತೇಽಪ್ಯಭಿಷೇಕೇ ಮೇ ಪರಿತಾಪೋ ನ ವಿದ್ಯತೇ ||

—ಪಟ್ಟಾಭಿಷೇಕ ವಿಘಾತದಿಂದ ಸ್ವಲ್ಪವೂ ವ್ಯಥೆಪಡಲಿಲ್ಲ. ದೈವಿಕ ವ್ಯಾಪಾರಕ್ಕೆ ತಲೆಬಾಗಿ ಅದನ್ನನುಭವಿಸುವುದು ಕರ್ತವ್ಯವೇ ಹೊರತು, ಆಯುಧ ಹಿಡಿದು ಅದನ್ನು ಗೆಲ್ಲಲಾಗುವುದಿಲ್ಲವೆಂದು ಲಕ್ಷ್ಮಣನಿಗೆ ಬುದ್ಧಿ ಹೇಳಿದನು. ಅದರಂತೆ ಕಷ್ಟಪರಂಪರೆಗಳ ನ್ನೆಲ್ಲಾ ಸಹಿಸಿ ಹದಿನಾಲ್ಕು ವರುಷಗಳು ತಪಸ್ಸನ್ನಾಚರಿಸಿದನು. ಅದಕ್ಕೆ ಬದಲು ಶ್ರೀರಾಮಚಂದ್ರನು ದೋಷವನ್ನು ಕೈಕಯೀದೇವಿ ಯಲ್ಲಿ ಆರೋಪಿಸಿ, ಅಲ್ಲಿಂದ ದಶರಥರಾಯನಿಗೂ, ಇತ್ತ ಕಡೆ ಭರತ, ಶತ್ರುಘ್ನ, ಇವರ ಮಾವ, ತಾತ, ಮೊದಲಾದವರಿಗೂ ಅನ್ವ ಯಿಸುತ್ತ, ಲಕ್ಷ್ಮಣನು ಹೇಳಿದಂತೆ ಪ್ರತಿಭಟಿಸಿದ್ದರೆ, ಆಗ ರಾಮಾ ಯಣವು ಏನಾಗುತ್ತಿತ್ತು ?

## ದೈವಿಕ ಕಾರಣ ಸಮನ್ವಯ

ನಮ್ಮ ದೇಶದ ಪ್ರಕೃತ ಸ್ಥಿತಿಗೂ ಮೇಲಿನ ಎರಡು ಕಾರಣಗಳು ಅನ್ವಯಿಸುತ್ತವೆ. ಜುಲೈ ೩ನೇ ತಾರೀಖಿನಿಂದೀಚೆಗೆ ನಮ್ಮ ಅಧಿಕಾರಿಗಳು ಎಷ್ಟೇ ತುಚ್ಛವಾಗಿ ನಡೆದಿದ್ದರೂ, ಅದಕ್ಕೆ ಮೊದಲು ಈ ಬಗೆಯ ಕುರುಹುಗಳೇನೂ ಅವರಲ್ಲಿ ಕಾಣುತ್ತಿರಲಿಲ್ಲ. ಮತ್ತು ಅವರಂತಹ ಜವಾಬ್ದಾರಿಯ ಸ್ಥಾನದಲ್ಲಿರುವವರು, ಯಾರೇ ಆಗಲಿ, ನಾವು ಇಂದು ನೋಡುತ್ತಿರುವಷ್ಟು ಅಧಮಸ್ಥಿತಿಗೆ ಇಳಿಯುವುದೆಂದರೆ ಕೇವಲ ಅಸಂಭವ. ಪ್ರತ್ಯಕ್ಷವಾಗಿ ನೋಡದಿದ್ದರೆ ನಂಬುವುದೂ ಅಸಾಧ್ಯ. ಎರಡನೆಯದಾಗಿ ಆಡುವ ಹುಡುಗರ ಒಂದು ಸಣ್ಣ ಧಾರ್ಮಿಕ ಪ್ರಯತ್ನಕ್ಕೆ ಎಂದೂ ಇಲ್ಲದ ಬೆಟ್ಟವೊಂದು ಅಡ್ಡಬಂದು ದೊಡ್ಡ ಸಮರದಲ್ಲಿ ಮುಕ್ತಾಯವಾದುದು. ಹೀಗೆ ಈ ಎರಡೂ ಕಾರಣಗಳಿಂದ ಇದನ್ನೂ ದೈವವ್ಯಾಪಾರವೆಂದೇ ಹೇಳಬೇಕಾಗುತ್ತದೆ.

## ಪೌರುಷೇಯವಾದವು-ಆಸುರೀ ವೃತ್ತಿಯು

ಇನ್ನು ಎರಡನೆಯ ಪಕ್ಷದವಾದವನ್ನು ನೋಡೋಣ :— ಇವರು ಹೇಳುವಂತೆ ಅಧಿಕಾರವ್ಯೂಹದ ಅಂತರಂಗದಲ್ಲಿ ಆಸುರೀ ವೃತ್ತಿಯು, ಅರ್ಥಾತ್ ತಾಮಸೀವೃತ್ತಿಯು, ನೆಲಸಿರುವುದೆಂಬುದು ಸಹಜ. ಏಕೆಂದರೆ ಸಂರಕ್ಷಣಾ ಕಾರ್ಯದಲ್ಲಿ ಶಿಷ್ಟರಕ್ಷಣ ದುಷ್ಟಶಿಕ್ಷಣ ಎಂಬ ಎರಡು ಭಾಗಗಳಿವೆ. ಈ ಶಿಕ್ಷಣ ಕಾರ್ಯವೆಂಬುದು ಹಿಂಸಾವೃತ್ತಿಯು ಇದನ್ನು ಮಾಡಬೇಕಾದರೆ ಸ್ವಲ್ಪವಾದರೂ ತಮೋಗುಣದ ಸಂಬಂಧವಿರಲೇಬೇಕು ಆದರೂ ಈ ವೃತ್ತಿಯನ್ನು ಮಾಡುವಾಗ ತನ್ನ ಸಾತ್ವಿಕಗುಣವನ್ನು ಬಹಳ ಎಚ್ಚರದಿಂದ ಕಾಪಾಡಿಕೊಂಡರೆ ಭಯವಿಲ್ಲ. ಇಲ್ಲವಾದರೆ ಹಿಂಸೆಯಲ್ಲೇ ಪ್ರವೃತ್ತಿಯು ಹೆಚ್ಚಿ, ದುಷ್ಟ ಶಿಷ್ಟ ವಿವೇಚನೆಗೆ ಸಾಧಕವಾದ ಸಾತ್ವಿಕ ಗುಣವು ಮಾಯವಾಗುವುದೂ ಉಂಟು. ಆನಂತರ ನಡೆಯುವ

ಕಾರ್ಯವೆಲ್ಲವೂ ವಿಪರೀತವೇ. ತಮೋಗುಣವು ಬೆಳೆದಷ್ಟೂ ಹಿಂಸಾ
ವೃತ್ತಿಯೂ ಬೆಳೆಯುತ್ತದೆ. ಆಗ ಪರಹಿಂಸೆಯಲ್ಲೇ ಆನಂದ. ಗುಣ
ದೋಷ ವಿಚಾರವೇನೂ ಅಲ್ಲಿ ನಿಲ್ಲುವುದಿಲ್ಲ ಕೊನೆಗೆ ಸ್ವಕೀಯ
ಪರಕೀಯ ಜ್ಞಾನವು ಕೂಡ ಹೋಗಿಬಿಡುತ್ತದೆ. ಅಲ್ಲಿ ನಿಲ್ಲುವು
ದೆಂದರೆ, ಅದೇ ವೃತ್ತಿಯಲ್ಲಿ ತನಗಿಂತಲೂ ಅಧಿಕರಾದವರನ್ನು
ಕಂಡರೆ ಭಯವೊಂದು ಮಾತ್ರ; ಅಂದರೆ, ಸ್ವಾರ್ಥಪೂರಿತವಾದ
ಹೇಡಿತನ. ಇದೊಂದು ಬಿಟ್ಟು, ಮಾನವ ಜಾತಿಗೆ ಸಂಬಂಧಪಟ್ಟ
ಯಾವ ನೀತಿಲಜ್ಜೆ ಧರ್ಮ ಕರ್ಮಗಳೂ, ಅಲ್ಲಿ ನಿಲ್ಲುವುದಿಲ್ಲ;
ಸ್ನೇಹ ವಾತ್ಸಲ್ಯಗಳೂ ಉಳಿಯುವುದಿಲ್ಲ. ಹೀಗೆ ರಕ್ಷಣೆಯ ಕಾರ್ಯ
ದಲ್ಲಿ ನಿಯುಕ್ತರಾದವರೇ ರಾಕ್ಷಸರಾದರೆಂದು "ರಕ್ಷಕಾ ರಾಕ್ಷಸಾ
ಜಾತಾಃ" ಎಂದು ಒಂದೆಡೆ ಹೇಳಿದೆ.

## ಕಾದು ನೋಡಬೇಕು

ಹೀಗೆ ಈ ಎರಡು ಪಕ್ಷಗಳಲ್ಲಿ ಇಂದಿನ ನಮ್ಮ ರಾಜ್ಯದ ಪರಿ
ಸ್ಥಿತಿಯು ಆಕಸ್ಮಾತ್ ದೈವಿಕ ಕಾರಣಗಳಿಂದ ಉಂಟಾದುದೇ?
ಅಥವಾ ರಾಜ್ಯಾಂಗವಲ್ಲಿ ಬೆಳೆದು ಬಂದ ತಮೋವೃತ್ತಿಯ ದುಷ್ಪರಿ
ಣಾಮವೇ? ಎಂಬುದೀಗ ಎರಡನೆಯ ಪ್ರಶ್ನೆ ಇದಕ್ಕೀಗಲೇ ಉತ್ತರ
ಹೇಳುವುದು ಕಷ್ಟದ ಕೆಲಸ. ಇನ್ನೂ ಕೊಂಚಕಾಲ ಕಾದು ನೋ
ಡಬೇಕು. ಏಕೆಂದರೆ ದೈವಿಕ ವ್ಯಾಪಾರಕ್ಕೆ ನಿಮಿತ್ತಭೂತರಾಗಿ ಆ
ಪ್ರೇರಣೆಯಿಂದ ದುಷ್ಕಾರ್ಯದಲ್ಲಿ ಕೈಹಾಕಿದವರಿಗೆ ಒಡನೆಯೇ ಪಶ್ಚಾ
ತ್ತಾಪವು ತಲೆದೋರುತ್ತದೆ. ಇವರು ತಮ್ಮ ಸ್ವಭಾವಕ್ಕೆ ಹಿಂದಿರು
ಗಿದಾಗ ತಮ್ಮ ದೋಷಗಳಿಗೆ ತಾವೇ ನಾಚಿಕೊಂಡು, ಲೋಕದ
ಮುಂದೆ ಕೈಜೋಡಿಸಿ, ತಮ್ಮ ಪ್ರಾಯಶ್ಚಿತ್ತಕ್ಕೆ ತಾವೇ ಅನುವಾಗು
ತ್ತಾರೆ. ಆಗ ಲೋಕವು ಅಂತಹವರಿಗೆ ಶಿಕ್ಷೆಮಾಡುವುದು ಹಾಗಿ
ರಲಿ; ತಾನೂ ಅವರ ಜತೆಗೆ ಎರಡು ತೊಟ್ಟು ಕಣ್ಣೀರಿಟ್ಟು, ಅವರ
ಪಾದಗಳಿಗೇ ಸಾಷ್ಟಾಂಗ ಪ್ರಣಾಮ ಮಾಡಿಬಿಡುತ್ತದೆ.

ಇನ್ನು ಎರಡನೆಯ ಕಾರಣವಾದರೆ ಅದೂ ಇಲ್ಲಿಗೆ ನಿಲ್ಲುವುದಿಲ್ಲ. ದಿನದಿನಕ್ಕೆ ತನ್ನ ಘೋರಸ್ವರೂಪವನ್ನು ಅದು ತೋರಲೇಬೇಕು. ಒಮ್ಮೆ ತಮೋವೃತ್ತಿಯು ಬೆಳೆದುಹೋಯಿತೆಂದರೆ ಅದನ್ನು ತಡೆಯುವುದು ಯಾರಿಗೂ ಅಸಾಧ್ಯ. ಅದು ತನ್ನ ಕೊನೆಯನ್ನು ಮುಟ್ಟಲೇಬೇಕು ಇದರ ಪರಮಾವಧಿಯ ಸ್ವರೂಪವನ್ನು ನಮ್ಮ ಪುರಾಣಗಳಲ್ಲಿ ಹೀಗೆ ಚಿತ್ರಿಸಿದಾರೆ:—

## ಭಸ್ಮಾಸುರನ ವೃತ್ತಾಂತ

ಹಿಂದೆ ಭಸ್ಮಾಸುರನೆಂಬ ರಾಕ್ಷಸನು ಈಶ್ವರನನ್ನು ಕುರಿತು ತಪಸ್ಸುಮಾಡಿದನು. ಆಗ ಈಶ್ವರನು ಪ್ರಸನ್ನನಾಗಿ "ನಿನಗೆ ಬೇಕಾದ ವರವನ್ನು ಕೇಳಿಕೋ" ಎಂದನು. ತಾನು ಯಾರ ತಲೆಯ ಮೇಲೆ ಕೈಯಿಟ್ಟರೆ ಅವರು ಸುಟ್ಟು ಭಸ್ಮವಾಗುವಂತೆ ತನಗೆ ವರವನ್ನು ಕೊಡಬೇಕೆಂದು ಭಸ್ಮಾಸುರನು ಕೇಳಿಕೊಂಡನು. ಈಶ್ವರನು ಬದಲು ಹೇಳದೆ ಹಾಗೆಯೇ ಆಗಲೆಂದನು ಆಗ ಭಸ್ಮಾಸುರನು "ನೀನು ಕೊಟ್ಟ ವರವು ನಿಜವೋ ಸುಳ್ಳೋ! ನಿನ್ನ ತಲೆಯ ಮೇಲೆಯೇ ಕೈಯಿಟ್ಟು ನೋಡುತ್ತೇನೆಂ" ದು ಈಶ್ವರನನ್ನೇ ಸುಡಲನುವಾದನು. ಆಗ ಇನ್ನೇನು? ತಾನು ಕೊಟ್ಟ ವರ! ಭಕ್ತನ ಪೂಜೆಗೆ ಈಶ್ವರನು ಭಯಪಟ್ಟು ಓಡಬೇಕಾಯಿತು.

## ತಮೋಗುಣದ ಲಕ್ಷಣ

ಇಲ್ಲಿ ಆ ತಮೋವೃತ್ತಿಯ ವಿಲಕ್ಷಣಸ್ವರೂಪವನ್ನು ನೋಡಿ. ಮೊದಲು ತನ್ನಲ್ಲಿರುವ ನೀಚಸ್ವಭಾವವನ್ನು ಒಳಗೇ ಅಡಗಿಸಿಕೊಂಡು, ಮೇಲೆ ಬೇಕಾದ ಸುಗುಣಸಂಪತ್ತಿಯಿಂದ ಮೆರೆಯುತ್ತ, ಯಾರು ಶಕ್ತಿಸಾಮರ್ಥ್ಯಗಳಿಗೆ ಆಧಾರಭೂತರೋ ಅಂಥವರನ್ನು ಬೆರಗುಮಾಡಿ, ತನ್ನ ಕಡೆಗೆ ಒಲಿಸಿಕೊಳ್ಳುವುದಕ್ಕೂ ಅದಕ್ಕೆ ಬರುತ್ತದೆ. ಆಗಲಿ, ಹೀಗೆ ಒಲಿಸಿಕೊಂಡ ಮೇಲೆ, ಅವರಿಂದ ತನ್ನ

ಸುಖಕ್ಕೆ ಬೇಕಾದಂತಹ ಸಾಮುಗ್ರಿಯನ್ನೆಲ್ಲಾ ಪಡೆದು ತೃಪ್ತಿಹೊಂ
ದಬಾರದೇ?—ಎಂದರೆ, ಅಷ್ಟಕ್ಕೆ ಅದಕ್ಕೆ ತೃಪ್ತಿಯಿಲ್ಲ! ಪರಹಿಂಸೆ
ಯಲ್ಲೇ ಅದಕ್ಕೆ ಕುತೂಹಲ! ತನ್ನ ಮನಸ್ಸು ಯಾರ ಮೇಲೆ ಬಿದ್ದರೆ
ಅವರು ಸುಟ್ಟು ಭಸ್ಮವಾಗಬೇಕು; ಆಗ ಅದಕ್ಕೆ ಆನಂದ! ಊಂ;
ಅದೂ ಆಗಲಿ; ಏನೋ ಸ್ವಲ್ಪ ತಾರತಮ್ಯವನ್ನು ನೋಡಿಕೊಂಡು
ತನ್ನ ವಿರೋಧಿಗಳ ಮೇಲೆ ತನ್ನ ತೀಟೆಯನ್ನು ತೀರಿಸಿಕೊಳ್ಳುತ್ತಾ
ಅಲ್ಲಿಗಾದರೂ ಸುಖವಾಗಿರಬಾರದೇ? ಎಂದರೆ, ಉಹುಃ! ಅದೂ
ಆಗುವುದಿಲ್ಲ. ಯಾರ ಸಹಾಯದಿಂದ ತಾನು ಬೆಳೆದು ದೊಡ್ಡದಾ
ಯಿತೋ, ಯಾರ ಉದಾರ, ಹಾಗೂ ಅಕುಟಿಲ ಪ್ರೇಮದಿಂದ, ತನಗೆ
ಅದ್ಭುತವಾದ ನಿಗ್ರಹಶಕ್ತಿಯು ಪ್ರಾಪ್ತವಾಯಿತೋ, ಅವರನ್ನೇ
ಸುಟ್ಟು ತಾನು ಆನಂದಪಡಬೇಕು! ಇದು ಆ ತಮೋವೃತ್ತಿಯ
ದಿವ್ಯಸ್ವರೂಪ!!

ಆದುದರಿಂದ ಮೊದಲನೆಯದಾದ ದೈವಿಕ ಕಾರಣವಾಗಲೀ,
ಅಥವಾ ಎರಡನೆಯದಾದ ಆಸುರೀ ವೃತ್ತಿಯ ವಿಲಾಸವಾಗಲೀ,
ಮುಂದೆ ತನ್ನ ಸ್ವರೂಪವನ್ನು ಬಿಚ್ಚಿ ತೋರಿಸಿಕೊಳ್ಳಲೇ ಬೇಕು.
ಅದುವರಿಗೆ ಈ ತೀರ್ಮಾನಕ್ಕೆ ಕೈಹಾಕುವುದು ಸೂಕ್ತವಲ್ಲ.

## ಈಗ ಕರ್ತವ್ಯವುಂಟೇ?

ಹಾಗಾದರೆ ಅದುವರೆಗೂ ನಾವು ಮಾಡಬೇಕಾದ ಕರ್ತವ್ಯವೇನೂ
ಇಲ್ಲವೇ?—ಎಂಬುದು ಅನಂತರದ ಪ್ರಶ್ನೆ. ಹಾಗೆ ಏನೂ ಇಲ್ಲ
ವೆಂದು ಧೈರ್ಯವಾಗಿ ಹೇಳುವುದಕ್ಕಾಗುವುದಿಲ್ಲ. ಏಕೆಂದರೆ, ವಿಷ
ಯವು ಮಹತ್ತರವಾದುದು. ಯಾವನೋ ಒಬ್ಬ ವ್ಯಕ್ತಿಗೆ ಮಾತ್ರ
ಉಂಟಾಗಬಹುದಾದ ಯಾವುದೋ ಒಂದು ಸಣ್ಣ ದುಃಖದ ವಿಷ
ಯವಾಗಿದ್ದರೆ ಕಾದುನೋಡುವುದೇ ಮೇಲಾಗಿದ್ದಿತು. ಆದರೆ ಇದು
ಅಂತಹದುದಲ್ಲ. ಅರವತ್ತು ಲಕ್ಷ ಮಾನವ ಜೀವಿಗಳ ಪ್ರಾಣ,
ಮಾನ, ಧನಗಳಿಗೆ ಸಂಬಂಧಪಟ್ಟುದು. ಇಡೀ ಭರತಖಂಡದ

ಪ್ರಜಾಕೋಟಿಯ ಜೀವನದ ಮೇಲೂ ಪರ್ಯವಸಾನವಾಗತಕ್ಕದು. ಹಾಗೂ ರೋಗವು ಸಾಮಾನ್ಯವಾದುದಾಗಿಯೂ ಕಾಣುವುದಿಲ್ಲ. ರಾಜ್ಯಾಂಗದ ಅತಿ ಮುಖ್ಯಭಾಗಗಳಲ್ಲಿಯೇ ಅವ್ಯವಸ್ಥೆಯು ತಲೆ ದೋರಿ ಶ್ರೀ ವಾಲ್ಮೀಕಿ ಮಹರ್ಷಿಗಳು ವರ್ಣಿಸಿರುವಂತೆ,

ಶ್ಲೋಕ|| ಅಹೋತಮ ಇವೇದಂಸ್ಯಾತ್ ನಪ್ರಜ್ಞಾಯೇತ ಕಿಂಚನ|
ರಾಜಾಚೇತ್ ನಭವೇಲ್ಲೋಕೇ ವಿಭಜ್ಞ ಸಾಧ್ವಸಾಧುನಿ ||

—ಇದು ಸಾಧು, ಇದು ಅಸಾಧು; ಇದು ನ್ಯಾಯ, ಇದು ಅನ್ಯಾಯ;—ಎಂಬ ವಿಭಾಗವೇ ಇಲ್ಲದೆ, ಎಲ್ಲೆಲ್ಲೂ ಕಗ್ಗತ್ತಲೆ ಕವಿದು, ಯಾರಿಗೂ ಏನೂ ತೋರದಂತೆ ಆಗಿಬಿಟ್ಟಿದೆ. ಯಾವ ಸಮಯಕ್ಕೆ ಏನೋ ಎಂದು ಪ್ರತಿಯೊಬ್ಬ ಪ್ರಜೆಯೂ ಒಂದೊಂದು ದಿನವನ್ನೂ ಒಂದೊಂದು ವರ್ಷವಾಗಿ ಕಳೆಯುತ್ತಿದ್ದಾನೆ. ಇಂತಹ ಸಮಯದಲ್ಲಿ ದೇಶದ ಪ್ರಜೆಗಳಿಗೆ ಕರ್ತವ್ಯವೇನೂ ಇಲ್ಲವೆಂದು ಹೇಳುವುದು ಸಾಹಸದ ಕೆಲಸ.

## ಸತ್ಯಾಗ್ರಹವೇ ಔಷಧ

ಇನ್ನು ಅಂತಹ ಕರ್ತವ್ಯವಾವುದೆಂಬುದನ್ನು ನೋಡೋಣ. ಧಾರ್ಮಿಕ, ಸಾಮಾಜಿಕ ಹಾಗೂ ರಾಜಕೀಯವಾದ ಯಾವುದೇ ದೋಷವನ್ನಾಗಲೀ ನಿವಾರಣೆಮಾಡಿಕೊಳ್ಳಲು ಲೋಕದಲ್ಲಿ ಸತ್ಯಾಗ್ರಹಕ್ಕಿಂತಲೂ ಉತ್ತಮವಾದ ಔಷಧವು ಮತ್ತೊಂದು ಇರಲಾರದು. ಆದರೆ ಇದನ್ನೂ ಸರಿಯಾದ ಅನುಪಾನದಿಂದಲೇ ಸೇವಿಸಬೇಕು. ಸತ್ಯಾಗ್ರಹದ ಸಾಧನೆಗೆ ಬೇಕಾದ ಅತ್ಯಾವಶ್ಯಕ ಸಾಮಗ್ರಿಯೆಂದರೆ ದೈವನಿರ್ಭರತೆ ಹಾಗೂ ಅಹಿಂಸಾವೃತ್ತಿ. ಇವೆರಡೂ ಒಂದಕ್ಕೊಂದು ಭಿನ್ನವಲ್ಲ. ಒಂದು ಕಾರಣ; ಮತ್ತೊಂದು ಕಾರ್ಯ. ಯಾರು ತಮ್ಮ ಯೋಗಕ್ಷೇಮವನ್ನು ಭಗವಂತನ ಕೈಯಲ್ಲಿ ಸಂಪೂರ್ಣವಾಗಿ ಸಮರ್ಪಿಸಲಾರರೋ, ಅಂತಹವರಿಗೆ ಅಹಿಂಸಾತತ್ವದ

ಸ್ವರೂಪವು ಎಂದಿಗೂ ಸರಿಯಾಗಿ ಗೋಚರವಾಗುವುದಿಲ್ಲ. ಆದರೂ ಅದುವರೆಗೆ ಸಾಧನೆಯನ್ನು ಮಾತ್ರ ಬಿಡಬಾರದು. ಏಕೆಂದರೆ, ನಾವು ಕಾರ್ಯದಿಂದ ಕಾರಣವನ್ನು ಮುಟ್ಟಬೇಕಾಗಿದೆಯೇ ಹೊರತು, ನೇರವಾಗಿ ಕಾರಣವನ್ನೇ ಸೇರಿಬಿಡಲಾಗುವುದಿಲ್ಲ. ಆದುದರಿಂದ ಒಂದು ವೇಳೆ ಮನಸ್ಸಿನಿಂದ ಸಾಧ್ಯವಿಲ್ಲದಿದ್ದರೂ, ವಾಕ್, ಕಾಯ ಗಳಿಂದಲಾದರೂ ನಾವು ಖಂಡಿತವಾಗಿ ಅಹಿಂಸಾವೃತ್ತಿಯನ್ನು ಅನು ಸರಿಸಲೇಬೇಕು. ಇಷ್ಟುಮಾತ್ರವೂ ಸಾಧ್ಯವಿಲ್ಲದಿದ್ದರೆ, ಸತ್ಯಾಗ್ರ ಹದ ತಂಟೆಗೆ ಯಾರೂ ಹೋಗಲೇಬಾರದು.

## ಸತ್ಯಾಗ್ರಹದ ಕ್ರಿಯಾಸ್ವರೂಪ

ಇನ್ನು ಸತ್ಯಾಗ್ರಹದ ಕ್ರಿಯಾ ಸ್ವರೂಪವೆಂದರೆ ಸತ್ವಪ್ರಚೋ ದನ. ಇದಕ್ಕೆ ಧ್ಯಾನವು ಆವಶ್ಯಕ. ಧ್ಯಾನಕ್ಕೆ ಪವಿತ್ರವಾದ ಧ್ಯೇ ಯವೂ, ಮೌನವೂ ಆಗತ್ಯವಾಗಿ ಬೇಕು. ಹಿಂದೆ ಹೇಳಿದಂತೆ ಅಹಿಂಸಾ ವೃತ್ತಿಯಿಂದ ತಮೋಗುಣವನ್ನೂ, ದೈವನಿರ್ಭರತೆಯಿಂದ ರಜೋಗುಣವನ್ನೂ ಹಿಂದಕ್ಕೆ ಮೆಟ್ಟಿ, ಮೌನದಿಂದ ಚಿತ್ತವಿಕ್ಷೇಪ ವನ್ನು ತಡೆದು, ಸತ್ವಾಶ್ರಯನಾಗಿ, ಮನಸ್ಸನ್ನು ಧ್ಯೇಯಾಕಾರ ವಾಗಿ ಪರಿಣಾಮಗೊಳಿಸಿದಾಗ, ಆ ಧ್ಯೇಯವಾದ ವಸ್ತುವು ಯಾವು ದೇ ಆಗಿರಲಿ, ಅದು ಯಾರ ಸ್ವಾಧೀನದಲ್ಲೇ ಇದ್ದಿರಲಿ, ಈ ಸತ್ವದ ಆಕರ್ಷಣೆಗೆ ಒಳಪಟ್ಟು, ತನಗೆ ಆಶ್ರಯವಾಗಿರುವವರನ್ನೂ ಎಳೆದು ಕೊಂಡು, ಮುಂದೆ ಬಂದು ನಿಲ್ಲುತ್ತದೆ. ಸೂರ್ಯನಿಗೆ ಸ್ವಯಂಪ್ರಕಾ ಶತ್ವ ಹಾಗೂ ಅನ್ಯವಸ್ತುಗಳನ್ನು ಪ್ರಚೋದನ ಗೊಳಿಸುವುದೂ ಹೇಗೆ ಸ್ವಾಭಾವಿಕವೋ, ಹಾಗೆಯೇ ಈ ಎರಡೂ ಕ್ರಿಯೆಗಳು ಸತ್ವ ಗುಣಕ್ಕೂ ಸ್ವಾಭಾವಿಕವು. ಒಬ್ಬನಲ್ಲಿ ಸತ್ವಗುಣವು ವೃದ್ಧಿಯಾ ದಂತೆಲ್ಲಾ ಪ್ರಪಂಚವು ಅವನ ಚೋದನೆಗೆ ಒಳಪಟ್ಟು, ಅವನ ಆಜ್ಞೆಗೆ ಬದ್ಧವಾಗುತ್ತದೆ. ಲೋಕದಲ್ಲಿ ಮಹತ್ಕಾರ್ಯಗಳನ್ನು ನೆರವೇರಿಸಿದ ಮಹನೀಯರ ಗುಟ್ಟಾದರೂ ಇದೇ. ಆದರೆ ಯಾರು

ಸಂಪೂರ್ಣ ವಿರಕ್ತರೋ, ಯಾರಿಗೆ ಮುಕ್ತಿಯೊಂದು ವಿನಾ ಮತ್ತೇನೂ ಬೇಕಾಗಿಲ್ಲವೋ, ಅಂತಹವರು ತಮ್ಮಲ್ಲಿ ಬೆಳೆದು ಬಂದ ಸತ್ವವನ್ನು ಪ್ರಾಪಂಚಿಕವಾದ ಯಾವ ಧ್ಯೇಯದ ಕಡೆಗೂ ಬಿಡದೆ, ಅದರ ಯತ್ಕಿಂಚಿತ್ ಪ್ರಕಾಶವಾದರೂ ಹೊರಗೆ ಕಾಣ ದಂತೆ ಒಳಗೇ ಬಂಧಿಸಿ, ಭಗವಂತನ ಸಾಕ್ಷಾತ್ಕಾರಕ್ಕಾಗಿ ವಿನಿ ಯೋಗಿಸುತ್ತಿದ್ದರು. ನಮ್ಮ ಭರತ ಖಂಡದಲ್ಲಿ ಇಂತಹವರೇ ಹೆಚ್ಚು. ಸಾತ್ವಿಕ ತೇಜಸ್ಸನ್ನು ಪ್ರಾಪಂಚಿಕ ಧ್ಯೇಯಕ್ಕಾಗಿ ಉಪ ಯೋಗಿಸಬಾರದೆಂಬ ಒಂದು ಸಾಮಾನ್ಯವಾದ ನಿಯಮವೂ ಕೂಡ ಇತ್ತು. ಏಕೆಂದರೆ ಹಾಗೆ ಮಾಡುವುದು ಒಂದು ಅಲ್ಪವಸ್ತುವಿಗೆ ಹೆಚ್ಚು ಬೆಲೆಯನ್ನು ಕೊಟ್ಟಂತೆ ಎಂದು ತಿಳಿದಿದ್ದರು.

## ಹಿಂದಿನ ಕಾಲ

ಆದರೆ ಆ ಕಾಲವೇ ಬೇರೆ; ಮನುಷ್ಯನ ನಿತ್ಯ ಜೀವನವು ಈಗಿನಷ್ಟು ಕಠಿಣವಾಗಿರಲಿಲ್ಲ. ಅಧಿಕಾರ ಸೂತ್ರಗಳು ಈಗಿನಂತೆ ಶುದ್ಧ ತಾಮಸಿಕರ ಕೈಯಲ್ಲಿ ಬಿದ್ದಿರಲಿಲ್ಲ. ಮಂದಿಯೂ ಈಗಿ ನಷ್ಟು ಭೋಗಪರರಾಗಿರಲಿಲ್ಲ ಎಲ್ಲರಲ್ಲಿಯೂ ಅಷ್ಟೋ ಇಷ್ಟೋ ಸತ್ವಗುಣದ ಪ್ರಕಾಶವು ಇದ್ದು ಒಬ್ಬರ ವಿಷಯದಲ್ಲೊಬ್ಬರು ನ್ಯಾ ಯ ಧರ್ಮಗಳನ್ನು ಮೀರದೆ ನಡೆಯುತ್ತಿದ್ದರು. ಹಾಗೂ ತಮ್ಮ ಲ್ಲಿರುವ ಸಾತ್ವಿಕ ತೇಜಸ್ಸನ್ನು ವೃದ್ಧಿಪಡಿಸಿಕೊಂಡು, ತನ್ಮೂಲಕ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆಂದು ತವಕ ಗೊಳ್ಳುತ್ತಿ ದ್ದರು. ಮೇಲಾಗಿ ಇವರಿಗೆ ಮಣಿ ಮಂತ್ರೌಷಧಗಳ ಕ್ರಿಯೆ ಯೂ ಗೊತ್ತಿತ್ತು. ಈ ಮೂಲಕ ತಮ್ಮ ಪ್ರಾಪಂಚಿಕ ಕಾರ್ಯಗ ಳನ್ನು ಸುಲಭವಾಗಿ ನೆರವೇರಿಸಿಕೊಳ್ಳುತ್ತಿದ್ದರು. ಆದುದರಿಂದ ಆ ಕಾಲದ ಜನರಿಗೆ ಇಹದ ಸಾಧನೆಯೇ ಬೇರೆ, ಪರದ ಸಾಧನೆಯೇ ಬೇರೆ, ಎಂಬುದು ಒಪ್ಪುತ್ತಿತ್ತು. ಆದರೂ ಇಹವು ಪರದ ಮೆಟ್ಟಿ ಲಾಗಿತ್ತೇ ಹೊರತು ಸ್ವತಂತ್ರವಾಗಿರಲಿಲ್ಲ.

## ಗುರಿಯು ಅಳಿಯಿತು

ಈಗಲೋ ಎಂದರೆ ಪರದ ಸುದ್ದಿಯೇ ಮರೆತು ಹೋಗಿರುವ ಕಾಲವಿದು. ಇನ್ನು ಅದರ ಸಾಧನವಾದ ಸಾತ್ವಿಕ ಭಾವದ ನೆನಪು ಹೇಗೆ ಉಳಿಯಬೇಕು? ಇಹವು ತಾನೇ ತಾನಾಗಿ ಸ್ವತಂತ್ರವಾದುದರಿಂದ, ಹಿಂದೆ ತಾನು ಪರಕ್ಕೆ ಅಧೀನವಾಗಿದ್ದಾಗ ಬೇಡವೆಂದರೂ ತನ್ನ ಮೇಲೆ ಬೀಳುತಲಿದ್ದ ಸಾತ್ವಿಕ ತೇಜಸ್ಸಿನ ಪವಿತ್ರ ಪರಿಣಾಮದಿಂದ ಸಂಪೂರ್ಣ ದೂರವಾಗಿ ಹೋಗಿ, ಇಂದು ಇಹ ಜೀವನವೆಂದರೆ ಕತ್ತಲೆಯ ನುಗ್ಗಾಟವಾಗಿದೆ. ಭಿನ್ನ ಭಿನ್ನಗುಣ ಕರ್ಮ ಸ್ವಭಾವಗಳ ಸಮನ್ವಯವೇ ಸಾಮಾಜಿಕ ಜೀವನದ ಪವಿತ್ರ ಆದರ್ಶವೆಂಬುದು ಮರೆತು ಹೋಗಿ ಸ್ಪರ್ಧೆಯು ಅದರ ಸ್ಥಾನವನ್ನು ಆಕ್ರಮಿಸಿದೆ. ರಾಜಕೀಯ ಜೀವನದಲ್ಲಿ ಸತ್ಯ ಧರ್ಮಗಳಿಗಿದ್ದ ಯಾಜಮಾನ್ಯವು ತಪ್ಪಿಹೋಗಿ ಅರ್ಥ, ಶಸ್ತ್ರಗಳು ಆ ಸ್ಥಳಕ್ಕೆ ಏರಿವೆ. ಇನ್ನು ಧಾರ್ಮಿಕ ಜೀವನವೆಂದರೆ ಭಗವಂತನನ್ನು ಕಾಣುವ ಮಾರ್ಗವಲ್ಲ; ಸಂಖ್ಯಾಬಲವನ್ನು ಸೂಚಿಸುವ ಕುರುಹು! ಹೀಗೆ ಮಾನವ ಜೀವನದ ಬುಡಕಟ್ಟು ಕದಲಿ ಹೋದಮೇಲೆ ಸುಖ ಶಾಂತತೆಗಳು ಎಲ್ಲಿಂದ ಬರಬೇಕು? ಯಾವಕಡೆಗೆ ನೋಡಿದರೂ ಭೋಗದ ಅಮಲು ತಲೆಗೇರಿ ಸತ್ಯಾಸತ್ಯ ವಿಚಾರವು ಮಾಯವಾಗಿ ಹೋಗಿದೆ. ಅಸಮಾಧಾನ ಅಶಾಂತತೆಗಳಿಂದ ಪ್ರತಿಯೊಬ್ಬನೂ ಪರಹಿಂಸೆಯಲ್ಲಿ ಪ್ರವೃತ್ತನಾಗುತ್ತಿದಾನೆ. ಒಟ್ಟಿಗೆ ನೋಡಿದರೆ ಇಡೀ ಪ್ರಪಂಚವೇ ಶ್ರೀ ವಾಲ್ಮೀಕ ಮಹರ್ಷಿಗಳು ವರ್ಣಿಸಿರುವ ಅರಾಜಕತ್ವದ ಕಡೆಗೆ ನಡೆಯುತ್ತಿದೆ.

ಶ್ಲೋಕ|| ನಾರಾಜಕೇ ಜನಪದೇ ಸ್ವಕಂ ಭವತಿಕಸ್ಯಚಿತ್ |
ಮತ್ಸ್ಯಾ ಇವ ನರಾ ನಿತ್ಯಂ ಭಕ್ಷಯನ್ತಿ ಪರಸ್ಪರಮ್ ||

—ಯಾರೂ ಯಾವುದನ್ನೂ ತಮ್ಮದೆಂದು ಹೇಳಿಕೊಳ್ಳುವ ಹಾಗಿಲ್ಲ. ಮತ್ಸ್ಯಗಳು ಒಂದನ್ನೊಂದು ನುಂಗಿ ಜೀವಿಸುವಂತೆ

ಮನುಷ್ಯರು ಒಬ್ಬರನ್ನೊಬ್ಬರು ನಾಶಮಾಡುವುದೇ ಜನಪದ. ಜೀವನದ ಲಕ್ಷಣವಾಗಿ ಪರಿಣಮಿಸುತ್ತಿದೆ!

## ಮಹಾತ್ಮರ ಸಂದೇಶ

ಹೀಗೆ ಪ್ರಪಂಚವು ವಿನಾಶದ ಮಾರ್ಗವನ್ನು ಹಿಡಿದಿರುವಾಗ ಭೌತಿಕ ವಿಜ್ಞಾನದಿಂದ ಬಗೆಬಗೆಯ ಪ್ರಾಣಹಾರಕ ಸಾಮಗ್ರಿಯನ್ನು ಸಿದ್ಧಗೊಳಿಸಿಕೊಂಡು ಮಾನವ ಜಾತಿಯು ತನಗೆ ತಾನೇ ಮೃತ್ಯುವಾಗಿ ಸ್ಮಶಾನ ಯಾತ್ರೆಗೆ ಅನುವಾಗಿರುವಾಗ, ಸತ್ಯ ಧರ್ಮಗಳ ತಿರುಳನ್ನೂ ಮಾನವ ಜೀವನದ ಗುರಿಯನ್ನೂ ಸುಖ ಸಂತೋಷಗಳ ನೆಲೆಯನ್ನೂ ತಿಳಿಯಲಾರದೆ ಇಡೀ ಭೂಮಂಡಲವು ಅಂಧಕಾರ ಕೂಪದಲ್ಲಿ ಬಿದ್ದು ತೊಳಲುತ್ತಿರುವಾಗ,—" ಇಗೋ! ಎಲ್ಲ ಶಕ್ತಿಗೂ ಮಿಗಿಲಾದ ಶಕ್ತಿಯೊಂದಿದೆ; ಎಲ್ಲ ಆಯುಧಗಳಿಗೂ ಶ್ರೇಷ್ಠವಾದ ಆಯುಧವೊಂದಿದೆ; ಒಳಗೂ ಹೊರಗೂ ಏಕಕಾಲದಲ್ಲಿ ಬೆಳಕು ಮಾಡುವ ಜ್ಯೋತಿಯೊಂದಿದೆ;"-ಎಂದು ಸಾರಿ ಆ ಸಾತ್ವಿಕತೇಜಸ್ಸಿನ ದಿವ್ಯ ಪ್ರಭಾವವನ್ನು ಬೀರಿ ಪ್ರಪಂಚವನ್ನು ಮೃತ್ಯು ಮುಖದಿಂದ ಉದ್ಧಾರ ಮಾಡಿದುದೇ ಮಹಾತ್ಮ ಗಾಂಧಿಯವರು ಮಾಡಿದ ಉಪಕಾರವು. ಆದುದರಿಂದಲೇ ಅವರನ್ನು ಅವತಾರೀಕರೆಂದು ಸಹ ಹಲವರು ಕರೆಯುತ್ತಾರೆ. ಅವರಿಗಿಂತಲೂ ಹೆಚ್ಚಿಗೆ ಸಾತ್ವಿಕ ತೇಜಸ್ಸುಳ್ಳ ಮಹಾಪುರುಷರು ಇಂದು ಭರತಖಂಡದಲ್ಲಿ ಇಲ್ಲವೆಂದಲ್ಲ. ಅನೇಕರು ಇದ್ದಾರೆ. ಆದರೆ ಅವರು ಈ ಗೊಂದಲದ ಪ್ರಪಂಚಕ್ಕೆ ಇಳಿದು ಬರುವ ಹಾಗಿಲ್ಲ. ಅವರ ಕರ್ತವ್ಯ ಕ್ಷೇತ್ರವೇ ಬೇರೆ. ಯಾರು ಸಾಮಾನ್ಯ ಜನ ಜೀವನದ ಕಡೆಗೆ ತಿರುಗಿ, ಸಮಷ್ಟಿ ಜೀವನದ ವ್ಯಾಧಿ ತತ್ವವನ್ನು ಕಂಡುಹಿಡಿದು, ರೋಗ ನಿವಾರಣಾ ಪೂರ್ವಕ ಭವಿಷ್ಯಜ್ಜೀವನಕ್ಕೆ ಬೇಕಾದ ನವ ಚೈತನ್ಯವನ್ನೂ ಹಾಗೂ ಪುನಶ್ಚ ವ್ಯಾಧಿಗ್ರಸ್ತರಾಗದಂತೆ ಕ್ರಿಯಾ ವಿಧಾನವನ್ನೂ ಪ್ರಸಾದಿಸಬಲ್ಲರೋ

ಅಂತಹವರನ್ನು ಅವತಾರೀಕರೆಂದು ಕರೆಯುವ ವಾಡಿಕೆ. ಈ ಲಕ್ಷಣವು ಗಾಂಧಿಯವರಿಗೆ ಅನ್ವಯಿಸಲಿ ಅನ್ವಯಿಸದೆ ಇರಲಿ, ಅಂತೂ ಇಹ ಜೀವನದ ಮಾರ್ಗದಲ್ಲಿ, ಅದರಲ್ಲೂ ರಾಜಕೀಯ ಪಥದಲ್ಲಿ, ಸಂಪೂರ್ಣ ನಂದಿಹೋಗಿದ್ದ ಸಾತ್ವಿಕ ಜ್ಯೋತಿಯನ್ನು ಪುನಃ ಪ್ರಜ್ವಲಗೊಳಿಸಿ, ಕಾಳ ಸರ್ಪಗಳಿಗೆ ಆವಾಸ ಸ್ಥಾನವಾಗಿದ್ದ ಆ ದಾರಿಯನ್ನು ಕೊಂಚವಾದರೂ ಸುಗಮ ಮಾಡಿದರೆಂದರೆ ಅತಿ ಶಯೋಕ್ತಿಯೇನೂ ಅಲ್ಲ. **ಇಂತಹ! ಸಾತ್ವಿಕ ಜ್ಯೋತಿಯ ಪ್ರಕಾಶಕ್ಕೆ ಸಾಧಕವಾದ ಎಣ್ಣೆ ಬತ್ತಿಗಳ ಸಂಗ್ರಹವೇ ಸತ್ಯಾಗ್ರಹವು !**

## ದೈವ, ಪೌರುಷ—ಎರಡೂ ಉಂಟು.

ಇನ್ನು ಸತ್ಯಾಗ್ರಹವು ನಮ್ಮಗಳ ಇಂದಿನ ಪರಿಸ್ಥಿತಿಗೆ ಸರಿ ಹೋಗುವುದೇ ?—ಎಂಬುದನ್ನು ಪ್ರತ್ಯೇಕವಾಗಿ ನೋಡೋಣ. ಹಿಂದೆ ವಿಚಾರಮಾಡಿದಂತೆ ಈಗಿನ ಪರಿಸ್ಥಿತಿಯು ದೈವಿಕವಾದ್ದಿರಲಿ, ಪೌರುಷೇಯವಾದ್ದಿರಲಿ, ಎರಡಕ್ಕೂ ಹೊಂದಿಕೊಳ್ಳುವ ಕ್ರಿಯೆಯೆಂದರೆ ಸತ್ಯಾಗ್ರಹವೇ. ಹೇಗೆಂದರೆ, ದೈವಿಕ ಪರಿಸ್ಥಿತಿಯಲ್ಲಿ ಇರಬೇಕಾದ ದೈವನಿರ್ಭರತೆಯೂ, ಪೌರುಷೇಯ ಪ್ರತಿಕ್ರಿಯೆಗೆ ಬೇಕಾದ ಸತ್ವಪ್ರಚೋದನೆಯೂ, ಈ ಎರಡೂ ಸತ್ಯಾಗ್ರಹದಲ್ಲಿ ಅಡಗಿದೆ. ಹಾಗೂ ಈ ಎರಡಕ್ಕೂ ಇಲ್ಲಿ ಸಾಮರಸ್ಯವಿದೆಯೇ ಹೊರತು ದ್ವೈವಿಧ್ಯವಿಲ್ಲ. ಆದುದರಿಂದ ಪೌರುಷೇಯವಾಗಲಿ, ದೈವಿಕವಾಗಲಿ, ಯಾವ ಸಂದರ್ಭದಲ್ಲಾದರೂ ಸತ್ಯಾಗ್ರಹವನ್ನು ನಿರ್ಭಯವಾಗಿ ಆಚರಿಸಬಹುದು. ಆದರೆ ಪಾತ್ರಸಿದ್ಧತೆಯು ಮಾತ್ರ ಇರಲೇಬೇಕು. ಬಹು ಮುಖ್ಯವಾದ ಮತ್ತು ಅತ್ಯಾವಶ್ಯಕವಾದ ಸಿದ್ಧತೆಯೆಂದರೆ, ಈ ಮೊದಲೇ ಹೇಳಿರುವಂತೆ, ವಾಕ್ಕಾಯಗಳಲ್ಲಾದರೂ ಅಹಿಂಸಾವೃತ್ತಿಯನ್ನು ಆಚರಿಸುವ ಯೋಗ್ಯತೆ. ಇದು ಭರತ ಖಂಡದವರಿಗೆ ಸ್ವಭಾವ ಜನ್ಯವಾದುದು. ಆದರೂ ಪರಕೀಯರ

ಸಹವಾಸದಿಂದ ಈ ಯೋಗ್ಯತೆಯನ್ನು ಸ್ವಲ್ಪಮಟ್ಟಿಗೆ ಕಳೆದುಕೊಂಡಿರುತ್ತೇವೆ. ಆದುದರಿಂದ ಪಾತ್ರಸಿದ್ಧತೆಯನ್ನು ಪರೀಕ್ಷಿಸಿಯೇ ಸತ್ಯಾಗ್ರಹವನ್ನು ಪ್ರಾರಂಭಿಸಬೇಕು.

## ಸತ್ಯಾಗ್ರಹದ ಪರಿಣಾಮ.

ಆದರೆ ಇಲ್ಲೊಂದು ಪ್ರಶ್ನೆ. ನೈಸರ್ಗಿಕವಾಗಿ ಅಹಿಂಸಾಮೂಲವನ್ನುಳ್ಳ ಸತ್ಯಾಗ್ರಹವು ಅಧಿಕಾರವ್ಯೂಹದ ಆಸುರೀವೃತ್ತಿಯನ್ನು ನಿವಾರಣೆ ಮಾಡುವುದರಲ್ಲಿ ಹೇಗೆ ಪರಿಣಾಮಗೊಳ್ಳುವುದು? ಈ ವಿಷಯವನ್ನು ಸ್ವಲ್ಪ ಸ್ಪಷ್ಟವಾಗಿ ಹೇಳುವುದೇ ಉತ್ತಮ. ಏಕೆಂದರೆ ಕೇವಲ ಪೌರುಷದ ಕಡೆಗೇ ನಂಬಿಕೆಯಿರತಕ್ಕವರು ಅಹಿಂಸಾತ್ಮಕವಾದ ಸತ್ಯಾಗ್ರಹದಲ್ಲಿ ನಿರಾಶರಾಗುತ್ತಾರೆ. ಈ ನಿರಾಶೆಯೇ ಕೋಪಕ್ಕೆ ಮೂಲವಾಗಿ ಅಲ್ಲಿಂದಾಚೆಗೆ ಹಿಂಸಾವೃತ್ತಿಗೂ ಕಾರಣವಾಗುತ್ತದೆ ಆದುದರಿಂದ ಸತ್ಯಾಗ್ರಹದ ಪರಿಣಾಮದ ವಿಷಯದಲ್ಲಿ ನಾವು ಸಂಪೂರ್ಣ ನಂಬಿಕೆಯುಳ್ಳವರಾಗಿರಬೇಕು ಸತ್ಯಾಗ್ರಹದ ಮೂಲಕ ಕೇಂದ್ರೀಕೃತಿಸಲ್ಪಟ್ಟ ಸಾತ್ವಿಕ ಶಕ್ತಿಯು ಪರ್ವತಗಳನ್ನು ಪುಡಿ ಮಾಡಬಲ್ಲುದು; ಸಮುದ್ರಗಳನ್ನು ಶೋಷಿಸಬಲ್ಲುದು; ಎಂಬುದನ್ನು ನಾವು ಮನವರಿಕೆಗೊಳ್ಳಬೇಕು.

## ಶ್ರೀ ಪರಮೇಶ್ವರನೂ ಸತ್ಯಾಗ್ರಹಿಯೇ !

ಅಷ್ಟೇಕೆ. ಶ್ರೀ ಪರಮೇಶ್ವರನೂ ಕೂಡ ಭಸ್ಮಾಸುರನನ್ನು ನಿಗ್ರಹಿಸಲು ಸತ್ಯಾಗ್ರಹವನ್ನೇ ಕೈಕೊಂಡನು. ತನ್ನಿಂದಲೇ ಹುಟ್ಟಿ ಬೆಳೆದು, ತನ್ನ ಅನುಗ್ರಹದಿಂದಲೇ ನಿಗ್ರಹಶಕ್ತಿಯನ್ನು ಪಡೆದು, ತನ್ನ ಮೇಲೆಯೇ ಕೈ ಮಾಡಲು ಬಂದ ಭಸ್ಮಾಸುರನನ್ನು ನೋಡಿ ಶ್ರೀ ಪರಮೇಶ್ವರನು ಕೋಪ ತಾಳಲಿಲ್ಲ. ಹಾಗೂ ತಾನೇ ಅವನ ನಿಗ್ರಹಕ್ಕಾಗಿ ಪ್ರಯತ್ನ ಮಾಡಲೂ ಇಲ್ಲ. ತಾನಿತ್ತ ನಿಗ್ರಹಶಕ್ತಿ

ಯು ಮುಂದೆ ಪರಾಭವವನ್ನು ಒಪ್ಪಿಕೊಂಡು ಓಡಿಹೋದನು. ಅಲ್ಲಿಗೂ ರಾಕ್ಷಸನು ಬಿಡಲಿಲ್ಲ. ಆಗ ಪರಮೇಶ್ವರನು ಪ್ರತಿಯಾಗಿ ಮತ್ತೇನನ್ನೂ ಮಾಡಲಿಲ್ಲ; ಕೇವಲ ತನ್ನಲ್ಲಿರುವ ಸಾತ್ವಿಕ ಶಕ್ತಿಯನ್ನು ಪ್ರಚೋದನ ಗೊಳಿಸಿದನು. ಆಗ ಆ ಸಾತ್ವಿಕ ಶಕ್ತಿಯು ಬಾಹ್ಯ ಸ್ವರೂಪನಾಗಿ ಸ್ಥಿತಿಯ ಒಡೆತನವನ್ನು ವಹಿಸಿರುವ ಶ್ರೀ ಮಹಾವಿಷ್ಣುವು ತನ್ನ ಕರ್ತವ್ಯವನ್ನು ಅರಿತು, ಭುವನಮೋಹನವಾದ ಮೋಹಿನೀರೂಪವನ್ನು ಧರಿಸಿ, ರಾಕ್ಷಸನ ಮುಂದೆ ನಿಂತನು. ಒಡನೆಯೇ ರಾಕ್ಷಸನು ಆ ಕಡೆಗೆ ತಿರುಗಿ, ಆ ದಿವ್ಯಸ್ವರೂಪದ ಪ್ರಭಾವವನ್ನು ಅರಿಯಲಾರದೆ, ಅದನ್ನೂ ತನ್ನ ನೀಚ-ಆಶಯದ ಸಲುವಾಗಿ ಉಪಯೋಗಿಸಿ ಕೊಳ್ಳಲು ಪ್ರಯತ್ನಪಟ್ಟನು. "ಆಗಲಿ, ನೀನು ನನ್ನಂತೆ ನಾಟ್ಯವಾಡಬಲ್ಲೆಯಾದರೆ ನಿನ್ನನ್ನು ವರಿಸುತ್ತೇನೆಂ"ದು ಆ ದಿವ್ಯ ಸ್ವರೂಪವು ಹೇಳಿತು. ದುರುಳನು ಮುಗ್ಧನಾಗಿ ನಾಟ್ಯಕ್ಕೆ ಉಪಕ್ರಮಿಸಿದನು. ನಾಟ್ಯದ ವಿಜೃಂಭಣೆಯಲ್ಲಿ ಆ ಪರದೇವತಾ ಸ್ವರೂಪವನ್ನು ಅನುಕರಿಸುತ್ತಾ ಆಕೆಯು ತೋರಿಸಿದಂತೆ ತನ್ನ ತಲೆಯ ಮೇಲೆಯೇ ತನ್ನ ಕೈಯನ್ನು ಇಟ್ಟುಕೊಂಡನು. ಅಲ್ಲಿಗೆ ಆವನವರವು ಫಲಿಸಿತು. ಭಸ್ಮಾಸುರನು ತನ್ನಿಂದ ತಾನೇ ಭಸ್ಮವಾದನು?

## ಸ್ಥೂಲ ಪ್ರಪಂಚದೊಡನೆ ಸಮನ್ವಯ

ಇದೇ ಸತ್ಯಾಗ್ರಹದ ಪರಿಣಾಮದರೀತಿಯು. ಈ ಪರಿಣಾಮವು ಸ್ಥೂಲ ಪ್ರಪಂಚದಲ್ಲಿ ಹೇಗೆ ಆಗುವುದೆಂಬುದನ್ನು ತಿಳಿಯ ಬೇಕಾದರೆ ಶ್ರೀ ಪರಮೇಶ್ವರನನ್ನೇ ಪ್ರಜಾಸಮಷ್ಟಿಯೆಂದು ಭಾವಿಸೋಣ. ಅಧಿಕಾರ ವ್ಯೂಹವೇ ಭಸ್ಮಾಸುರನು. ಅದರಲ್ಲಿ ಸ್ವಕೀಯವಾದ ಯಾವ ಶಕ್ತಿಯೂ ಇರುವುದಿಲ್ಲ. (ಅದುದರಿಂದಲೇ ಭಸ್ಮ+ಅಸುರ.) ಪ್ರಜಾಸಮಷ್ಟಿ ಸ್ವರೂಪನಾದ ಪರಮೇಶ್ವರನನ್ನು ಆರಾಧಿಸುತ್ತಾ, ಶಕ್ತಿಸಂಚಯವನ್ನು ಪಡೆಯುತ್ತದೆ. ತನ್ನನ್ನು ಆರಾಧಿಸು

ವವರಿಗೆ ಕೋರಿದವರನ್ನು ಕೊಡವುದೇ ಪರಮೇಶ್ವರನ ಸ್ವಭಾವ. ಗುಣದೋಷ ವಿಮರ್ಶೆ ಮಾಡುವುದಿಲ್ಲ. ಹೀಗೆ ಪ್ರಜಾಸಮಷ್ಟಿಯ ಅನುಗ್ರಹದಿಂದ ಬೆಳೆಯುತ್ತಾ, ಯಾರನ್ನು ಬೇಕಾದರೂ ನಿಗ್ರಹಿಸ ತಕ್ಕ ವರವನ್ನು ಭಸ್ಮಾಸುರನು ಪಡೆಯುತ್ತಾನೆ. ಹೀಗೆ ಪಡೆದ ಮೇಲೆ ಇವನ ತಲೆಯು ನಿಲ್ಲುವುದಿಲ್ಲ. ತನಗೆ ನಿಗ್ರಹ ಶಕ್ತಿಯನ್ನು ದಯಪಾಲಿಸಿದ ಪ್ರಜಾಸಮೂಹದ ತಲೆಯ ಮೇಲೆಯೇ ಕೈಯಿಟ್ಟು ಸುಟ್ಟು ಬಿಡಲು ಹವಣಿಸುತ್ತಾನೆ. ಆಗ ಪ್ರಜಾಸಮೂಹವು ದೈನ್ಯ ದಿಂದ ಓಡುತ್ತದೆ ಅಲ್ಲಿಗೂ ಭಸ್ಮಾಸುರನು ಬಿಡುವುದಿಲ್ಲ. ಆದರೂ ಪ್ರಜಾಸಮುದಾಯವು ಆಯುಧವನ್ನು ಮಾತ್ರ ಹಿಡಿಯಬಾರದು. ಸಾಕ್ಷಾತ್ತಾಗಿ ನಿಗ್ರಹಕ್ಕೂ ಪ್ರಯತ್ನಿಸಬಾರದು. ಪರಮೇಶ್ವರನು ಸಾಕ್ಷಾತ್ತಾಗಿ ನಿಗ್ರಹಕ್ಕೆ ಪ್ರಯತ್ನಿಸಿ ತನ್ನ ಫಾಲನೇತ್ರವನ್ನು ತೆರೆ ದಿದ್ದರೆ ಭಸ್ಮಾಸುರನ ವಿನಾಶದಲ್ಲಿ ಮಾತ್ರ ಕೊನೆಗೊಳ್ಳದೆ ಹೇಗೆ ಸೃಷ್ಟಿಯೇ ನಾಶವಾಗುತ್ತಿತ್ತೋ, ಹಾಗೆಯೇ ಪ್ರಜಾಸಮೂಹವು ಆಯುಧವನ್ನು ಹಿಡಿದು, ಸ್ವಯಂ ನಿಗ್ರಹಕ್ಕೆ ಹೋದಾಗ ಅಧಿಕಾರ ವ್ಯೂಹದ ಭೇದನವು ಹೇಗಾದರೂ ಆಗಲಿ; ರಾಜ್ಯದಲ್ಲಿನ ಹೆಂಗ ಸರೂ, ಮಕ್ಕಳೂ, ವೃದ್ಧರೆನ್ನದೆ ಸಮಸ್ತರ ವಿನಾಶಕ್ಕೂ ಕಾರಣ ವಾಗುತ್ತದೆ. ಅಲ್ಲದೆ ನಮ್ಮ ಅನುಗ್ರಹದಿಂದ ಬೆಳೆದು ದೊಡ್ಡವ ರಾದವರನ್ನು ನಾವೇ ನಿಗ್ರಹಿಸಲು ಹೊರಡುವುದು ಎಂದಿಗೂ ಧರ್ಮ ವಾಗುವುದಿಲ್ಲ. ಎಲ್ಲಿ ಧರ್ಮವಿಲ್ಲವೋ ಅಲ್ಲಿ ಜಯವೂ ಅಸಂಭವ. ಅಧಿಕಾರ ವ್ಯೂಹದಲ್ಲಿರುವ ನಿಗ್ರಹ ಶಕ್ತಿಯಾದರೂ ನಮ್ಮದೇ. ಅದನ್ನು ನಾವು ಮಾನ್ಯಮಾಡಲೇಬೇಕು. ಆದುದರಿಂದಲೇ ಪರ ಮೇಶ್ವರನೂ ರಾಕ್ಷಸನಿಗೆ ಹೆದರ ಬೇಕಾಯಿತು ತಾನು ಕೊಟ್ಟ ವರವನ್ನು ತಾನು ಮಾನ್ಯ ಮಾಡಬೇಕಾಯಿತು. ಆದರಂತೆ ಪ್ರಜಾ ಸಮುದಾಯಕ್ಕಾದರೂ ಇರುವ ಮಾರ್ಗವು ಒಂದೇ. ಶ್ರೀ ಪರಮೇಶ್ವ ರನ ರೀತಿಯಲ್ಲಿ, ಕ್ರೋಧಕ್ಕೆ ಎಡೆಗೊಡದೆ, ಅಹಿಂಸಾ ಮಾರ್ಗ ವನ್ನು ಹಿಡಿದು, ತನ್ನಲ್ಲಿರುವ ಅಂತಸ್ಸತ್ವವನ್ನು ಪ್ರಚೋದನ ಗೊಳಿಸುವುದು. ಹೀಗೆ ಪ್ರಚೋದನೆ ಗೊಂಡು, ಐಕ್ಯತೆಯನ್ನು

ಹೊಂದಿದ ನಾಡಿನ ಮಂದಿಯ ಸಾತ್ವಿಕತೇಜದ ದಿವ್ಯಪ್ರಕಾಶವು ನೇರವಾಗಿ ಹೊರಟು, ಆ ಅಂತಸ್ತೇಜದ ಬಾಹ್ಯ ಸ್ವರೂಪನೂ, ನಾಡಿನ ಸ್ಥಿತಿಕರ್ತನೂ, ಶ್ರೀ ಮಹಾವಿಷ್ಣುವಿನ ಅಂಶ ಸಂಭೂತನೂ ಆದ ಪ್ರಭುವನ್ನು ತನ್ನ ಕರ್ತವ್ಯದ ಕಡೆಗೆ ಪ್ರಬೋಧ ಗೊಳಿಸು ವುದು. ಹೀಗೆ ಪ್ರಜಾ ಸಮುದಾಯದಿಂದ ಉಪಾಸಿಸಲ್ಪಟ್ಟ ಪ್ರಭುವು "ಪ್ರಜಾನಿಚಯಕ್ಕಂ ಪೊರೆವನೆ ದೈವಂ, ಜಗದೊಳಗರಸಿಂಗಂ ಪ್ರಜೆ ಯೆ ದೈವವಲೆ?"-ಎಂಬ ಕರ್ಣಾಟಕ ಕವಿಯ ದಿವ್ಯಸೂಕ್ತಿಯಂತೆ, ತನ್ನ ಸ್ಥಾನವನ್ನೂ, ತನ್ನ ಕರ್ತವ್ಯವನ್ನೂ ಅರಿತು, ತನ್ನ ಉಪಾಸ್ಯ ಮಾನದೇವತೆಯೂ, ಶ್ರೀಪರಮೇಶ್ವರ ಸ್ವರೂಪವೂ ಆದ ಪ್ರಜಾಸ ಮೂಹದ ಉದ್ಧಾರಕ್ಕಾಗಿ ಹೊರಗೆ ಬರುತ್ತಾನೆ. ಯಾವ ರೂಪದಲ್ಲಿ? ಭುವನ ಮೋಹನಕರವಾದ ನ್ಯಾಯದೇವತಾ ಸ್ವರೂಪದಲ್ಲಿ! ಆಗ ಅಧಿಕಾರವ್ಯೂಹದ ಅಂತರ್ಗಾಮಿಯಾದ ಭಸ್ಮಾಸುರನೂ ಆ ದೇವತೆ ಯನ್ನು ತನ್ನ ಸುಖಕ್ಕಾಗಿ ಒಲಿಸಿಕೊಳ್ಳಬೇಕೆಂದು ಪ್ರಯತ್ನ ಮಾಡುತ್ತಾನೆ. ತನ್ನನ್ನು ಅನುವರ್ತಿಸಿ ನಡೆದರೆ ಆಗಬಹುದೆಂದು ದೇವತೆಯ ಆಜ್ಞೆಯಾಗುತ್ತದೆ. ಭಸ್ಮಾಸುರನೂ ಹಾಗೆ ನಡೆ ಯಲು ಮೊದಲುಮಾಡುತ್ತಾನೆ. ಇನ್ನು ನ್ಯಾಯದೇವತೆಯ ಅಧೀ ನಕ್ಕೆ ಒಳಪಟ್ಟು, ಆಕೆಯನ್ನನುಕರಿಸಲು ಮೊದಲಿಟ್ಟ ಮೇಲೆ ಭಸ್ಮಾಸುರನ ಬಾಳುವೆಯಾದರೂ ಉಳಿವುದೆಂತು? ಕೊನೆಗೆ ತನ್ನ ನಿಗ್ರಹ ಹಸ್ತಗಳನ್ನು ತನ್ನ ತಲೆಯಮೇಲೆಯೇ ಇಟ್ಟುಕೊಳ್ಳು ವಂತಾಗಿ ಭಸ್ಮಾಸುರನು ಭಸ್ಮವಾಗುತ್ತಾನೆ!!

## ಉಪಸಂಹಾರ

ಇದೇ ಸತ್ಯಾಗ್ರಹದ ಪರಿಣಾಮವು. ಯಾವ ಸಮಯದಲ್ಲೇ ಆಗಲಿ ಪ್ರಜಾಸಮುದಾಯವು ನಿಜವಾದ ಸತ್ಯಾಗ್ರಹವನ್ನು ಕೈ ಕೊಂಡುದೇ ಆದರೆ, ಸ್ವಲ್ಪ ಜಾಗ್ರತೆಯಲ್ಲೋ ಅಥವಾ ಸ್ವಲ್ಪ ವಿಳಂಬವಾಗಿಯೋ, ಅಂತೂ ಈ ಪರಿಣಾಮವು ಆಗಲೇಬೇಕು.

ಆದುದರಿಂದ, ದೇಶಬಾಂಧವರೇ, ನಿಜವಾಗಿಯೂ ಭಸ್ಮಾಸುರನು ನಿಮ್ಮ ಬೆನ್ನು ಹತ್ತಿರುವನೆಂದು ನೀವು ತಿಳಿದಿದ್ದರೆ, ಹಾಗೂ ಜಗಸ್ಮಾತೆಯಾದ ನ್ಯಾಯದೇವತೆಯು ನಿಮ್ಮ ರಾಷ್ಟ್ರದಲ್ಲಿ ಅವತರಿಸಿ ನಿಮ್ಮನ್ನು ಕಾಪಾಡಬೇಕೆಂಬ ಆಶೆಯು ನಿಮಗಿರುವುದಾದರೆ, ಕೂಡಲೇ ಸತ್ಯಾಗ್ರಹಕ್ಕೆ ಸಿದ್ಧರಾಗಿ!! ಸತ್ಯಧರ್ಮಗಳೆಂಬ ಸೊಡರುಗಳಲ್ಲಿ ಅಹಿಂಸೆ ಹಾಗೂ ದೈವನಿರ್ಭರತೆಗಳೆಂಬ ಎಣ್ಣೆ ಬತ್ತಿಗಳನ್ನು ಅಳವಡಿಸಿ, ಅಂತಸ್ತೇಜದಿಂದ ಹಚ್ಚಿ, ಪ್ರಜಾ ಹೃದಯದ ಸುವರ್ಣ ಸ್ತಬಕದಲ್ಲಿ ಪ್ರೇಮಮಯ ಆರತಿಯೊಡನೆ ಮೌನದ ಹಾಡನ್ನು ಹಾಡುತ್ತಾ, ಆ ಭುವನ ಮೋಹನ ಸೌಂದರ್ಯದ, ಮಧುರ ಲೀವಿನೋದಿಯಾದ ಶ್ರೀ ಕೃಷ್ಣಪರಮಾತ್ಮನ ಲೀಲಾ ಸ್ವರೂಪವೆನಿಸಿದ, ಲೋಕರಕ್ಷಣ ಧುರೀಣೆಯಾದ ಆ ನ್ಯಾಯದೇವತೆಯ ದಿವ್ಯ ದರ್ಶನವನ್ನು ಪಡೆದು ಆನಂದಿಸೋಣ!!

ಓಂ ತತ್ಸತ್.



 ದಯವಿಟ್ಟು ಪರಿಶಿಷ್ಟವನ್ನು ಓದಿನೋಡಿ

# ಒಂದನೆಯ ಪರಿಶಿಷ್ಟ

---

ನಮ್ಮ ದೇಶದ ಪರಿಸ್ಥಿತಿಯಲ್ಲಿ ನಾವು ಅತ್ಯಾವಶ್ಯಕವಾಗಿ ಅನುಸರಿಸಬೇಕಾದ ಸತ್ಯಾಗ್ರಹದ ನಿಯಮಗಳಾವುವೆಂದರೆ:—

## ಉದ್ದೇಶ

(೧) ದೇಶದಲ್ಲಿ ನ್ಯಾಯಧರ್ಮಗಳು ನೆಲಗೊಳ್ಳುವುದೊಂದೇ ಸತ್ಯಾಗ್ರಹದ ಉದ್ದೇಶವಾಗಿರಬೇಕು. ಯಾವೊಬ್ಬ ಮನುಷ್ಯನ ಜಯಾಪಜಯಗಳನ್ನೂ ಲಕ್ಷ್ಯದಲ್ಲಿಡಬಾರದು.

## ಸತ್ಯಾಗ್ರಹಸಭೆ ಮತ್ತು ಕಛೇರಿ.

(೨) ಸತ್ಯಾಗ್ರಹ ತತ್ವಗಳಲ್ಲಿ ಸಂಪೂರ್ಣ ನಂಬಿಕೆಯುಳ್ಳ ಐದು ಮಂದಿಗೆ ಕಡಮೆ ಇಲ್ಲದ, ಹದಿನೈದು ಮಂದಿಗೆ ಹೆಚ್ಚಿಲ್ಲದ ಹಾಗೂ ವ್ಯವಸ್ಥಾಬದ್ಧವಾದ ಒಂದು ಸಭೆಯ ಮೇಲ್ವಿಚಾರಣೆಯಲ್ಲಿ ಸತ್ಯಾಗ್ರಹವು ನಡೆಯತಕ್ಕದ್ದು.

(೩) ಈ ಸಭೆಯ ಕಛೇರಿಯು ಸತ್ಯಾಗ್ರಹ ಕ್ಷೇತ್ರಕ್ಕೆ ಹೆಚ್ಚು ದೂರವಿಲ್ಲದ ಒಂದು ಪ್ರತ್ಯೇಕ ಸ್ಥಳದಲ್ಲಿ ಇರತಕ್ಕದ್ದು. ಪ್ರತಿಯೊಂದು ಕೆಲಸವೂ ಈ ಸಭೆಯ ಅಜ್ಞೆಯಿಂದಲೇ ನಡೆಯತಕ್ಕದ್ದು.

# ಸತ್ಯಾಗ್ರಹ ಕ್ಷೇತ್ರ

(೪) ವಿಶಾಲವಾಗಿಯೂ, ಜನಸಂಚಾರಾದಿಗಳಿಗೆ ತೊಂದರೆಯಿಲ್ಲದೆಯೂ ಇರುವ ಪ್ರದೇಶವನ್ನು ಸತ್ಯಾಗ್ರಹ ಕ್ಷೇತ್ರವಾಗಿ ಆರಿಸಿಕೊಳ್ಳತಕ್ಕದ್ದು.

(೫) ಸತ್ಯಾಗ್ರಹ ಕ್ಷೇತ್ರದಲ್ಲಿ ಯಾವ ಬಗೆಯ ಉಪನ್ಯಾಸಾದಿಗಳೂ, ಮಾತು ಕತೆಗಳೂ ನಡೆಯಕೂಡದು. ಭಗವದ್ಧ್ಯಾನವು ಕೂಡ ಮೌನವಾಗಿಯೇ ನಡೆಯತಕ್ಕದ್ದು. ತಾಳ ಮೇಳಗಳೊಂದಿಗೆ ಬಾಹ್ಯಭಜನೆಗಾಗಲಿ, ಬಾಹ್ಯ ಪೂಜೆಗಾಗಲಿ ಅವಕಾಶವಿರಲಾಗದು. ತಿಂಡಿ ತೀರ್ಥಗಳನ್ನು ಅಲ್ಲಿ ತಿನ್ನಕೂಡದು. ಸಹಾಯ ದ್ರವ್ಯವನ್ನೂ ಅಲ್ಲಿ ಪಡೆಯಕೂಡದು.

## ಹೊರಗಿನ ಪರಿಸ್ಥಿತಿ

(೬) ಸತ್ಯಾಗ್ರಹದ ಅಂಗವಾಗಿ ಯಾವ ಪ್ರದೇಶಗಲ್ಲಾಗಲಿ ಭಾಷಣಗಳನ್ನು ಮಾಡಕೂಡದು. ಈ ಸಂಬಂಧವಾಗಿ ಮಹಾಜನರಿಗೆ ಏನು ತಿಳಿಸಬೇಕಾದರೂ ಹಸ್ತ ಪತ್ರಗಳ ಮೂಲಕವೇ ತಿಳಿಸಬೇಕು.

(೭) ಸತ್ಯಾಗ್ರಹದ ನೆಪದ ಮೇಲೆ ಯಾವ ಬಗೆಯ ಮುಷ್ಕರಗಳಾಗಲಿ, ಹರತಾಳಗಳಾಗಲಿ, ನಡೆಯಕೂಡದು.

(೮) ಮಹಾಜನರು ಯಾವ ಸಲಹೆಯನ್ನು ಕೊಡಬೇಕಾಗಿದ್ದರೂ, ದ್ರವ್ಯ ಸಹಾಯ ಮಾಡಬೇಕಾಗಿದ್ದರೂ, ಮತ್ತೆ ಯಾವ ರೀತಿಯಲ್ಲಿ ಸಹಾನುಭೂತಿಯನ್ನೂ ತೋರಿಸಬೇಕಾಗಿದ್ದರೂ ಸತ್ಯಾಗ್ರಹದ ಕಛೇರಿಗೆ ದಯಮಾಡಿ ಅಲ್ಲಿ ನೆರವೇರಿಸತಕ್ಕದ್ದು. ಸತ್ಯಾಗ್ರಹ ಕ್ಷೇತ್ರವನ್ನು ಸಂಪೂರ್ಣ ಶಾಂತಮಯವಾಗಿ ಇಟ್ಟಿರಬೇಕು. ಆದರೆ ಮಹಾಜನರು ಯಾರಾದರೂ ಸತ್ಯಾಗ್ರಹ ಕ್ಷೇತ್ರಕ್ಕೆ ದಯಮಾಡಿ ಯಥಾಶಕ್ತಿ ತಾವೂ ಸತ್ಯಾಗ್ರಹಿಗಳೊಡನೆ ಮೌನದಿಂದ ಭಗವದ್ಧ್ಯಾನ ಮಾಡುವುದಾದರೆ ಅಗತ್ಯವಾಗಿ ಆಗಬಹುದು.

## ಸತ್ಯಾಗ್ರಹಿಗಳು ಮತ್ತು ಸ್ವಯಂಸೇವಕರು

(೯) ಹದಿನೆಂಟು ವರುಷಕ್ಕೆ ಕಡಮೆ ವಯಸ್ಸುಳ್ಳವರನ್ನು ಸತ್ಯಾಗ್ರಹಿಗಳನ್ನಾಗಿಯಾಗಲಿ, ಸ್ವಯಂ ಸೇವಕರನ್ನಾಗಿಯಾಗಲಿ ಅಂಗೀಕರಿಸಕೂಡದು.

(೧೦) ತಾವು ಸಂಪೂರ್ಣವಾಗಿ ಅಹಿಂಸಾವೃತ್ತಿಯನ್ನು ಆಚರಿಸುವುದಾಗಿ ಈ ಇಬ್ಬರೂ ಪ್ರಮಾಣ ವಚನವನ್ನೂ ಕೊಡಬೇಕು.

(೧೧) ಸತ್ಯಾಗ್ರಹಿಗಳು ಶಾಕಾಹಾರವನ್ನೇ ಮಾಡಬೇಕಲ್ಲದೆ ಪ್ರತಿದಿನವೂ ಸತ್ಯಾಗ್ರಹ ನಡೆಯುವಾಗ ಒಂದು ಹೊತ್ತು ಊಟವನ್ನೂ ಬಿಡಬೇಕು. ಎರಡನೇ ಹೊತ್ತು ಫಲಾಹಾರ ಬೇಕಾದರೆ ಮಾಡಬಹುದು. ಸ್ವಯಂ ಸೇವಕರಿಗೆ ಉಪವಾಸ ನಿಯಮವೇನೂ ಇಲ್ಲ.

(೧೨) ಸತ್ಯಾಗ್ರಹ ಕ್ಷೇತ್ರದಲ್ಲಿರುವಾಗ ಇಬ್ಬರಿಗೂ ಮೌನವು ಆವಶ್ಯಕ. ಕೇವಲ ಮೌನದಿಂದ ಕುಳಿತು ಧ್ಯಾನಮಾಡುವುದು ಸತ್ಯಾಗ್ರಹಿಗಳ ಕೆಲಸ. ಅಲ್ಲಿನ ಶಾಂತಮಯ ವಾತಾವರಣವನ್ನು ಕಾಪಾಡುವುದು, ಹೊರಗಿನ ಮಂದಿಯನ್ನು ವ್ಯವಸ್ಥೆಯಿಂದ ಇರಿಸುವುದು, ಕ್ಷೇತ್ರಜ್ಯೋತಿಯನ್ನು ನಂದಿ ಹೋಗದಂತೆ ನೋಡಿಕೊಳ್ಳುವುದು, ಈ ಮೊದಲಾದುವು ಸ್ವಯಂ ಸೇವಕರ ಕರ್ತವ್ಯಗಳು. ಈ ಎಲ್ಲ ಕೆಲಸಗಳನ್ನೂ ಸಂಜ್ಞೆ, ನಮಸ್ಕಾರಾದಿಗಳ ಮೂಲಕ ನೆರವೇರಿಸಬೇಕೇ ಹೊರತು ಮಾತನಾಡಕೂಡದು; ಹಾಗೂ ಯಾವ ಬಗೆಯ ದಂಡವನ್ನೂ ಕೈಯಲ್ಲಿ ಹಿಡಿಯಕೂಡದು. ಸ್ವಯಂ ಸೇವಕರೂ ಸತ್ಯಾಗ್ರಹಿಗಳೂ ಯಾವಾಗಲೂ ಸಭೆಯವರಿಂದ ಅಧಿಕಾರ ಹೊಂದಿದ ನಾಯಕರಿಗೆ ಅಧೀನರಾಗಿ ನಡೆದುಕೊಳ್ಳಬೇಕು.

### ಸತ್ಯಾಗ್ರಹದ ಕ್ರಮ

(೧೩) ನಮ್ಮ ಸಂಸ್ಥಾನದ ನಗರ, ಪಟ್ಟಣ, ಹಾಗೂ ತಾಲ್ಲೂಕುಗಳ ಮುಖ್ಯ ಸ್ಥಳಗಳಲ್ಲಿ ವಾಸ ಮಾಡತಕ್ಕವರು ಆಯಾ

ಪ್ರದೇಶದ ಜನ ಸಂಖ್ಯೆ, ಸಹಾಯ, ಸೌಕರ್ಯಗಳನ್ನನುಸರಿಸಿ, ಮೂರು ದಿನಗಳಿಗೆ ಕಡಮೆ ಇಲ್ಲದೆ ನಲವತ್ತು ದಿನಗಳಿಗೆ ಹೆಚ್ಚಿಲ್ಲದೆ ಒಂದು ಕ್ಲುಪ್ತ ಕಾಲದವರೆಗೆ ಸತ್ಯಾಗ್ರಹವನ್ನು ನಡೆಸುವುದಾಗಿ ಮೊದಲೇ ಸಂಕಲ್ಪ ಮಾಡಿಕೊಂಡು ಪ್ರಾರಂಭಿಸಬೇಕು. (ಹಳ್ಳಿಗಳಲ್ಲಿ ನಡೆಸುವ ವಿಧಾನವನ್ನು ಎರಡನೇ ಪರಿಶಿಷ್ಟದಲ್ಲಿ ಹೇಳಿದೆ)

(೧೪) ಸತ್ಯಾಗ್ರಹವನ್ನು ಮೊದಲು ಮಾಡುವ ದಿನ ಸತ್ಯಾಗ್ರಹಿಗಳೂ, ಸ್ವಯಂ ಸೇವಕರೂ, ಎಲ್ಲರೂ ಸೇರಿ, ಯಾವುದಾದರೊಂದು ದೇವರ ಚಿತ್ರಪಟ ಹಾಗೂ ಶ್ರೀಮನ್ಮಹಾರಾಜರ ಮತ್ತು ಮಹಾತ್ಮಾ ಗಾಂಧಿಯವರ ಪಟಗಳೊಂದಿಗೆ, ಒಂದು ದೇವಸ್ಥಾನಕ್ಕೆ ಹೊರಟು ಅಲ್ಲಿ ದೇವರ ಮಂಗಳಾರತಿಯನ್ನು ತೀರಿಸಿಕೊಂಡು, ಮೌನದಿಂದ ಪುರ ಪ್ರದಕ್ಷಿಣೆ ಮಾಡಿ, ಸತ್ಯಾಗ್ರಹ ಕ್ಷೇತ್ರಕ್ಕೆ ಮುಟ್ಟಬೇಕು.

(೧೫) ಸತ್ಯಾಗ್ರಹ ಕ್ಷೇತ್ರದಲ್ಲಿ ಆ ಮೊದಲೇ ಸಗಣಿಯಿಂದ ಸಾರಿಸಿ ಶುದ್ಧಿ ಮಾಡಲ್ಪಟ್ಟ ಪ್ರದೇಶದಲ್ಲಿ ಈ ಪಠಗಳನ್ನು ಸ್ಥಾಪಿಸುವುದಲ್ಲದೆ, ದೊಡ್ಡ ಹಣತೆಯಲ್ಲಿ ತುಪ್ಪದಿಂದ ಜ್ಯೋತಿಯೊಂದನ್ನು ಹಚ್ಚಿಸಬೇಕು. ಹೀಗೆ ಹಚ್ಚಿದ ಮೇಲೆ, ದೇಶದಲ್ಲಿ ನ್ಯಾಯ ಧರ್ಮಗಳು ನೆಲೆಗೊಳ್ಳಲೆಂದೂ, ಸತ್ಯಾಗ್ರಹವು ನಿರ್ವಿಘ್ನವಾಗಿ ನೆರವೇರಲೆಂದೂ, ಭಗವಂತನನ್ನು ಮನಸ್ಸಿನಲ್ಲಿಯೇ ಪ್ರಾರ್ಥಿಸುತ್ತಾ ಎಲ್ಲರೂ ಪ್ರದಕ್ಷಿಣೆ ಮಾಡಿ ಸಾಷ್ಟಾಂಗ ನಮಸ್ಕಾರವನ್ನು ಆಚರಿಸತಕ್ಕದ್ದು. ಅನಂತರ ಆ ಸಮಯಕ್ಕೆ ಎಷ್ಟು ಮಂದಿ ಸತ್ಯಾಗ್ರಹಿಗಳು, ಸ್ವಯಂ ಸೇವಕರು, ಗೊತ್ತುಮಾಡಲ್ಪಟ್ಟಿರುವರೋ ಅವರು ಮಾತ್ರ ಅಲ್ಲಿ ನಿಂತು ಮಿಕ್ಕವರು ಮೌನವಾಗಿ ಹೊರಟು ಬರಶಕ್ಕದ್ದು.

(೧೬) ಅನಂತರ ಸತ್ಯಾಗ್ರಹಿಗಳು ಒಂದು ಕ್ರಮದಲ್ಲಿ ಅಲ್ಲಿ ಕುಳಿತುಕೊಂಡು, ಒಬ್ಬರ ಕಡೆ ಒಬ್ಬರು ನೋಡದೆ, ಒಬ್ಬರ ಕೂಡ ಒಬ್ಬರು ಮಾತನಾಡದೆ, ಮೌನವಾಗಿ ಯಾವುದಾದರೊಂದು

ದೇವರ ಸ್ತೋತ್ರವನ್ನು ಮನಸ್ಸಿನಲ್ಲಿಯೇ ಧ್ಯಾನ ಮಾಡತಕ್ಕದ್ದು. ಇಷ್ಟವಿದ್ದವರು ಈ ಕೆಳಗೆ ಕಂಡ ಸ್ತೋತ್ರವನ್ನು ಕಂಠ ಪಾಠ ಮಾಡಿ ಕೊಂಡಿದ್ದು ಧ್ಯಾನಕ್ಕೆ ಉಪಯೋಗಿಸಬಹುದು:—

ಸ್ತೋತ್ರ ‖ ರಾಮಹರೇ ಕೃಷ್ಣಹರೇ ‖ ತವನಾಮ ‖ ವದಾಮಿ ಸದಾ ನೃಹರೇ | ನಾಮಸ್ಮರಣಾದನ್ಯೋಪಾಯಂ ನಹಿಪಶ್ಯಾಮೋಭವ ತರಣೇ ‖

(೧೭) ಹೀಗೆ ಒಂದು ಗುಂಪಿನವರು ನಿಯಮಿತಕಾಲದವರಿಗೆ ಧ್ಯಾನಮಾಡುತ್ತಿದ್ದು, ಮತ್ತೊಂದು ಗುಂಪು ಬಂದ ಕೂಡಲೇ ಅವರಿಗೆ ಸ್ಥಳವನ್ನು ಬಿಟ್ಟು ಮೌನವಾಗಿ ಆಚೆಗೆ ಹೊರಟು, ಸತ್ಯಾಗ್ರಹದ ಕಛೇರಿಯಲ್ಲಿ ತಮ್ಮ ಮುಂದಿನ ಕರ್ತವ್ಯವನ್ನು ತಿಳಿಯತಕ್ಕದ್ದು.

(೧೮) ಈ ಕ್ರಮದಲ್ಲಿ ಸತ್ಯಾಗ್ರಹವು ಹಗಲೂ ರಾತ್ರಿ ಸಹ ವಿರಾಮ ವಿಲ್ಲದೆ ನಡೆಯತಕ್ಕದ್ದು. ಹಾಗೂ ಆಜ್ಯಜ್ಯೋತಿಯು ನಂದಿಹೋಗದಂತೆ ಕಾಪಾಡಬೇಕು. ಒಂದು ಗುಂಪು ಸತ್ಯಾಗ್ರಹಕ್ಕೆ ಕೂಡುವಾಗಲೂ, ಎದ್ದು ಹೋಗುವಾಗಲೂ, ಈ ಜ್ಯೋತಿಯ ಮುಂದೆ ಸಾಷ್ಟಾಂಗ ಪ್ರಣಾಮವನ್ನು ಮಾಡತಕ್ಕದ್ದು.

(೧೯) ಹೀಗೆ ಸಂಕಲ್ಪಮಾಡಿದ್ದ ದಿನಗಳು ಮುಗಿದಮೇಲೆ, ಜ್ಯೋತಿಯೊಡನೆ ಮೌನವಾಗಿ ಪುರ ಪ್ರದಕ್ಷಿಣೆ ಮಾಡಿ ದೇವಸ್ಥಾನವನ್ನು ಸೇರತಕ್ಕದ್ದು. ಅಲ್ಲಿ ಜ್ಯೋತಿಯನ್ನು ಸಮರ್ಪಿಸಿ ದೇವರ ಮಂಗಳಾರತಿ ಆದ ಮೇಲೆ ಈ ಕೆಳಗೆ ಕಂಡಂತೆ ನಮ್ಮ ಶ್ರೀಮನ್ಮಹಾರಾಜರವರ ಸನ್ನಿಧಾನಕ್ಕೆ ಒಂದು ಬಿನ್ನವತ್ತಳೆಯನ್ನು ಬರೆದು ಆಗ್ಗೆ ಅಲ್ಲಿರತಕ್ಕವರು ರುಜು ಮಾಡತಕ್ಕದ್ದು. ಅನಂತರ ಸತ್ಯಾಗ್ರಹ ವ್ರತಾಚರಣೆಗೆ ಯಾವ ಬಗೆಯಲ್ಲಾದರೂ ಸರಿಯೆ ಸಂಬಂಧಪಟ್ಟವರೆಲ್ಲರ ರುಜುವನ್ನು ಪಡೆದು ಮಹಾ ಸನ್ನಿಧಾನಕ್ಕೆ ಕಳುಹಿಸತಕ್ಕದ್ದು. ಬಿನ್ನವತ್ತಳೆಯ ಸ್ವರೂಪ:—

ನಮ್ಮನ್ನಾಳುವ ಮಹಾ ಸ್ವಾಮಿಯವರ ದಿವ್ಯ ಸನ್ನಿಧಿಯಲ್ಲಿ ತಮ್ಮ ಸಭ್ಯ ಪ್ರಜೆಗಳಾದ..............................ವಾಸಸ್ಥ

ಅತ್ಯಂತ ವಿನಯದಿಂದ ಅರ್ಪಿಸಿದ ಬಿನ್ನವತ್ತಳೆ ಮಹಾಸ್ವಾಮಿ!

[ನಾವು ಇಂತಹ ಕಾರಣಗಳಿಗಾಗಿ ಸತ್ಯಾಗ್ರಹವನ್ನು ಆಚರಿಸ ಬೇಕಾಯಿತು. ಕಾರಣಗಳನ್ನು ನಿಮಗೆ ತೋರಿದ ಮಟ್ಟಿಗೆ ವಿಶದ ವಾಗಿ ಹೇಳಿ]

ನಮ್ಮ ರಾಜ್ಯದಲ್ಲಿ ನ್ಯಾಯ ಧರ್ಮಗಳು ನೆಲೆಗೊಳ್ಳಲು ನಾವು ಆಚರಿಸಿದ ಸತ್ಯಾಗ್ರಹ ವ್ರತವು ಸಂಪೂರ್ಣವಾದ ಈ ಸುದಿನ ದಲ್ಲಿ—"ನಾವಿಷ್ಣುಃ ಪೃಥಿವೀಪತಿಃ"—ಎಂಬ ಮಹರ್ಷಿಗಳ ಸದುಪದೇಶವನ್ನು ಸ್ಮರಿಸುತ್ತಾ, ಮಹಾ ಸ್ವಾಮಿಯವರ ಮೂಲಕ ನ್ಯಾಯ ದೇವತೆಯು ನಮಗೆ ಒಲಿಯಲೆಂದೂ, ಸ್ವಾಮಿಯವರ ದಿವ್ಯ ಕೀರ್ತಿಯು ದಿಗಂತಗಳಲ್ಲಿ ಬೆಳಗಲೆಂದೂ, ಅತ್ಯಂತ ನಮ್ರತೆಯಿಂದ ಭಗವಂತನನ್ನು ಬೇಡುತ್ತೇವೆ.

ತಾ|| (ರುಜುಗಳು)

(೨೦) ಸತ್ಯಾಗ್ರಹ ಮೂಲತತ್ವಗಳಿಗೆ ವಿರೋಧವಿಲ್ಲದಂತೆ ಆಯಾ ಸನ್ನಿವೇಶಗಳಿಗೆ ಅನುಕೂಲವಾದ ಉಪನಿಯಮಗಳನ್ನು ಆಯಾ ಸಭೆಯವರು ಮಾಡಿಕೊಳ್ಳ ಬಹುದು. ಎಂತಹ ಸಂದರ್ಭ ದಲ್ಲೀ ಆಗಲಿ ಅಹಿಂಸಾ ವೃತ್ತಿಯನ್ನು ಮಾತ್ರ ಖಂಡಿತವಾಗಿ ಕಾಪಾಡಿಕೊಳ್ಳಬೇಕು.

# ಎರಡನೆಯ ಪರಿಶಿಷ್ಟ

## ಹಳ್ಳಿಗಳ ಸತ್ಯಾಗ್ರಹ

(೧) ಹಳ್ಳಿಯವರು ಗ್ರಾಮದಲ್ಲಿನ ಬೈಲಾಗಿರುವ ಪ್ರದೇಶ ದಲ್ಲಿ ಸಗಣಿಯಿಂದ ಶುದ್ಧಿಮಾಡಿ ಅಲ್ಲೊಂದು ದೊಡ್ಡ ಹಣತೆ ಯಲ್ಲಿ ಜ್ಯೋತಿಯನ್ನು ಬೆಳಗಿಸತಕ್ಕದ್ದು. ತಮ್ಮಲ್ಲಿ ಕೆಲವು ತಂಡ ಗಳನ್ನು ಏರ್ಪಡಿಸಿಕೊಂಡು, ಒಂದು ತಂಡದವರು ಇಷ್ಟು ಹೊತ್ತಿಂ ದುಗೊತ್ತು ಮಾಡಿಕೊಂಡು, ಆ ಜ್ಯೋತಿಯ ಮುಂದೆ ಯಾವುದಾ

ದರೊಂದು ದೇವರ ನಾಮವನ್ನು ಮನಸ್ಸಿನಲ್ಲಿಯೇ ಮೌನವಾಗಿ ಹೇಳುತ್ತಾ, ಹೀಗೆ ಒಂದು ಹಗಲು ಒಂದು ರಾತ್ರಿ ಮಟ್ಟಿಗೆ ಸತ್ಯಾಗ್ರಹವನ್ನು ಆಚರಿಸತಕ್ಕದ್ದು.

(೨) ಮಾರನೆಯ ದಿನ ಜ್ಯೋತಿಯನ್ನು ದೇವಸ್ಥಾನದಲ್ಲಿರಿಸಿ ಭಜನೆ ಸಮೇತ ಕಡೇ ಪಕ್ಷ ಮೂರು ಗ್ರಾಮಗಳಿಗಾದರೂ ಗ್ರಾಮ ಯಾತ್ರೆಮಾಡಿ ಊರಿಗೆ ಬಂದು, ಊರಿನ ದೇವರಿಗೆ ಕಾಯಿ ಹಣ್ಣು ಕೊಟ್ಟು, ವನಭೋಜನ (ಪರುವು) ಮಾಡಿ ಊರುಮುಂದೆ ತೋರಣ ಕಟ್ಟಬೇಕು.

(೩) ತೋರಣ ಕಟ್ಟುವವರೆಗೂ ಜ್ಯೋತಿಯು ಆರಿ ಹೋಗದಂತೆ ನೋಡಿಕೊಳ್ಳಬೇಕು.

(೪) ಪರುವುಗಾಗಿ ಪ್ರಾಣಿಹಿಂಸೆಯನ್ನು ಮಾಡಕೂಡದು. ಹಾಗೂ ಮೊದಲೇ ಸತ್ಯಾಗ್ರಹವನ್ನು ಆಚರಿಸಿ ತೋರಣ ಕಟ್ಟಿರುವ ಊರಿಗೆ ಗ್ರಾಮ ಯಾತ್ರೆ ಹೋಗಕೂಡದು

(೫) ದೇವರ ಧ್ಯಾನವನ್ನು ಮಾಡುವಾಗ ನಮ್ಮ ದೇಶದಲ್ಲಿ ಸತ್ಯ ಧರ್ಮಗಳು ನೆಲಗೊಳ್ಳಲೆಂದೂ, ಆಳುವ ಮಹಾ ಸ್ವಾಮಿಯವರಿಗೆ ಶ್ರೇಯಸ್ಸುಂಟಾಗಲೆಂದೂ ದೇವರನ್ನು ಮನಸ್ಸಿನಲ್ಲಿ ಬೇಡಬೇಕು.

(೬) ಒಂದೇ ಹಳ್ಳಿಯವರಾಗಲಿ, ಅಥವಾ ಮೂರು ನಾಲ್ಕು ಗ್ರಾಮಗಳವರು ಒಟ್ಟಾಗಿಯಾಗಲಿ, ಬಿನ್ನವತ್ತಳೆಯನ್ನು ಬರೆದು ಶ್ರೀ ಮನ್ಮಹಾರಾಜರವರ ದಿವ್ಯ ಸನ್ನಿಧಾನಕ್ಕೆ ರವಾನಿಸಬೇಕು.



# ಹಿನ್ನುಡಿ



ನಾಡಿನ ಚಿತ್ತವು ಕಾರಣಾಂತರಗಳಿಂದ ಕಳವಳಗೊಂಡಾಗ ಅದಕ್ಕೊಂದು ಸರಿಯಾದ ಗುರಿಯನ್ನು ತೋರದಿದ್ದರೆ ದಾರಿತಪ್ಪಿ ನಡೆಯುವುದುಂಟು. ಆದುದರಿಂದ ಇಹ ಪರಗಳೆರಡಕ್ಕೂ ಸಾಧಕವಾದ ಸತ್ಯಾಗ್ರಹದ ಅಂತಃ ಸ್ವರೂಪವನ್ನೂ ಹಾಗೂ ಆದರ ಸಾಧನಾ ಮಾರ್ಗವನ್ನೂ, ನನಗೆ ತೋರಿದ ಮಟ್ಟಿಗೆ ಮಂದಿಯ ಮುಂದೆ ಇಟ್ಟಿರುತ್ತೇನೆ. ಅದರ ಸಂಪೂರ್ಣ ಸ್ವರೂಪವನ್ನು ನಾನು ಗ್ರಹಿಸಿರುವೆನೆಂದು ಎಂದಿಗೂ ಹೇಳಲಾರೆ. ನನಗಿಂತಲೂ ಶಕ್ತರಾದವರು ಮುಂದೆ ಬರಲೆಂಬುದೇ ನನ್ನ ಆಶಯ. ನಾಡಿನ ಹಿತದ ದೃಷ್ಟಿಯಿಂದ ಇದು ಎಂದಾದರೂ ಕಾರ್ಯದಲ್ಲಿ ರೂಪುಗೊಳ್ಳಬೇಕಾದರೆ ನಾವು ಇಂದಿನಿಂದಲೇ ಇದರ ವಿಚಾರಕ್ಕೆ ಕೈಹಾಕಿರುವುದು ಉತ್ತಮ. ಆದುದರಿಂದ ಈ ನನ್ನ ನಾಲ್ಕು ಮಾತುಗಳನ್ನು ಸಿದ್ಧಾಂತವೆಂದೆಣಿಸದೆ ವಿಚಾರ ಬೀಜವನ್ನಾಗಿ ಗ್ರಹಿಸಿ ಇಂದಿನಿಂದಲೇ ಇದಕ್ಕಷ್ಟು ನೀರೆರೆಯ ಬೇಕೆಂದು ಬೇಡುತ್ತೇನೆ.

**ಪ್ರಕಾಶಕರಿಗೆ ನನ್ನ ಅನಂತವಂದನೆಗಳು.**

**ಅ. ಸರ್ವಾಭಟ್ಟ**

# ಚಮ್ಮಾರ ಚನ್ನಪ್ಪ

# ಚಮ್ಮಾರ ಚನ್ನಪ್ಪ.

ಸಿದ್ದಾಪುರ ಎಂಬ ಒಂದು ಊರು. ಅಲ್ಲಿ ಚನ್ನಪ್ಪನ ಗುರುತಿಲ್ಲದವರೇ ಇಲ್ಲ. ಜೋಡು ಹಾಕಿಕೊಳ್ಳುವವರೆಲ್ಲರಿಗೂ ಇವನ ಜೋಡೆ ಆಗಬೇಕು. ಬೇರೆ ಜೋಡೆಂದರೆ ಸರಿಯೇ ಹೋಗುವುದಿಲ್ಲ. ಅದರ ಕಾರಣ ಚನ್ನಪ್ಪನು ಅಂತಹ ಮನುಷ್ಯ. ಮೋಸ ಮಾಡುವುದಕ್ಕೆ ಅವನಿಗೆ ಬರದು. ಕಣ್ಣು ಮುಚ್ಚುವ ಕೆಲಸ ಹತ್ತಿರವಿಲ್ಲ. ಸುಳ್ಳು ಹೇಳುವದನ್ನು ಆವನು ಕಂಡೇ ಅರಿಯನು. ಇಂಥ ದಿವಸ ಇಷ್ಟು ಹೊತ್ತೆಂದರೆ ಅಂಥ ದಿವಸ ಅಷ್ಟು ಹೊತ್ತಿಗೆ ಕೆಲಸ ಸಿದ್ಧವಾಗಿರಬೇಕು. ಅದಕ್ಕೇನೆ ಚಮ್ಮಾರ ಚನ್ನಪ್ಪನ ಜೋಡಿಗೋಸ್ಕರ ಅಷ್ಟೊಂದು ಗಿರಾಕಿ.

ಊರ ಹುಡುಗರೆಲ್ಲರೂ ಚನ್ನಪ್ಪನನ್ನು ಚೆನ್ನಾಗಿ ಬಲ್ಲರು. ನೇರಲಹಣ್ಣಿನ ಕಾಲ ಬಂತೆಂದರೆ, ಊರ ಹೊರಗೆ, ಇವನ ಮನೆ ಮುಂದೆ, ಎಲ್ಲರೂ ಹಾಜರು. ಪೇರಲಹಣ್ಣು ಬಿಟ್ಟಿತೆಂದರೆ ಇವರ ತೋಟವೆಲ್ಲಾ ಸೂರೆ, ಬಣ್ಣ ಬಣ್ಣದ ಹೂಗಳೇನಾದರೂ ಇವನ ಮನೆ ಮುಂದೆ ತಲೆಯೆತ್ತಿತೆಂದರೆ ಅವಕ್ಕೆ ಉಳಿಗಾಲವೇ ಇಲ್ಲ. ಏನೇ ಆಗಲಿ, ಏನೇ ಮಾಡಲಿ ಮಕ್ಕಳೆಂದು ಎಲ್ಲಕ್ಕೂ ಮಾಫೀ ಅಂತು ಚಮ್ಮಾರ ಚನ್ನಪ್ಪನ ಹೆಸರು ಚಿಳ್ಳೆ, ಪಿಳ್ಳೆ, ಮಕ್ಕಳು, ಮರಿ, ಮುದುಕರು, ತರುಣರು, ದೊಡ್ಡವರು, ಸಣ್ಣವರು ಎಲ್ಲರಿಗೂ ಗೊತ್ತು.

ಚನ್ನಪ್ಪನ ಹೆಂಡತಿ ಸತ್ತು ಎಷ್ಟೋ ದಿನಗಳಾಗಿದ್ದವು. ಉಳಿದಿದ್ದ ಒಂದು ಮಗುವನ್ನು ತನ್ನ ಪ್ರಾಣದಂತೆ ಸಾಕಿದನು. ಅದೂ ದೊಡ್ಡದಾಗಿ ಕೈಗೆ ಬರುವ ಹೊತ್ತಿಗೆ ಮೃತ್ಯುವಿನ ಪಾಲಾಯಿತು. ಚನ್ನಪ್ಪನ ಸಂಕಟವನ್ನು, ಎಷ್ಟು ಹೇಳಿದರೂ ತೀರದು. "ದೇವರೇ. ನಿನ್ನ ಚಿತ್ತ. ನಾನೇನು ಮಾಡೇನು, ಪಾಪಿ ಮನುಷ್ಯ!" ಎಂದುಕೊಂಡು ಸುಮ್ಮನಾದನು.

ಅಂದಿನಿಂದ ಮನೆಗೆಲ್ಲಾ ಒಬ್ಬನೇ ಒಬ್ಬ, ಅಲ್ಲದೆ ಬಡವ. ದೇವರು ಕೊಟ್ಟದ್ದನ್ನು ಬೇಯಿಸುವದು ;

ತಿನ್ನುವದು ; ಜೋಡು ಹೊಲಿಯುತ್ತಾ ಕೂರುವದು, ಇಷ್ಟೇ ಕೆಲಸ. ಹೀಗೆ ಕೆಲವು ದಿನ ತಳ್ಳಿದನು. ಒಂದು ರಾತ್ರೆ ನಿದ್ದೆ ಬರದೆ, ತನ್ನ ಮಗುವನ್ನು ನೆನೆದು ಕಣ್ಣೀರು ಹಾಕುತ್ತಾ ಇದ್ದನು. ಇದ್ದಕ್ಕಿದ್ದ ಹಾಗೆ ಜಂಪು ಹತ್ತಿತು. ಕನಸಿನಲ್ಲಿ ತನ್ನ ಮನೆ ದೇವರು ಎದುರಿಗೆ ನಿಂತಹಾಗಾಯಿತು. 'ಚನ್ನಪ್ಪ, ಸಂಕಟಪಡಬೇಡ, ಅತ್ತರೆ ಏನೂ ಆಗುವುದಿಲ್ಲ. ನಿನ್ನಂಥವರು ಹೀಗೆಲ್ಲಾ ಮಾಡಬಾರದು. ನಾಳೆ ನಾನು ನಿನ್ನ ಮನೆಗೆ ಬರುವೆನು. ನಿನ್ನ ದುಃಖವೆಲ್ಲಾ ಹೋಗುವದು' ಎಂದು ಹೇಳಿದಹಾಗಾಯಿತು.

ಮಾರನೆ ಬೆಳಿಗ್ಗೆ ಚನ್ನಪ್ಪನಿಗೆ ಬಹು ಆನಂದ. ಮನೆಯೆಲ್ಲಾ ಗುಡಿಸಿ ಸಾರಿಸಿ ಚೊಕ್ಕಟ ಮಾಡಿದನು. ಬಣ್ಣ ಬಣ್ಣದ ಹೂಗಳನ್ನು ತಂದು ಅಲಂಕಾರ ಮಾಡಿದನು. ಹಣ್ಣು ಹಂಪಲು ತಂದಿಟ್ಟುಕೊಂಡನು. ರುಚಿ ರುಚಿಯಾದ ಅಡಿಗೆಯನ್ನು ಮಾಡಿಟ್ಟನು. ಜೋಡನ್ನು ಹೊಲಿಯುತ್ತಾ ಜಗಲಿಯ ಮೇಲೆ ಕೂತನು. ರಸ್ತೆಯ ಕಡೆ ಎಷ್ಟೋಸಾರಿ ತಲೆ ಎತ್ತೆತ್ತಿ ನೋಡಿದನು. ಎಷ್ಟು ದೂರ ನಿಟ್ಟಿಸಿನೋಡಿದರೂ, ತನ್ನ ಮನೆ ದೇವರ ಸುಳಿವೇ ಇಲ್ಲ. ಬಿಸಿಲೇರುತ್ತಾ ಬಂದಿತು, ಆದರೂ

ಏನೂ ಇಲ್ಲ. ಇದೇನಾಶ್ಚರ್ಯ. ಕನಸು ಸುಳ್ಳಾಗಿರಬಹುದೇ !

ಹೀಗೆಲ್ಲಾ ಚನ್ನಪ್ಪನು ಯೋಚಿಸುವದಕ್ಕೂ, ಬೀದಿ ಗುಡಿಸುವ ಮಾರಣ್ಣನು ಬಂದು ಇವನ ಬೇಲಿಯನ್ನು ಒರಗಿ ಕೂರುವುದಕ್ಕೂ ಸರಿಹೋಯಿತು. ಮಾರಣ್ಣ ಮುದುಕ, ಕೂದಲು ಬೆಳ್ಳಗಾಗಿದೆ. ಬೆಳಗಿನಿಂದ ಗುಡಿಸಿ ಗುಡಿಸಿ ಸೋತುಹೋಗಿದ್ದಾನೆ. ತನ್ನ ಗುಡಿಸಲ ಕಡೆ ಹೊರಟನು. ಏನೂ ಸಾಗದೆ ಇಲ್ಲೇ ಕುಳಿತು ಬಿಟ್ಟನು. ಮೇಲೆ ನೋಡಿದರೆ ಬಿಸಿಲ ಝಳ. ಕೆಳಗೆಲ್ಲಾ ಕಾದಕಲ್ಲು. ಒರಗುವುದಕ್ಕೆ ಬೇಲಿ. ಏನು ಸುಖವಾಗಿರಬೇಕೋ ಮಾರಣ್ಣಗೆ ! ಆದರೆ ಮಾಡುವದೇನು ? ಇನ್ನೆಲ್ಲಿಗೆ ಹೋಗಬೇಕು ? ಹತ್ತಿರ ಕರೆಯುವರ್‍ಯಾರು, ಬೀದಿ ಗುಡಿಸುವವನನ್ನು ? ಚನ್ನಪ್ಪನು ತಿರುಗಿ ನೋಡಿದನು. ಅವನಿಗೆ ಸಹಿಸಲಾಗದೆ ಹೋಯಿತು. ಎದ್ದು ಬಂದು ಮೆತ್ತಗೆ ಮಾರಣ್ಣನನ್ನು ಕರೆದುಕೊಂಡು ಹೋಗಿ ಕೂರಿಸಿದನು. ಕುಡಿಯುವುದಕ್ಕೆ ತಣ್ಣಗೆ ಪಾನಕ ಮಾಡಿಕೊಟ್ಟು, ಸಿದ್ಧವಾಗಿದ್ದ ಅಡಿಗೆಯಲ್ಲಿ ಒಂದಿಷ್ಟನ್ನು ಕೊಟ್ಟನು. ತಿಂದು ದಣಿವಾರಿಸಿಕೊಂಡು, 'ನಿನ್ನ ಹೊಟ್ಟೆ ತಣ್ಣಗಿರಲಪ್ಪ—ದಿಕ್ಕಿ

ಲ್ಲದವನಿಗೆ ತಿನ್ನುವುದಕ್ಕೆ ಇಷ್ಟೊಂದು ಉಪಚಾರ ಮಾಡಿದೆ,' ಎಂದು ಹರಸಿ ಮಾರಣ್ಣನು ಹೊರಟುಹೋದನು.

ಚನ್ನಪ್ಪನಿಗೆ ಇನ್ನೂ ಊಟವಿಲ್ಲ. ಮನೆ ದೇವರೇ ಮನೆಗೆ ಬರುವಾಗ ಊಟಮಾಡಿ ಕೂರುವದಕ್ಕಾದೀತೆ? ಜಗುಲಿಯ ಮೇಲೆ ಮತ್ತೆ ನೋಡುತ್ತಾ ಕೂತನು. ಸೂರ್ಯನು ಪಶ್ಚಿಮಕ್ಕೆ ತಿರುಗಿರಬಹುದು. ಆ ಹೊತ್ತಿಗೆ ಸರಿಯಾಗಿ, ಒಬ್ಬ ಬಡ ಹೆಂಗಸು ಬಂದು, ಎದುರಿನ ನೇರಲ ಮರದ ಬುಡದಲ್ಲಿ ಕೂತಳು. ಅವಳ ಕೈಯಲ್ಲಿ ಒಂದು ಮಗು. ಮಗು ಹಸಿವಿನಿಂದ ಅಳುತ್ತಾ ಇದೆ. ತನಗೇ ಇಲ್ಲದವಳು ಅದಕ್ಕೇನು ಕೊಟ್ಟಾಳು? ಏನೇನು ಮಾಡಿದರೂ ಅಳು ನಿಲ್ಲುವದಿಲ್ಲ. ಒಂದೂ ತೋಚದೆ ತಲೆಯಮೇಲೆ ಕೈ ಹೊತ್ತು ಕೂತುಬಿಟ್ಟಳು.

ಚನ್ನಪ್ಪನಿಗೆ ತನ್ನ ಮಗುವಿನ ಜ್ಞಾಪಕ ಬಂತು. ಕಣ್ಣೀರು ಹಾಕಿಕೊಂಡು ಹೋಗಿ ಇವರನ್ನು ಒಳಕ್ಕೆ ಕರೆತಂದನು. ದೇವರಿಗೆಂದು ತಂದಿದ್ದ ಹಣ್ಣನ್ನು ಮಗುವಿಗೆ ಕೊಟ್ಟನು. ಮಾಡಿಟ್ಟ ಅಡಿಗೆಯನ್ನು ಹೆಂಗಸಿಗೆ ಹೊಟ್ಟೆ ತುಂಬಾ ಬಡಿಸಿದನು. ಉಂಡು ಆನಂದವಾಗಿ, ಮಗುವನ್ನೆತ್ತಿಕೊಂಡು, 'ಇಂತಹ ಜನರೂ ಉಂಟೆ, ಈ

ಭೂಮಿಯ ಮೇಲೆ' ಎಂದು ಹೇಳಿಕೊಳ್ಳುತ್ತಾ, ಆ ಬಡ
ವಿಯು ಹೊರಟು ಹೋದಳು.

ಸಾಯಂಕಾಲವಾದರೂ ದೇವರು ಬರಲಿಲ್ಲ.
'ಎಷ್ಟಾದರೂ ಕನಸಲ್ಲವೆ?' ಎಂದುಕೊಂಡನು. ಆದರೂ
ಮಲಗುವ ತನಕ ನೋಡೋಣವೆಂದು ಹಾಗೆಯೇ ಕೂ
ತನು. ಹಸಿದು ಹಸಿದು, ನಿದ್ದೆ ಹತ್ತಿತು. ಕನಸಿನಲ್ಲಿ
ದೇವರು ಎದುರಿಗೆ ನಿಂತನು. 'ನೀನು ಮಾಡಿದ ಉಪ
ಚಾರದಿಂದ ತೃಪ್ತನಾದೆನು' ಎಂದಹಾಗಾಯಿತು. 'ಈ
ಹೊತ್ತೆಲ್ಲಾ ಕಾದರೂ ನೀನು ಬರಲೇ ಇಲ್ಲ' ಎಂದು
ಚನ್ನಪ್ಪನು ಕನಸಿನಲ್ಲಿಯೇ ಕೇಳಿದನು. 'ಆ ಮಗುವೂ
ಬಡಹೆಂಗಸೂ, ಕಸ ಗುಡಿಸುವ ಮುದುಕನೂ ಯಾರೆಂ
ದು ತಿಳಿದೆ? ನೀನು ಯಾವದೊಂದು ಕೀಳು ಪ್ರಾಣಿಗೆ
ಉಪಕಾರ ಮಾಡಿದರೂ, ನನಗೇ ತಗಲುತ್ತದೆ ಎಂಬುದು
ನೆನಪಿರಲಿ!' ಎಂದಂತಾಯಿತು. ಚನ್ನಪ್ಪನು ಕಣ್ಣು
ಬಿಟ್ಟು ನೋಡಿದನು. ಕಗ್ಗತ್ತಲೆ ಮಾತ್ರ ಇತ್ತು.

ಚಮ್ಮಾರ ಚನ್ನಪ್ಪನ ಈ ಕಥೆಯು ಬಹು ಪವಿತ್ರ
ವಾದದ್ದು. ಇದನ್ನು ಓದಿದವರಿಗೂ ಹೇಳಿದವರಿಗೂ
ಕೇಳಿದವರಿಗೂ ದೇವರು ಸಮಸ್ತ ಸುಖಗಳನ್ನೂ ಕೊಡಲಿ.

—ಅನಂತಶರ್ಮ

# ಮುನ್ನುಡಿ

---

ಭಾರತ ವರ್ಷದ ಕವಿಸಮ್ರಾಟನಾದ ಕಾಳಿ ದಾಸನ ಅತ್ಯುತ್ತಮ ಕೃತಿಯಾದ ಈ ವಿಕ್ರಮೋ ರ್ವಶೀಯನ್ನು ಕವಿತಿಲಕ ಶ್ರೀ ಸೋಸಲೆ ಅಯ್ಯಾ ಶಾಸ್ತ್ರಿಗಳವರು ಈ ವೇಳೆಗಾಗಲೇ ನಾಟಕರೂಪ ವಾಗಿ ಭಾಷಾಂತರಿಸಿದಾರೆ. ಕುಮಾರ ಕಾಳಿ ದಾಸನೆಂದು ಖ್ಯಾತಿಪಡೆದ ಶ್ರೀ ಬಸವಪ್ಪಶಾಸ್ತ್ರಿ ಗಳೂ ಎರಡು ಅಂಕಗಳನ್ನು ಕನ್ನಡದಲ್ಲಿ ಬರೆ ದಿದಾರೆಯಂತೆ. ಆದರೂ ನಾನು ಈ ವಿಚಿತ್ರ ರೀತಿ ಯಲ್ಲಿಇದನ್ನು ಬರೆಯುವುದಕ್ಕೆ ಒಂದು ವಿಶೇಷ ಕಾರಣವುಂಟು.

ಇದರಲ್ಲಿ ಸಾಧ್ಯವಾದ ಮಟ್ಟಿಗೂ ಕಾಳಿ ದಾಸನ ಮಾತುಗಳೇ ಉಪಯುಕ್ತಗಳಾಗಿವೆ. ಆಗಿರುವ ವ್ಯತ್ಯಾಸಗಳಲ್ಲಿ ಮೊದಲನೆಯದು, ಭಾವ ಪ್ರಬೋಧಕವಾಗಿರುವಂತೆ ನಡುನಡುವೆ ಎರಡೆರಡು ಮಾತು ಸೇರಿಸಿರುವುದು. ಹಾಗೆಯೇ ಅಲ್ಲಲ್ಲಿ ನಾಟಕಕ್ಕೋಸ್ಕರ ಕವಿಯು ಬೆಳೆಸಿರುವ ಸಂಭಾಷಣೆಗಳನ್ನು ಕಥೆಗೆ ಅನುಕೂಲವಾಗಿರು

ವಂತೆ ಕತ್ತರಿಸಿಕೊಂಡಿರುವುದು. ಹೀಗೆ ಮಾಡಿ ರುವುದಕ್ಕೆ, ಕಥೆಗೂ ನಾಟಕಕ್ಕೂ ಇರುವ ವ್ಯತ್ಯಾಸವು ವಿಚಾರಿಯಾದವನಿಗೆ ಗೊತ್ತಾಗ ಬೇಕೆಂಬುದು ಉದ್ದೇಶವು. ಕಾಳಿದಾಸನ ಅನನ್ಯ ಲಭ್ಯವಾದ ಕಾವ್ಯಸೃಷ್ಟಿ ಕಲಾನೈಪುಣ್ಯವನ್ನೂ, ಸರ್ವ ಸುಲಭವಾದರೂ, ಭಾವಪುಷ್ಟಿಯಿಂದ ಬಲಿತಿರುವ ರೀತಿಯನ್ನೂ, ಕನ್ನಡಿಗರಿಗೆ ತೋರಿಸಿ, ಅವರಿಂದ ಸಂಸ್ಕೃತದ ಕಾವ್ಯವಿನ್ನೆಷ್ಟು ಸೊಗ ಸಾಗಿದೆಯೊ ಎನ್ನಿಸಿಬಿಟ್ಟರೆ, ಈ ಕಾರ್ಯದ ಉದ್ದೇಶವು ನೆರವೇರಿದಂತಾಯಿತು.

ಕಾಳಿದಾಸನ ನಾಟಕಗಳಲ್ಲಿ ಅಗ್ರಸ್ಥಾನವು ಶಾಕುಂತಲಕ್ಕೆಂಬು ಇದುವರೆಗೂ ನಿರ್ವಿವಾದ ವಾಗಿ ಅಂಗೀಕೃತವಾಗಿದೆ. ಆದರೆ ಕೂಲಂಕಷ ವಾಗಿ ವಿಚಾರಿಸಿ ನೋಡಿದರೆ ಅಗ್ರಸ್ಥಾನವನ್ನು ವಿಕ್ರಮೋರ್ವಶೀಯಕ್ಕೇ ಕೊಡಬೇಕು ಎನ್ನಿಸು ತ್ತದೆ. ವಸ್ತುವಿನ್ಯಾಸ, ಪಾತ್ರರಚನ, ಭಾವ ಪ್ರದರ್ಶನ, ಅಭಿನಯ ಸೌಲಭ್ಯ, ಈ ದೃಷ್ಟಿಗ ಳಿಂದ ವಿಚಾರಮಾಡಿದರೆ, ಈ ಅಭಿಪ್ರಾಯವಾ ದರೂ ಮಾನ್ಯವಾಗುವುದೆಂದೇ ನನ್ನ ನಂಬಿಕೆ.

ಇಂತಹ ಉತ್ತಮ ಸಾರಸ್ವತ ಸಂಪದ್ಭವನ ಶಿಖರಕ್ಕೆ ಇದುವರೆಗೂ ಕನ್ನಡದಲ್ಲಿ ಯಾವುದೂ

ವ್ಯಾಖ್ಯಾನಗಳು ಆಗಿಲ್ಲವೆಂಬುದೆಂದು ದೊಡ್ಡ ಕೊ ರತೆ. ಈ ಕುಂದನ್ನು ತಪ್ಪಿಸಲು ಸ್ವತಂತ್ರವಾದ, ಕಥಾಚರಿತ್ರತರಂಗೆ, ಕಲಾವಿಲಾಸ ತರಂಗೆ, ತಾರ ತಮ್ಯ ತರಂಗೆ, ವಿಚಾರ ತರಂಗೆ, ಎಂಬ ನಾಲ್ಕು ತರಂಗಗಳಿಂದ ಕೂಡಿದ ಒಂದು ದೊಡ್ಡ ಪ್ರಬಂಧ ವನ್ನು ಬರೆಯುಬೇಕೆಂದುಕೊಂಡಿರುವ ನನ್ನ ಸಂಕ ಲ್ಪವು ಈಡೇರುವುದು ಉದಾರಚಿತ್ತರಾದ ವಾಚಕ ರನ್ನೇ ಸೇರಿದೆ.

ಒಟ್ಟನಲ್ಲಿ ಈ ಕನ್ನಡದ ರೂಪು ಸಂಸ್ಕೃತ ಕಾವ್ಯಸೂರ್ಯನಿಗೆ ಹಿಡಿದ ಕನ್ನಡಿಯು. ಇದ ರಲ್ಲಿ ಮಾತೃಕೆಯಲ್ಲಿರುವ, ಸವಿಯೂ, ಸೊಬಗೊ ಸೊಗಸೂ ಇವೆಯೆಂದು ಕಯ್ಯೆತ್ತಿ ಹೇಳಲಾರೆನು. ಆದರೂ,''ಪ್ರಾಂಶುಲಭ್ಯೇ ಫಲೇ ಲೋಭಾದುದ್ಬಾ ಹುರಿವ ವಾಮನಃ'' ಎಂಬ ಗಾದೆಯಂತೆ, ನಾನೂ ಯತ್ನಿಸಿರುವೆನು. ನಿಶ್ಶಬ್ದವಾದ ಅರ್ಧರಾತ್ರಿಯ ಸಮಯದಲ್ಲಿ, ಏಕಾಂಗಿಯಾಗಿ ಕುಳಿತು, ವಿಕ್ರ ಮೋರ್ವಶೀಯುವನ್ನು ಓದಿಓದಿ ಕಣ್ಣೀರಿಟ್ಟು, ಆನಂದ ಸಾಗರದಲ್ಲಿ ಓಲಾಡಿದ ನನ್ನ ಸೌಭಾಗ್ಯ ವನ್ನು ನನ್ನ ಭಾಷಾ ಬಂಧುಗಳಿಗೂ ಕೊಡಬೇ ಕೆಂಬ ಆಶೆಯಿಂದ ಬರೆದ ಕಾವ್ಯವಿದು. ನನ್ನುಲ್ಲಿ ಪಗಡೆಯ ಹೂವನ್ನು ಒಣಗಿಸಿ, ಸರವಾಡಿಟ್ಟು ಕೊಂಡಿದ್ದು, ಆಗಾಗ ಬಿಸಿನೀರು ಚುಮುಕಿಸಿ,

ಆದರ ವಾಸನೆಯನ್ನನುಭವಿಸುವ ವಾಡಿಕೆಯುಂಟು. ಆದರಂತೆಯೇ ರಸಿಕರಾದವರು, ಅಭಿಮಾನದ ನೆಸುಬಿಸಿಯ ನೀರನ್ನು ತಳೆದು, ಕಾವ್ಯ ರಸದ ತನಿಗೆಂಪನ್ನು ಸೌಹಾರ್ದದಿಂದ ಅನುಭವಿಸಲು ಒಮ್ಮೆಯಾದರೂ ಈ ಗ್ರಂಥವು ಒದಗಲಿ ಎಂದು ಹಾರೈಸುವೆನು. ಇದನ್ನು ಪ್ರಕಟಿಸಿದ ಪರಮೋಪಕಾರ ಮಾಡಿರುವ ಶ್ರೀ ಕೃಷ್ಣ ಕಂಪೆನಿಯುವರಿಗೆ ಚಿರಕೃತಜ್ಞನಾಗಿರುವೆನು.

ಇತಿ ಲೇಖಕ

**ದೇವುಡು**

ಕಾಳಿದಾಸ ಮಹಾಕವಿ ವಿರಚಿತ

# ವಿಕ್ರಮೋರ್ವಶೀಯ



"ವೇದಾಂತಗಳಲ್ಲಿ ಸಮಸ್ತವಾದ ದಿಗಂತಗಳನ್ನೂ ತುಂಬಿರುವ ಏಕಪುರುಷನೆಂದು ಯಾವನನ್ನು ಹೇಳು ವರೋ; ಈಶ್ವರ ಶಬ್ದವು ಅನನ್ಯ ವಿಷಯಕವಾಗಿ ಯಾವನಲ್ಲಿ ಯಥಾರ್ಥವಾಗಿರುವುದೋ; ಮುಮುಕ್ಷು ಗಳು ಅಂತರಂಗದಲ್ಲಿ ಪ್ರಾಣಾಯಾಮಗಳಿಂದ ಯಾವ ನನ್ನು ಹುಡುಕುವರೋ; ದೃಢವಾದ ಭಕ್ತಿ, ಯೋಗ ಗಳಿಗೆ ಸುಲಭವಾಗಿ ದೊರೆಯುವಾ ಸ್ಥಾಣುವು— ನಿಮಗೆ ಶ್ರೇಯಸ್ಸನ್ನುಂಟು ಮಾಡಲಿ" ಎಂದು ಸೂತ್ರ ಧಾರನು ನಾಂದಿಗೆಯ್ದು, ಮಾರಿಷನನ್ನು ಕರೆದು "ಮಾರಿಷ! ಈ ಪರಿಷತ್ತು ಪೂರ್ವಿಕರಾದ ಕವಿಗಳ ರಸ ಪ್ರಬಂಧಗಳನ್ನು ನೋಡಿರುವುದು; ಈಗ ನಾನು ವಿಕ್ರಮೋರ್ವಶೀಯವೆಂಬ ಹೊಸ ನಾಟಕವನ್ನು ಆಡಿಸುವೆನು. ಆದುದರಿಂದ ಪಾತ್ರವರ್ಗವು ತಮ್ಮ

ತಮ್ಮ ಪಾಠಗಳಲ್ಲಿ ಜಾಗರೂಕರಾಗಿರತಕ್ಕುದೆಂದು ಹೇಳು.” ಎಂದು ಅವನನ್ನು ಕಳುಹಿಸಿ, ಮಾತ್ರೆ, ಆರ್ಯಮಿಶ್ರರನ್ನು ನಮಸ್ಕರಿಸಿ, ‘ತಮ್ಮ ಪ್ರೀತಿಗೆ ಪಾತ್ರರಾಗಿರುವ ನಮ್ಮಲ್ಲಿ ದಾಕ್ಷಿಣ್ಯದಿಂದಲಾದರೂ, ಕಥೆಯ ಅಥವಾ ನಾಯಕನ ದೊಡ್ಡಸ್ತಿಕೆಗಾದರೂ ಕಾಲಿದಾಸನ ಈ ಕೃತಿಯನ್ನು ಸಾವಧಾನದಿಂದ ಪರಾಂಬರಿಸಬೇಕು’ ಎಂದು ವಿಜ್ಞಾಪಿಸಿಕೊಳ್ಳುವನು; ಅಷ್ಟರಲ್ಲಿಯೇ, ಊರ್ವಶಿಯನ್ನು ಬಂದಿಯಾಗಿ ಹಿಡಿದೊಯ್ದುದಕ್ಕಾಗಿ ಮೊರೆಯಿಡುವ ಅಪ್ಸರಸಿಯರ ಆಕ್ರಂದನವು ಕೇಳಿಬರಲು, ನಾಟಕವು ಮೊದಲಾಯಿತೆಂದು ಹೊರಟುಹೋಗುವನು.

ಅನಂತರ “ಎಲೆ ಅಂಬರ ತಲದಲ್ಲಿ ಗತಿಯುಳ್ಳವರೂ ಸುರಪಕ್ಷಪಾತಿಗಳೂ ಆದವರೆ! ಬನ್ನಿ. ಸಹಾಯಕ್ಕೆ ಬನ್ನಿ” ಎಂದು ಅಪ್ಸರಸಿಯರು ಮೊರೆಯಿಡುವರು. ಸೂರ್ಯನ ಸೇವೆಗಾಗಿ ಹೋಗಿದ್ದ ಪುರೂರವನು ಹಿಂತಿರುಗಿ ಬರುತ್ತಾ ದಾರಿಯಲ್ಲಿ ಇದನ್ನು ಕೇಳಿ, ಬಂದು, ಅಭಯಪ್ರದಾನ ಮಾಡಿ, ಅವರ ಭೀತಿಕಾರಣವನ್ನು ಕೇಳಲು, ಅವರು “ಮಹಾರಾಜನು ಲಾಲಿಸಬೇಕು. ತಪಸ್ವಿಜನ ಭೀತನಾದ ಮಹೇಂದ್ರನ ಸುಕುಮಾರವಾದ ಆಯುಧವಾಗಿ, ರೂಪಗರ್ವಿತೆಯಾದ ಶ್ರೀದೇವಿಯನ್ನೂ ನಿರಾಕರಿಸುವಳಾಗಿ, ಸ್ವರ್ಗಕ್ಕೆ ಅಲಂಕಾರಪ್ರಾಯಳಾದ ನಮ್ಮ ಪ್ರಿಯಸಖಿ ಊರ್ವಶಿಯು ಕುಬೇರನರಮನೆಯಿಂದ ಹಿಂತಿರುಗುತ್ತಿರಲು, ಚಿತ್ರಲೇಖಾದ್ವಿತೀಯಳಾದ

ಆಕೆಯನ್ನು ಹಿರಣ್ಯಪುರನಿವಾಸಿಯಾದ ಕೇಶಿ ದಾನವನು ತಟ್ಟನೆ ಮೇಲೆ ಬಿದ್ದು ಬಲವಂತದಿಂದ ಹೊತ್ತುಕೊಂಡು ಈಶಾನ್ಯದ ಕಡೆಗೆ ಹೋದನು" ಎಂದು ವಿಜ್ಞಾಪಿಸಿಕೊಳ್ಳುವರು. ಆಗ ಆತನು, "ನೀವು ಭಯ ಬಿಡಿರ"ೆಂದು ಅವರನ್ನು ಸಂತೈಸಿ ಕೂಡಲೆ ಆಕೆಯನ್ನು ಬಿಡಿಸಿಕೊಂಡು ಬರಲು ಹೊರಟುಹೋಗುವನು.

ರಂಭಾದ್ಯಪ್ಸರಸೆಯರು ಹೇಮಕೂಟ ಶಿಖರದಲ್ಲಿ ನಿಂತು "ರಾಯನು ದುರ್ಜಯರಾದ ದಾನವರನ್ನು ಜಯಿಸಿ ಸಖಿಯನ್ನು ಕಾಪಾಡಬಲ್ಲನೆ? ಅಥವಾ ಒದಗುವ ದೇವಾಸುರ ಯುದ್ಧದಲ್ಲಿ ಇಂದ್ರನಿಗೂ ಸಹಾಯನಾಗಿ ಬರುವ ಆ ರಾಜರ್ಷಿಯು ಆಕೆಯನ್ನು ಬಿಡಿಸಲಾರನೆಂದರೇನು ?" ಎಂದು ಹಿಂದುಮುಂದು ನೋಡುತ್ತ ಕುಳಿತಿರುವಲ್ಲಿ, ಆತನು ಸಖೀಸಮೇತಳಾದ ಊರ್ವಶಿಯನ್ನು ಹಿಂದಕ್ಕೆ ಕರೆತರುತ್ತ ತನ್ನ ಸೋಮದತ್ತವೆಂಬ ಹರಿತಕೇತನದ ರಥದಲ್ಲಿ ಕಾಣಿಸಿಕೊಳ್ಳುವನು. ಆತನು ಬರುತ್ತ ದಾರಿಯಲ್ಲಿ, ಗಾಬರಿಯಿಂದಲೂ ದಿಗಿಲಿನಿಂದಲೂ ಮೂರ್ಛೆ ಹೋಗಿರುವ ಊರ್ವಶಿಯನ್ನು ಕುರಿತು "ಎಲೆ ಸುಂದರಿ! ಸಮಾಧಾನವನ್ನು ಹೊಂದು. ರಾಕ್ಷಸರಿಂದ ಸಂಭವಿಸಿದ್ದ ಭಯವು ತ್ರಿಲೋಕ ರಕ್ಷಕನಾದ ವಜ್ರಿಯ ಉದಾರವಾದ ಮಹಿಮೆಯಿಂದ ದೂರವಾಯಿತು. ಇನ್ನು ಮುಂಜಾವದಲ್ಲಿ ಬಿರಿಯುವ ಪದ್ಮಿನಿಯಂತೆ, ಉತ್ಪಲಕ್ಕೆಣೆಯಾದ ನಿನ್ನ ವಿಸ್ತಾರವಾದ ಕಣ್ಣುಗಳನ್ನು ತೆರೆ" ಎಂದು ಸಮಾಧಾನ ಮಾಡಿ ಕೊನೆಗೆ ಚಿತ್ರಲೇಖೆಯ ಉಪಚಾರ

ದಿಂದ ಚೇತರಿಸಿಕೊಳ್ಳುತ್ತಿರುವ ಊರ್ವಶಿಯನ್ನು ಕಂಡು, "ಚಂದ್ರನು ಮೂಡುತ್ತಿರಲು ಕತ್ತಲೆಯು ಬಿಡುತ್ತಿರುವ ರಾತ್ರಿಯಂತೆ ; ಕುಡುವನ್ನಳಿಸಿದರೆ ಪ್ರಜ್ವಲಿಸುವ ರಾತ್ರಿಯದೀಪಜ್ವಾಲೆಯಂತೆ; ಕುಸಿದುಬಿದ್ದ ದಡದ ಮಣ್ಣಿನಿಂದ ಬಗ್ಗಡವಾಗಿದ್ದ ಗಂಗಾನದಿಯ ನೀರು ತಿಳಿಯುವಂತೆ; ಮೂರ್ಛೆಯು ಬಿಡುತ್ತಿರುವ ಈ ಕೃಶಾಂಗಿಯು ಕಾಣುತ್ತಿರುವಳು." ಎಂದು ಸಂತೋಷಪಡುವನು.

ಊರ್ವಶಿಯು ಚೇತರಿಸಿಕೊಂಡು 'ಮಹೇಂದ್ರನಿಂದಲ್ಲದಿದ್ದರೂ ಮಹೇಂದ್ರ ಸದೃಶ ಪ್ರಭಾವನಾದ ಈ ರಾಜರ್ಷಿಯಿಂದ ತನಗೆ ಬಿಡುಗಡೆ'ಯಾದುದನ್ನು ಕೇಳಿ, ರಾಜನ ರೂಪಲಾವಣ್ಯಗಳನ್ನು ನೋಡಿ ಮನಸೋತು, "ರಾಕ್ಷಸರು ಮಾಡಿದುದೂ ಉಪಕಾರವೇ ಆಯಿತು" ಎಂದುಕೊಳ್ಳುವಳು. ರಾಜನೂ ಈಕೆಯ ಅಪರೂಪವಾದ ಸೌಂದರ್ಯಾದಿಗಳನ್ನು ನೋಡುತ್ತಾ 'ನಾರಾಯಣ ಋಷಿಯನ್ನು ಮೋಹಗೊಳಿಸಲೆಂದು ಹೋದ ಅಪ್ಸರೆಯರು ಆತನ ಊರೂದ್ಭವೆಯಾದ ಈಕೆಯನ್ನು ನೋಡಿ ನಾಚಿಕೊಂಡರೆಂಬುದು ಸರಿಯೇಸರಿ! ಆದರೂ ಈಕೆಯು ಆತಪಸ್ವಿಯ ಸೃಷ್ಟಿಯಾಗಿರಲಾರಳು. ಕಾಂತಿಪ್ರದನಾದ ಚಂದ್ರನೋ; ಶೃಂಗಾರವೇ ಕಪರಸವಾಗುಳ್ಳ ಮದನನೋ, ಅಥವಾ ಪುಷ್ಪಾಕರವಾದ ವಸಂತಮಾಸವೋ ಈಕೆಯನ್ನು ಸೃಜಿಸಿರಬೇಕಲ್ಲದೆ ವೇದಾಭ್ಯಾಸದಿಂದ ಜಡವೂ ವಿಷಯ ಪರಾಙ್ಮುಖವೂ ಆದ ಮನಸ್ಸುಳ್ಳ ಆ ಪುರಾಣಋಷಿಯು ಈ ಮನೋಹರ

ವಾದ ರೂಪವನ್ನೆಂತು ಹುಟ್ಟಿಸಬಲ್ಲನು ?'' ಎಂದು ಆಶ್ಚರ್ಯಪಡುತ್ತಿರುವಾಗ, ಊರ್ವಶಿಯು 'ನನ್ನ ಸಖಿಯರಲ್ಲಿರುವ'ರೆಂದು ಕೇಳುವಳು. ಪುರೂರವನು 'ಇದೇ ಸಮಯ' ವೆಂದು 'ನಿನ್ನಸಖೀ ಜನವು ದುಃಖದಲ್ಲಿರುವುದು. ಅದೃಷ್ಟ ವಶದಿಂದ ಒಂದುಸಲ ನಿನ್ನನ್ನು ನೋಡಿದವರೂ ಕೂಡ ನೀನು ಕಣ್ಣೆದಿರುಗಿಲ್ಲದಿದ್ದರೆ ತವಕಪಡುವರು. ಹೀಗಿರುವಲ್ಲಿ ಪಕ್ವವಾದ ಸ್ನೇಹವುಳ್ಳ ಜನಗಳ ಗತಿಯೇನ ?' ಎಂದು ಹೇಳುವನು. ಊರ್ವಶಿಯು ಆಮಾತನ್ನು ಕೇಳಿಸಂತೋಷಪಟ್ಟು 'ಚಂದ್ರನು ಅಮೃತವನ್ನು ಸ್ರವಿಸುವುದರಲ್ಲಿ ಆಶ್ಚರ್ಯವೇನು?' ಎಂದುಕೊಳ್ಳುವಳು. ಹೇಮಕೂಟಶಿಖರದಲ್ಲಿರುವ ಸಖಿಯರ ಬಳಿಗೆ ಬರುತ್ತಾ, ಹಕ್ಕುದಿಣ್ಣೆಗಳನ್ನು ಇಳಿದೇರುತ್ತಾ ರಥವು ಕುಲುಕಲು, ಊರ್ವಶಿಯು ಮುಗ್ಗರಿಸಿ, ಪುರೂರವನನ್ನು ಅವಲಂಬಿಸುವಳು. ಆತನೂ ಅದರಿಂದ ಪುಳಕಿತನಾಗಿ ಆ ಸೌಖ್ಯವನ್ನನುಭವಿಸುತ್ತಾ ಆ ವೇಳೆಗೆ ರಥವು ಬಂದು ನಿಲ್ಲಲು, ಇಳಿದು, 'ಈ ಚಿತ್ರಲೇಖಾ ದ್ವಿತೀಯೆಯಾದ ಊರ್ವಶಿಯೊಡನಿರುವ ಈ ರಾಜರ್ಷಿಯು ವಿಶಾಖಾ ಸಹಿತನಾದಚಂದ್ರನಂತಿರುವನು. ಸಖಿಯೂ ಹಿಂತಿರುಗಿ ಬಂದಳು, ಮಹಾರಾಜನೂ ಅಕ್ಷತ ಶರೀರನಾಗಿ ಹಿಂದಿರುಗಿದನು' ಎಂದು ನಲಿಯುತ್ತಿರುವ ಸಖಿಯರ ಸಮೀಪಕ್ಕೆ ಆಕೆಯನ್ನು ಕರೆದುತಂದು ಬಿಡುವನು.

ಆ ವೇಳೆಗೆ ಇಂದ್ರನ ಅಪ್ಪಣೆಯಿಂದ, ಊರ್ವಶಿಯನ್ನು ಬಿಡಿಸಿಕೊಂಡು ಬರುವುದಕ್ಕೇ ಹೊರಟಿದ್ದ ಚಿತ್ರ

ಸೇನನು ಅಲ್ಲಿಗೆ ಬಂದು 'ಕೇಶಿಯು ಊರ್ವಶಿಯನ್ನು
ಕೊಂಡುಹೋದುದನ್ನು ನಾರದರಿಂದ ಕೇಳಿ, ಮಹೇಂ
ದ್ರನು ನನ್ನ ಕೈಕೆಳಗೆ ಗಂಧರ್ವಸೇನೆಯನ್ನಟ್ಟಿದನು.
ನಾನು ನಿನ್ನ ವಿಜಯವನ್ನು ಚಾರಣರಿಂದ ಕೇಳಿ ಇಲ್ಲಿಗೆ
ಬಂದೆನು. ಎಲೆ ವಯಸ್ಯನೆ! ನೀನು ಇಂದ್ರನಿಗೆ ಮಹ
ತ್ಪ್ರಿಯವನ್ನು ಮಾಡಿರುವೆ. ಪೂರ್ವದಲ್ಲಿ ನಾರಾಯಣ
ಋಷಿಯು ಕರುಣಿಸಿದ್ದ ಈಕೆಯನ್ನು ಇಂದು ದೈತ್ಯರ
ಹಸ್ತದಿಂದ ತಪ್ಪಿಸಿ, ಹೊಸದಾಗಿ ನೀನು ಕೊಟ್ಟೆ. ಆದ
ರಿಂದ ಈಕೆಯನ್ನು ನೀನೇ ಕರೆದುಕೊಂಡುಬಂದು ದೇವ
ರಾಜನನ್ನು ನೋಡಬೇಕು' ಎಂದು ವಿಜ್ಞಾಪಿಸಲು,
ರಾಯನು 'ಎಲೆ ಸಖನೆ! ಪರ್ವತಗಳ ಗುಹೆಗಳಲ್ಲಿ
ಆಗುವ ಸಿಂಹಗರ್ಜನೆಯ ಪ್ರತಿಧ್ವನಿಯೂ ಆನೆಗಳನ್ನು
ಕೊಲ್ಲುವಂತೆ, ಆತನ ಕಡೆಯವರೂ ದ್ವೇಷಿಗಳನ್ನು
ಜಯಿಸುವರೆಂಬುವುದು ವಜ್ರಿಯಾದ ಇಂದ್ರನ ವೀರ
ತ್ವದ ಮಹಿಮೆಯೇ ಸರಿ. ಆದರೆ ಶತಕ್ರತುವನ್ನು
ನೋಡಲು ಇದು ಕಾಲವಲ್ಲ. ಆದರಿಂದ ನೀನೇ ಈಕೆ
ಯನ್ನು ಪ್ರಭುವಿನ ಬಳಿಗೆ ಕರದೊಯ್ಯುವವನಾಗು.'
ಎಂದು ಹೇಳಲು, ಆತನೂ "ಹಾಗೆಯೇ ಆಗಲಿ"
ಎಂದು ಅವರನ್ನು ಕರೆದುಕೊಂಡು ಹೋಗುವನು.

ಊರ್ವಶಿಯು ಹೊರಟು ನಿಂತು 'ಎಲೆ ಸಖಿ!
ಚಿತ್ರಲೇಖೆ! ಉಪಕಾರಿಯಾಗಿದ್ದರೂ, ಈ ರಾಜರ್ಷಿ
ಯನ್ನು ನಾನು ಮಾತಾಡಿಸಲಾರೆನು. ಆದರಿಂದ ನನ
ಗೋಸ್ಕರ ನೀನೇ ಮಾತಾಡು' ಎನ್ನಲು ಚಿತ್ರಲೇಖೆಯು
'ವಯಸ್ಯ! ಊರ್ವಶಿಯು ಅಪ್ಪಣೆಯಾದರೆ ಮಹಾರಾ

ಜನ ಕೀರ್ತಿಯನ್ನು ಪ್ರಿಯಸಖಿಯಂತೆ ಮಹೇಂದ್ರ ಲೋಕಕ್ಕೆ ಕರೆದುಕೊಂಡು ಹೋಗುವೆನು ಎಂದು ವಿಜ್ಞಾಪಿಸುವಳು.' ಎಂದರಿಕೆ ಮಾಡಲು, ರಾಯನೂ ಹೋಗಿಬನ್ನಿ ಎಂದು ಬೀಳ್ಕೊಡುವನು.

ಊರ್ವಶಿಯೂ ಹೋಗುತ್ತಾ, 'ಲತೆಯ ಬಾಹುಗಳಲ್ಲಿ ನನ್ನ ಏಕಾವಳಿಯು ಸಿಕ್ಕಿಕೊಂಡಿತು ಅದನ್ನು ಬಿಡಿಸು' ಎಂದು ಚಿತ್ರಲೇಖೆಯನ್ನು ಪ್ರಾರ್ಥಿಸುತ್ತಾ, ರಾಜನನ್ನು ಹಿಂತಿರುಗಿ ನೋಡಲು, ಚಿತ್ರಲೇಖೆಯು ನಗುತ್ತಾ 'ಹೌದು. ಬಲವಾಗಿಸಿಕ್ಕಿಕೊಂಡಿರುವುದು ಬಿಡಿಸಲಸಾಧ್ಯವು ಎಂದು ತೋರುವುದು, ಆಗಲಿ ನೋಡೋಣ' ಎಂದು ಹಾಸ್ಯಮಾಡುತ್ತಾ ಬಿಡಿಸಲು, ಊರ್ವಶಿಯು 'ಈ ಮಾತಿನ ನೆನೆಪಿರಲಿ' ಎನ್ನುವಳು. ಇಬ್ಬರೂ ಎಲ್ಲರೊಡನೆ ಹೊರಟುಹೋಗುವರು.

ರಾಯನೂ 'ಊರ್ವಶಿಗೆ ಕ್ಷಣಕಾಲ ಗಮನಭಂಗ ಮಾಡಿ ಆ ಅಪಾಂಗನೇತ್ರೆಯು ಅರ್ಧಮುಖವನ್ನು ಹಿಂತಿರುಗಿಸಿ ನನ್ನನ್ನು ನೋಡಲು ಅವಕಾಶಮಾಡಿದ ಲತೆಯೇ! ನೀನು ನನಗೆ ಪ್ರಿಯವನ್ನು ಮಾಡಿದೆ' ಯೆಂದು ಅದನ್ನುಅಭಿನಂದಿಸಿ, ಆ ವೇಳೆಗೆ ಇಂದ್ರಾಪರಾಧಿಗಳಾದ ದೈತ್ಯರನ್ನು ಲವಣ ಸಮುದ್ರದಲ್ಲಿ ಕೆಡಹಿ ಹಿಂತಿರುಗಿ ಬಂದು, ಮಹೋರಗವು ಬಿಲವನ್ನು ಹೋಗುವಂತೆ ಬತ್ತಳಿಕೆಯನ್ನು ಸೇರಿದ ವಾಯವ್ಯಾಸ್ತ್ರವನ್ನು ಸ್ವೀಕರಿಸಿ. ರಥವನ್ನು ಹತ್ತಿ, "ಮನ್ಮಥನು ದುರ್ಲಭವಾದ ವಸ್ತುವಿನಲ್ಲಿಯೇ ಮನಸ್ಸನ್ನು ಲಗ್ನ ಮಾಡುವನು. ರಾಜಹಂಸಿಯು ಮುರಿದ ತಾವರೆಯ

ದಂಟನಿಂದ ಸೂತ್ರವನ್ನು ಎಳೆದುಕೊಂಡು ಹೋಗು ವಂತೆ ಈ ಸುರಾಂಗನೆಯು ನನ್ನ ಶರೀರದಿಂದ ಮನ ಸ್ಸನ್ನು ಬಲಾತ್ಕಾರದಿಂದ ಎಳೆದುಕೊಂಡು ಹೋಗು ತ್ತಿರುವಳು” ಎಂದು ಊರ್ವಶಿಯು ಹೋದ ಕಡೆ ಯನ್ನೇ ನೋಡುತ್ತಾ ತಾನೂ ಹೊರಟುಹೋಗುವನು.



ಇಂತಿದು ಪ್ರಥಮಾಂಕವು



# ದ್ವಿತೀಯಾಂಕ



ಎರಡನೆಯಂಕದ ವಿಷ್ಕಂಭದಲ್ಲಿ ಅನ್ಯಮನಸ್ಕನಾದ ಪತಿಯನ್ನು ನೋಡಿ ಕಾತರಳಾಗಿರುವ ಕಾಶಿರಾಜ ಪುತ್ರಿಯಾದ ಮಹಾರಾಣಿಯಿಂದ 'ಸೂರ್ಯೋಪಸ್ಥಾನದಿಂದ ಹಿಂತಿರುಗಿದ ಆರ್ಯಪುತ್ರನು ಶೂನ್ಯಹೃದಯನಾಗಿ ಕಾಣುವನು. ಕಾರಣವನ್ನು ಆರ್ಯಮಾಣವಕನಿಂದ ತಿಳಿದು ಬಾರೆಂ'ದು, ಆಜ್ಞಾಪಿತಳಾದ ನಿಪುಣಿಕೆಯು ''ಪರಮಾನ್ನದಿಂದ ಬಿರಿಯುತ್ತಿರುವ ಹೊಟ್ಟೆಯುಳ್ಳ ಬ್ರಾಹ್ಮಣಾರ್ಧದ ಬ್ರಾಹ್ಮಣನಂತೆ'' ರಾಜರಹಸ್ಯದಿಂದ ಬಿರಿಯುತ್ತಿರುವ ಹೊಟ್ಟೆಯ ಮಾಣವಕನನ್ನು ಕಂಡು, ''ಆರ್ಯ ಮಾಣವಕನು ಇಲ್ಲಿಯೆ ಚಿತ್ರದ ಕಪಿಯಂತೆ ಏನೋ ಆಲೋಚಿಸುತ್ತ ಕುಳಿತಿರುವನೆಂ''ದು ಅಲ್ಲಿಗೆ ಬರುವಳು. ಮಾತಾಳಿಯಾದ ಮಾಣವಕನು ಆ ದಾಸ್ಯ ಪುಟಿಯ ಮುಖವನ್ನು ಕಂಡು ಎದೆಸೀಳಿಕೊಂಡು ಹೊರಬೀಳುತ್ತಿರುವ ರಾಜರಹಸ್ಯವನ್ನು ಮುಚ್ಚಿಕೊಳ್ಳುತ್ತಾ, ನಿಪುಣಿಕೆಯು ಬಂದ ಕಾರಣವನ್ನು ವಿಚಾರಿಸುವನು. ''ದುಃಖಿತೆಯಾಗಿದ್ದರೂ ಆರ್ಯ ಮಾಣವಕನಿಗೆ ನನ್ನನ್ನು ನೋಡುವಷ್ಟು ದಾಕ್ಷಿಣ್ಯವಿಲ್ಲವಾಯಿತು. ಚಿಂತೆಯಿಲ್ಲ. ನೀನೇ ಹೋಗಿ ಅವನನ್ನು ನೋಡಿಬಾ'' ಎಂದು ಮಹಾರಾಣಿಯು ಆಜ್ಞಾಪಿಸಲು ನಿಪುಣಿಕೆಯು ಬಂದಳೆಂದು ತಿಳಿದು, ದುಃಖಕಾರಣವನ್ನು

ವಿಚಾರಿಸುವನು. ನಿಪುಣೆಯಾದ ನಿಪುಣಿಕೆಯು ' ಮಹಾರಾಜನು ತಾನು ಹಂಬಲಿಸುತ್ತಿರುವ ಯಾವಳೋ ಒಬ್ಬಳು ಹೆಂಗುಸಿನ ಹೆಸರಿನಿಂದ, ದೇವಿಯುನ್ನು ನುಡಿಯಿಸಿದನೆಂ'ದು ಹೇಳುವಳು. ಮೊಂಕನಾದ ಮಾಣವಕನು 'ರಾಜನೇ ತನ್ನ ಗುಟ್ಟು ಬಿಟ್ಟುಕೊಟ್ಟ ಮೇಲೆ ತನಗೇನು?' ಎಂದುಕೊಂಡು, 'ಹಾಗಾದರೇನು ಊರ್ವಶೀ ಎಂದು ಕರೆದನೋ?' ಎಂದು ವಿಚಾರಿಸಿ, 'ಊರ್ವಶಿಯೆಂಬಪ್ಸರಸೆಯುಂಟು. ಆಕೆಯುನ್ನು ನೋಡಿ ಅರಸನಿಗೆ ಹುಚ್ಚು ಹಿಡಿದು ಕೇವಲ ದೇವಿಯೊಬ್ಬಳನ್ನೇ ಅಲ್ಲ; ತನ್ನನ್ನೂ ಕೂಡ ಬಹುವಾಗಿ ಪೀಡಿಸುತ್ತಿರುವನು. ಇರಲಿ. ಈ ಬಿಸಿಲುಗುದುರೆಯಿಂದ ಮಹಾರಾಜನನ್ನು ಹಿಂತಿರುಗಿಸಿಯೆ ದೇವಿಯುನ್ನು ನೋಡುವೆನೆಂದು ನಾನರಿಕೆ ಮಾಡಿದೆನೆಂದು ದೇವಿಗೆ ವಿಜ್ಞಾಪಿಸು' ಎಂದು ಹೇಳುವನು. ನಿಪುಣಿಕೆಯೂ 'ಭಟ್ಟನಗುಟ್ಟಿನ ಕೋಟೆಯುನ್ನುಗೆದ್ದುದಾಯಿತು' ಎಂದು ಹಿಂತಿರುಗಲು, ವಿದೂಷಕನೂ 'ಲೋಕದಲ್ಲಿರುವ ಪ್ರಜೆಗಳ ತಮೋವೃತ್ತಿಯುನ್ನು ಧ್ವಂಸಮಾಡುವುದರಲ್ಲಿ, ದೇವನೂ, ಸವಿತೃ ದೇವನೂ ಸಮಾನವಾದ ಅಧಿಕಾರವುಳ್ಳವರು. ಹಾಗೆಯೇ, ಸವಿತಾರನು ಮಧ್ಯಾಹ್ನದ ಆಸನೆಯ ಭಾಗದಲ್ಲಿ ಒಂದು ಕ್ಷಣಕಾಲ ನಡುಜಾಸಿನಲ್ಲಿ ನಿಲ್ಲುವಂತೆ ನೀನೂ ಅದೇ ಹೊತ್ತಿನಲ್ಲಿ ತುಸಹೊತ್ತು ವಿಶ್ರಮವುವನ್ನುಹೊಂದುವೆ' ಎಂದು ಹಾಡುವ ವೈತಾಳಿಕನಿಂದ ರಾಜನು ಬರುತ್ತಿರುವುದನ್ನು ಅರಿತು, ತಾನೂ ರಾಜನ ಪಾರ್ಶ್ವವರ್ತಿಯಾಗಲು ಹೋಗುವನು.

ಹೀಗೆ ವಿಷ್ಕಂಭವನ್ನಾಚರಿಸಿದನಂತರ, ಉತ್ಕಂಠಿತ ನಾದ ರಾಜನನ್ನೂ ವಿದೂಷಕನನ್ನೂ ಕವಿಯು ಉದ್ಯಾನದಲ್ಲಿ ಪ್ರವೇಶಿಸುವನು. ವಿರಹದಿಂದ ವ್ಯಥಿಸುತ್ತಿರುವ ರಾಜನು ತನ್ನ ಚಿಂತೆಯಲ್ಲಿರಲು ವಿದೂಷಕನು, 'ಕಾಶಿರಾಜ ಪುತ್ರಿಯು ವ್ಯಥಿಸುತ್ತಿರುವಳು' ಎಂದು ವಿಜ್ಞಾಪಿಸುವನು. ರಾಜನು ಕೂಡಲೆ 'ನೀನು ಗುಟ್ಟನ್ನು ಬಿಟ್ಟುಕೊಟ್ಟಿಲ್ಲವಲ್ಲಾ?' ಎಂದು ಕೇಳಲು, ವಿದೂಷಕನು 'ವಂಚಿತನಾದೆನೆಂ'ದುಕೊಂಡು ಮೌನವಾಗಿದ್ದು ಮತ್ತೆ ಕೇಳಿದ ಧೊರೆಗೆ 'ನೋಡು ನಿನಗೂ ಉತ್ತರ ಕೊಡದಂತೆ ನಾಲಗೆಯನ್ನು ಹೇಗೆ ಕಟ್ಟಿಕೊಂಡಿರುವೆನು?' ಎಂದು ಹೇಳಲು, ರಾಜನು 'ಸರಿ' ಯೆಂದು ಆ ಮಾತುಬಿಟ್ಟು 'ಅಯ್ಯಾ! ನನ್ನನ್ನು ವಿನೋದಪಡಿಸಲು ಯಾವುದಾದರೂ ಒಂದುಪಾಯವನ್ನು ಹೇಳು' ಎನ್ನಲು ಹೊಟ್ಟೆಬಾಕನಾದ ವಿದೂಷಕನು 'ಬಾ ಬಿಡದಿಗೆ ಹೋಗೋಣ. ಅಲ್ಲಿ ಭಕ್ಷ್ಯಭೋಜ್ಯಗಳಿರುವವು' ಎನ್ನುವನು. ಧೊರೆಯು 'ಅಲ್ಲಿ ನಿನಗೆ ಬೇಕಾದ ವಸ್ತುಗಳಿರುವುದರಿಂದ ನಿನಗೆ ಸಂತೋಷವಾದರೂ ದುರ್ಲಭವಾದ ವಸ್ತುವಿನಲ್ಲಿ ಮನಸ್ಸು ನೆಟ್ಟು, ಲಭಿಸದ ಪ್ರಾರ್ಥನೆಯುಳ್ಳ ನನಗೆ ಅಲ್ಲೇನಿರುವುದು?' ಎಂದು ವ್ಯಥಿಸಲು, ವಿದೂಷಕನು ಮತ್ತೆ 'ತಡೆ. ನಿನ್ನನ್ನು ಆ ಊರ್ವಶಿಯು ನೋಡಿರುವಳಷ್ಟೆ? ಹಾಗಾದರೆ ಅವಳು ನಿನಗೆ ದುರ್ಲಭಳಲ್ಲ.' ಎಂದು ಹೇಳುವನು. ರಾಜನು ಮತ್ತೆ 'ಸಮ್ರೂಪಕ್ಕೆ ಆಕೆಯಲ್ಲಿರುವ ಪಕ್ಷಪಾತವಾದರೋ ಅಲೌಕಿಕವಾದುದೆ'ನ್ನಲು ಮತ್ತೆ ವಿದೂಷಕನು 'ಹಾಗಾದರೆ ಕುರೂಪದಲ್ಲಿ ನಾನು

ಹೇಗೋ ಹಾಗೆ ಸುರೂಪದಲ್ಲಿ ಆಕೆಯು ಅದ್ವಿತೀಯಳೆ?' ಎಂದು ಪ್ರಶ್ನೆಮಾಡಲು, ರಾಜನು 'ಮಾಣವಕ! ಪ್ರತ್ಯಂಗವನ್ನೂ ವರ್ಣಿಸುವುದೆಂದರೆ ಅದು ಅಶಕ್ಯವು. ಒಟ್ಟಿಗೆ ಹೇಳುವೆನು ಕೇಳು. ಆಕೆಯು ಒಡವೆಗೆ ಒಡವೆಯು. ಅಲಂಕಾರಕ್ಕೆ ಅಲಂಕಾರವು. ಆಕೆಯ ಶರೀರವು ಉಪಮಾನಕ್ಕೆಲ್ಲ ಉಪಮಾನವು' ಎಂದು ವರ್ಣಿಸಲು, ವಿದೂಷಕನು 'ಅದಕ್ಕಾಗಿಯೇ ದಿವ್ಯರಸಾಭಿಲಾಷಿಯಾದ ನೀನು ...ತ್ರಕವ್ರತವನ್ನು ಗ್ರಹಿಸಿರುವೆ!' ಎಂದು ಹಾಸ್ಯಮಾಡುವನು. ಏಕಾಂತಪ್ರಿಯನಾದ ರಾಜನು ಉದ್ಯಾನವನಕ್ಕಾಗಿ ಹೋಗುತ್ತ 'ಮಾಧವಿಯ ಸೊಬಗನ್ನು ಹೆಚ್ಚಿಸುತ್ತಾ ಮೊಲ್ಲೆಯ ಬಳ್ಳಿಯನ್ನು ಕುಣಿಸುತ್ತಾ ಸ್ನೇಹದಾಕ್ಷಿಣ್ಯಗಳಿಂದ ಕೂಡಿದ ಈ ದಕ್ಷಿಣ ಮಾರುತನು ಕಾಮಿಯಂತಿರುವನು.' ಎಂದು ತನ್ನವಸ್ಥೆಯನ್ನೇ ಹೇಳಿಕೊಳ್ಳುತ್ತಾ ಪ್ರಮದವನ್ನು ಸೇರಿ, 'ತಾನು ತಾಪಶಾಂತಿಗೆಂದು ಉದ್ಯಾನಕ್ಕೆ ಬಂದುದು ನದಿಯಲ್ಲಿ ಕೊಚ್ಚಿಹೋಗುತ್ತಿರುವವನು ನದಿಗೆದುರಾಗಿಯೇ ಈಸಲೆತ್ನಿಸಿದಂತಾಯಿತು.' ಎಂದು ವ್ಯಥಿಸುವನು.

'ಚಿಂತಿಸಬೇಡ. ನಿನ್ನ ಯಿಷ್ಟವನ್ನು ಸಂಪಾದಿಸಿಕೊಡುವ ಅನಂಗನೇ ನಿನಗೆ ಸಹಾಯಕಾರಿಯಾಗುವನೆಂ'ದು ಮತ್ತೆ ಸಮಾಧಾನ ಹೇಳುವ ವಿದೂಷಕನ ಮಾತನ್ನು ಮನ್ನಿಸುತ್ತಾ 'ಬರುತ್ತಿರುವ ಈ ವಸಂತದ ಸೊಗಸನ್ನು ನೋಡೆಂ'ದ ವಿದೂಷಕನಿಗೆ 'ಹೌದು. ಇಲ್ಲಿ ನೋಡು ಹೆ... ಸ್ತ್ರೀಯರನಂತೆ ಮೊದಲಲ್ಲಿ ಮಾಸಲುಕೆಂಪಾಗಿಯೂ, ಎರಡು ಪಕ್ಕಗಳಲ್ಲಿ ಕೊಂಚ ಕಪ್ಪಗೂ ಇರುವ ಈ ಕೆಂಪು ಗೋರಂಟಿಯೂ, ಉತ್ಕೃ

ಷ್ಟನಾದ ಕೆಂಪುಬಣ್ಣದಿಂದ ಕೂಡಿ ಚಿಗುರು ಒಡೆಯುತ್ತಿರುವ ಬಾಲಾಶೋಕವೂ, ಸ್ವಲ್ಪವಾದ ಪುಷ್ಪರಜದಿಂದ ಹೊಗೆಯ ಬಣ್ಣವಾಗಿರುವ ಮಾವಿನ ಹೂಗೊಂಚಲೂ ಕೂಡಿರಲು, ಈ ವಸಂತಲಕ್ಷ್ಮಿಯು ಮುಗ್ಧತ್ವಯೌವ್ವನಗಳ ನಡುವಿರುವಳು' ಎಂದು ತನ್ನ ಅನುರಾಗದ ಸ್ಥಿತಿಯನ್ನೇ ಹೇಳಿಕೊಳ್ಳುತ್ತಾ, ಅವನ ಕೋರಿಕೆಯಂತೆ ಬಂದು ಕರಿಯ ಮಣಿಶಿಲೆಯ ಕಲ್ಲು ಹಲಗೆಯ ಮೇಲೆ ಕುಳಿತುಕೊಳ್ಳುವನು.

ಎದುರಿಗೆ ಇರುವ ಲತೆಗಳನ್ನು ನೋಡಿ ಮನಸ್ಸನ್ನು ವಿನೋದಪಡಿಸಿಕೋ ಎಂದ ವಿದೂಷಕನಿಗೆ, 'ವಯಸ್ಯ! ಆ ಅಂಗನೆಯನ್ನು ನೋಡಿದ ಕಣ್ಣಿಗೆ, ಜೇಕಾದಷ್ಟು ಹೂವ್ವು ಬಿಟ್ಟು ನೆಲದಲ್ಲಿ ಮಲಗಿ ಬಿಟ್ಟಿರುವ ಗಿಡಗಳೂ ಉಪವನ ಲತೆಗಳೂ ಸೊಗಸವು' ಎಂದ, ವ್ಯಧಿಸುತ್ತಾ ಅವನನ್ನು 'ನನ್ನ ಇಷ್ಟವೀಡೇರುವಂತೆ ಒಂದು ಪಾಯುವನ್ನು ಹುಡುಕೆಂ'ದು ಪ್ರಾರ್ಥಿಸುವನು. ವಿದೂಷಕನೂ ನಕ್ಕು "ಅಹಲ್ಯಾ ಕಾಮುಕನಾದ ಇಂದ್ರನಿಗೆ ಸಚಿವನಾದ ವಜ್ರವೂ ಊರ್ವಶೀಕಾಮುಕನಾದ ನಿನಗೆ ಸಚಿವನಾದ ನಾನೂ ಇಬ್ಬರೂ ಉನ್ಮತ್ತರೇ!' ಎಂದು ತನ್ನ ವಜ್ರಮಂದತೆಯನ್ನು ಹೇಳಿ ಕೊಳ್ಳುತ್ತಾ ಮತ್ತೆ ಪ್ರಾರ್ಥಿತನಾಗಿ 'ಹಾಗೆಯೇ ಆಗಲಿ. ಮತ್ತೆ ನಿನ್ನ ಗೋಳಾಟದಿಂದ ನನ್ನ ಸಮಾಧಿಗೆ ಭಂಗತರಬೇಡ' ವೆನ್ನುತ್ತಾ ಒಂದು ಶುಭಶಕುನವನ್ನು ಕಾಣುವನು. ಆ ವೇಳೆಗೆ ರಾಜನೂ 'ಆ ಪೂರ್ಣೇಂದು ಮುಖಿಯಾದರೊ ಅಸುಲಭಳು. ಅನಂಗನ ಚೇಷ್ಟೆಯಾದರೊ ವಿಚಿತ್ರವಾಗಿರುವುದು. ಆದರೂ ಆಶೆಯು

ಇನ್ನೇನು ಕೈಸೇರಿತು ಎನ್ನುವಾಗ ಇರುವಂತೆ ಮನಸ್ಸು ಸಂತೋಷವನ್ನು ಹೊಂದಿರುವುದು" ಎಂದು ಕೊಳ್ಳು ತ್ತಿರುವಾಗ ಊರ್ವಶೀ ಚಿತ್ರಲೇಖೆಯರು ಬರುವರು.

ಚಿತ್ರಲೇಖೆಯು "ಎಲೆ ಸಖಿ! ಊರ್ವಶಿ! ಹೇಳದೆ ಕೇಳದೆಯೆ ಎಲ್ಲಿಗೆ ಹೊರಟಿರುವೆ? ರಾಜರ್ಷಿಯಾದ ಪುರೂರವನ ಬಳಿಗೇನಾದರೂ ಹೊರಟಿರುವೆಯಾ? ಹಾಗಾದರೆ ಯಾರನ್ನು ಮೊದಲು ಕಳುಹಿಸಿರುವೆ? ನಿನ್ನನ್ನು ಹೋಗೆಂದವರು ಯಾರು?" ಎಂದು ಕುತೂಹಲದಿಂದ ಕೇಳಲು, ಆಕೆಯು "ಸಖಿ! ಅಂದು ಹೇಮ ಕೂಟವಲ್ಲಿ ಏಕಾವಳಿಯು ಸಿಕ್ಕಿಕೊಳ್ಳಲು ಬಿಡಿಸೆಂದಾಗ ಏನ ಹೇಳಿದೆ ಜ್ಞಾಪಿಸಿಕೊ, ಎಂದು ನುಡಿದು, 'ನಾಣ್ಗೇಡಿಯಾದ ನಾನಲ್ಲಿಗೇ ಹೊರಟಿರುವೆನು ಹೃದಯವು ಮೊದಲೇ ಹೋಗಿರುವುದು ಮದನನು ನನ್ನನ್ನು ನಿಯೋಜಿಸಿರುವನು. ಅದರಿಂದ ನಡೆ ವಿಘ್ನ ಬರದ ಮಾರ್ಗದಲ್ಲಿ ಹೋಗೋಣವೆಂ'ದಳು. ಅದಕ್ಕೆ ಚಿತ್ರಲೇಖೆಯು 'ಸಖಿ! ಕಾತರಳಾಗಬೇಡ. ದೇವಗುರುಗಳು ಉಪದೇಶಿಸಿರುವ ಶಿಖಾಬಂಧಿನೀ ವಿದ್ಯಾಬಲದಿಂದ ದೇವಶತ್ರುಗಳು ಯಾರಿಗೂ ನಾವು ಕಾಣಿಸುವುದಿಲ್ಲ' 'ಈ ಗಂಗಾ ಯಮುನಾ ಸಂಗಮದಲ್ಲಿ ಇದೋ ತನ್ನನ್ನು ತಾನು ನೋಡಿ ಕೊಳ್ಳುತ್ತಿರುವಂತಿರುವ ಪ್ರತಿಷ್ಠಾನ ನಗರದ ಚೂಡಾಮಣಿಯಂತಿರುವ ಆ ರಾಜರ್ಷಿಯ ಅರಮನೆಯು,| 'ಇದು ಅಪನ್ನಾನುಕಂಪಿಯಾದ ರಾಜ ನೆಲ್ಲಿರುವನೋ ನೋಡೋಣ ಬಾರೆಂ'ದು ಮುಂದೆ

ನಡೆದು, ನಂದನ ವನದ ಒಂದು ಭಾಗದಂತಿರುವ ಪ್ರಮದ ವನಕ್ಕೆ ಬಂದು ಅಲ್ಲೇ ಯಿರುವ ರಾಜನನ್ನು ನೋಡಿ, 'ಇದೋ! ಹುಟ್ಟುತ್ತಿರುವ ಚಂದ್ರನು ಬೆಳ ದಿಂಗಳ ನಿರೀಕ್ಷಣೆಯಲ್ಲಿರುವಂತೆ ನಿನ್ನನ್ನೇ ಎದುರು ನೋಡುತ್ತಿದ್ದಾನೆ ಬಾ. ಕಾಣಿಸಿಕೊಳ್ಳೋಣ." ಎನ್ನು ವಳು. ಊರ್ವಶಿಯು, 'ಸಖಿ! ಈಗ ಈ ರಾಜ ರ್ಷಿಯು ಮೊದಲಿಗಿಂತಲೂ ಪ್ರಿಯದರ್ಶನನಾಗಿ ಕಾಣುವನು. ಆದರೂ ತಡೆ. ತಿರಸ್ಕರಿಣಿಯಿಂದ ಒಂದು ಗಳಿಗೆ ಕಣ್ಮರೆಯಾಗಿದ್ದು ಮಹಾರಾಜನು ವಯಸ್ಯ ನೊಡನೆ ಏಕಾಂತದಲ್ಲಿ ಏನು ಯೋಚಿಸುತ್ತಿರುವನೋ ನೋಡೋಣ" ಎನ್ನುವಳು ಇಬ್ಬರೂ ಹಾಗೆಯೇ ಮಾಡುವರು.

ಆ ವೇಳೆಗೆ ವಿದೂಷಕನೂ "ವಯಸ್ಯ! ದುರ್ಲಭ ರಾದ ಪ್ರಣಯಿ ಜನರು ದೊರೆಯುವ ಉಪಾಯವೊಂ ದನ್ನು ಕಂಡು ಹಿಡಿದಿರುವೆನು" ಎನ್ನಲು, ಊರ್ವಶಿಯು ಅದನ್ನು ಕೇಳಿ, "ಈತನು ಪ್ರಾರ್ಥಿಸಿದರೂ, ಒಲಿ ಯದೆ ವಿನೋದವಾಡುವ ಆ ಹೆಂಗಸಾದರೂ ಯಾರು?" ಎಂದು ವಿಚಾರಪರಳಾಗುವಳು. ಚಿತ್ರಲೇ ಖೆಯು 'ದಿವ್ಯದೃಷ್ಟಿಯಿಂದ ನೋಡೆ' ನ್ನಲು 'ಆತನ ಮನೋಗತವು ಬೇರೆಯಾಗಿದ್ದರೆ ಏನು ಗತಿ?' ಎಂದು ಹೆದರುವಳು. ವಿದೂಷಕನು ಮಾತು ಕಿವಿಗೆ ಬೀಳದೆ ಕುಳಿತಿದ್ದ ರಾಜನನ್ನು ಮತ್ತೆ ಸಂ ಬೋಧಿಸಿ, "ಸ್ವಪ್ನದಲ್ಲಿ ಪ್ರಿಯೆಯನ್ನು ತೋರಿಸುವ ನಿದ್ರೆಯನ್ನಾದರೂ ಸೇವಿಸು. ಅಥವಾ ಆ ಊರ್ವ ಶಿಯ ಪ್ರತಿಕೃತಿಯನ್ನು ಚಿತ್ರದಲ್ಲಿ ಬರೆದು ನೋಡಿ

ಯಾವರೂ ಸಂತೋಷಪಡು' ಎನ್ನುವನು. ಅರಸನು "ಹೃದಯದಲ್ಲಿ ಕಾಮಶರವು ನೆಟ್ಟಿರಲು ನಿದ್ದೆಯು ಬಂದು ಕನಸು ಬೀಳುವುದೆಂತು? ನಲ್ಲೆಯನ್ನು ಕಾಣುವುದೆಂತು? ಕಣ್ಣಿನಲ್ಲಿ ನೀರು ತುಂಬಿರಲು ಚಿತ್ರಲೇಖನವೆಂತು ಸಾಧ್ಯವು?' ಎಂದು ಚಿಂತಿಸುವನು. ಊರ್ವಶಿಯು ಇದನ್ನು ಕೇಳಿಯೂ 'ನನಗೆ ತೃಪ್ತಿಯಾಗಲಿಲ್ಲ'ವೆನ್ನುತ್ತಿರಲು, ವಿದೂಷಕನು 'ಇಲ್ಲಿಂದ ಮುಂದಕ್ಕೆ ನನ್ನ ಬುದ್ಧಿಯೋಡುವುದಿಲ್ಲ'ವೆಂದು ಸುಮ್ಮನಾಗಲು, ಅರಸನು ಮತ್ತೆ 'ಅಯ್ಯಾ! ಆಕೆಯು ತುದಿಯಿಂದ ತಾಳಿನವರೆಗೂ ಕಠಿಣವಾದ ನನ್ನ ಮನೋರೋಗವನ್ನು ಕಾಣಳು. ಅಥವಾ ತನ್ನ ಪ್ರಭಾವದಿಂದ ತಿಳಿದಿದ್ದರೂ, ನನ್ನನ್ನು ಕಡೆಗಂಡಿರುವಳು. ಹೀಗೆ ಪ್ರಯೋಜನವಿಲ್ಲದಿರುವಂತೆ ಆ ಜನದಲ್ಲಿ ನನ್ನ ಮನಸ್ಸನ್ನು ಸಿಲುಕಿಸಿದ ಪಂಚಬಾಣನು ಈಗಲಾದರೂ ಕೃತಕೃತ್ಯನಾಗಲೆಂ'ದು ವ್ಯಥಿಸುವನು. ಅದನ್ನು ಕೇಳಿ ಊರ್ವಶಿಯು ಬಲುನೊಂದು "ಅಯ್ಯೋ! ನನ್ನನ್ನು ಈತನು ಇಂತು ನಿಂದಿಸುವನು. ನಾನಾದರೂ ಈತನ ಮುಂದೆ ನಿಂತುಕೊಳ್ಳಲಾರೆನು." ಎಂದು ತನ್ನ ಪ್ರಭಾವದಿಂದ ಒಂದು ಭೂರ್ಜ ಪತ್ರವನ್ನು ನಿರ್ಮಿಸಿ, ಅದನ್ನು ಬರೆದು ಆತನ ಮುಂದಿಡುವಳು. ವಿದೂಷಕನು ಗಾಳಿಯಲ್ಲಿ ತೂರಿಕೊಂಡು ಬರುವ ಆ ಭೂರ್ಜ ಪತ್ರವನ್ನು ಕಂಡು ಹಾವಿನ ಪೊರೆಯೆಂದು ಭೀತನಾಗಲು ರಾಜನು ಅದನ್ನು ನೋಡಿ 'ಇದು ಹಾವಿನ ಪೊರೆಯಲ್ಲ. ಬರೆದಿರುವಭೂರ್ಜಪತ್ರವೆಂ'ದು ತೆಗೆದುಕೊಂಡು ವಿದೂಷಕನು

ಹೇಳಿದಂತೆಯೇ ಅದು ಊರ್ವಶಿಯ ಪ್ರೇಮಲೇಖವಾ ಗಿರಲು, ಅದನ್ನು ಕೇಳಿಂದು ವಿದೂಷಕನಿಗೆ ಓದಿ ಹೇಳುವನು; "ಎಲೈ ಸ್ವಾಮಿಯೇ! ತಾವು ನನ್ನಲ್ಲಿ ವಿಶ್ವಾಸವಿಟ್ಟು ಬಹುಮಾನವಾಡಿದಿರಿ. ಅನುರಕ್ತ ರಾದ ತಮ್ಮಲ್ಲಿ ನಾನೂ ಹಾಗೆಯೇ ಇರುವೆನು. ಹಾಗಲ್ಲದಿದ್ದರೆ ಲಲಿತವಾದ ಪಾರಿಜಾತದ ಹೂವಿನ ಹಾಸಿನಲ್ಲಿ ಹೊರಳುವ ನನಗೆ, ಸುಖವಾದ ನಂದನ ವನದ ಗಾಳಿಯೂ ಬೆಂಕಿಯಂತಾಗುವುದೆ?" ಎಂದೋ ದಲು, ಅರಸನೇನೆನ್ನುವನೋ ಎಂದು ಕುತೂಹಲಿ ಯಾಗಿರುವಊರ್ವಶಿಯನ್ನು "ಕೊರಗಿದ ಕಮಲದಂತಿ ರುವ ಅಂಗಗಳೇ ಹೇಳುತ್ತಿರುವುವಲ್ಲ" ಎಂದು ಚಿತ್ರ ಲೇಖೆಯು ಸ ಮಾ ಧಾ ನ ಪ ಡಿ ಸ ಲು, ರಾಯನು "ಸಮಾನವಾದನುರಾಗದಿಂದ ಸುಂದರವಾಗಿಯೂ ಲಲಿತವಾದ ಅ ರ್ಥ ದಿ ಂ ದ ಕೂಡಿರುವುದಾಗಿಯೂ ಇರುವ ಪ್ರಿ ಯ ಸಿ ಯ ಪ್ರೇ ಮ ಲೇಖನವು ಕೈಸೇ ರಲು, ಮದಿರೇಕ್ಷಣೆಯು ಬಂದು, ನನ್ನ ಮುಖದಲ್ಲಿ ಮುಖವನ್ನಿಟ್ಟಂತಾಯಿತು." ಎ ಂ ದು ಸ ಂ ತೋ ಷಿಸಿ, "ವಯಸ್ಯ! ನನ್ನ ಜೆವರುವ ಕೆ ಬೆರಳಿನಿಂದ ಅಕ್ಷ ರವು ಮಾಸಿಹೋಗುತ್ತದೆ. ಇದನ್ನು ನಿನ್ನ ಕೈಯ್ಯ ಲ್ಲಿಟ್ಟುಕೊಂಡಿರು" ಎಂದು ಕೊಡುವನು. ವಿದೂಷ ಕನೂ "ಹಾಗಾದರೆ ಊರ್ವಶಿಯು ಆಶೆಯು ಗಿಡದ ಹೂವನ್ನು ತೋರಿಸಿ, ಫಲದಲ್ಲಿ ವಿಮುಖಳಾಗು ವಳೇ?" ಎನ್ನುತ್ತಿರಲು, ಊರ್ವಶಿಯ ಸೂಚನೆ ಯಂತೆ ಚಿತ್ರಲೇಖೆಯು ರಾಜನ ದೃಷ್ಟಿಗೆ ಗೋಚರ ವಾಗಿ, "ರಾಯನೇ! ಸುರವೈರಿಯಿಂದಾದ ಸಂಕಟ

ದಲ್ಲಿ ಶರಣನಾದ ಮಹಾರಾಜನು ತನ್ನ ದರ್ಶನ ವನ್ನೇ ನಿಮಿತ್ತವಾಗಿಟ್ಟುಕೊಂಡು ನನ್ನನ್ನು ಸಂಕಟ ಪಡಿಸುವ ಮದನನಿಂದಲೂ ಕಾಪಾಡಬೇಕು ಎಂದೂ ರ್ವಶಿಯು ವಿಜ್ಞಾಪಿಸುವಳೆಂ”ದು ಅರಿಕೆಗೈಯ್ಯಲು, ರಾಯನು “ಆಕೆಯು ಮಾತ್ರ ಪರ್ಯುತ್ಸುಕಳಾಗಿರು ವಳೆಂದು ಹೇಳುವೆಯಲ್ಲದೆ, ಪುರೂರವನ ಕಷ್ಟ ವನ್ನು ನೋಡೆಯಲ್ಲ! ನಮ್ಮಿಬ್ಬರಿಗೂ ಪ್ರಣಯವು ಸಮವಾಗಿರುವುದು ಕಾದಿರುವಾಗಲಲ್ಲವೆ, ಎರಡು ಉಕ್ಕಿನ ತುಂಡುಗಳು ಒಂದನ್ನೊಂದು ಹೊಂದಿ ಕೊಳ್ಳುವುವು?” ಎಂದು ಹೇಳಿಕೊಳ್ಳಲು, ಚಿತ್ರಲೇ ಖೆಯು “ಸಖಿ! ಊರ್ವಶಿ! ಇತ್ತ ಬಾ ಪ್ರಿಯತಮನ ಅವಸ್ಥೆಯು ನಿನ್ನದಕ್ಕಿಂತಲೂ ದಾರುಣವಾಗಿರುವುದ ರಿಂದ ನಾನು ಆತನ ದೂತಿಯೇ ಆದೆನೆಂ”ದಳು. ಊರ್ವಶಿಯು ‘ಎಲೆ ಚಂಚಲೆಯೆ! ನನ್ನನ್ನು ಎಷ್ಟು ಬೇಗ ಬಿಟ್ಟೆ?” ಎನ್ನಲು, ಚಿತ್ರಲೇಖೆಯೂ “ಆಗಲಿ, ಇನ್ನೇನು ಒಂದು ಗಳಿಗೆಯೊಳಗಾಗಿ ಯಾರು ಯಾರ ನ್ನು ಬಿಡುವರೆಂಬುವುದು ತಿಳಿಯುವುದು. ಇರಲಿ. ಮೊದಲು ಮುಜರೆ ಮಾಡು” ಎನ್ನಲು, ಊರ್ವಶಿಯು ನಾಚುತ್ತಾ ಮುಂದೆ ಬಂದು “ಮಹಾರಾಜನಿಗೆ ಜಯ ವಾಗಲಿ ಜಯವಾಗಲಿ” ಎಂದು ಮರ್ಯಾದೆ ಮಾಡಲು ರಾಯನು ತುಂಬಿದ ಸುಮ್ಮಾನದಿಂದ “ಸುನ್ದರಿ! ಸಹ ಸ್ರಾಕ್ಷನಿಗೆ ಜಯವಾಗಲಿ ಎನ್ನುತ್ತಿದ್ದವಳು ನನ್ನನ್ನು ಕುರಿತು ಜಯವಾಗಲೆಂದವೇಲೆ ನನ್ನಿಂದ ಸರ್ವವೂ ಜಿತವೇ ಆಯಿತು” ಎಂದುಪಚರಿಸಿ ಕೆಲದಲ್ಲಿ ಕುಳ್ಳಿ ರಿಸಿಕೊಳ್ಳಲು, ಹಾಸ್ಯಪ್ರಿಯನಾದ ಬ್ರಹ್ಮಬಂಧುವು

'ಅಯ್ಯೋ! ನಿಮ್ಮರಾಜ್ಯದಲ್ಲದೇನದು? ರಾಜಸಖನಾದ ಬ್ರಾಹ್ಮಣನಿಗೆ ವಂದಿಸುವುದಿಲ್ಲವೇನು ?'' ಎಂದು ಬಲ ವಂತದಿಂದ ವಂದಿಸಿಕೊಳ್ಳುವನು. ಆ ವೇಳೆಗೆ ದೇವ ದೂತನು "ಎಲೆ ಚಿತ್ರಲೇಖೆ! ಊರ್ವಶಿಯನ್ನು ತ್ವರೆ ಗೊಳಿಸು. ಮರುತ್ಪತಿಯಾದಇಂದ್ರನು ಲೋಕಪಾಲ ರೊಡನೆ ಭರತಮುನಿಯು ನಿಮಗೆ ಕಲಿಸಿಕೊಟ್ಟಿರುವ ಅಷ್ಟರಸಾಶ್ರಯವಾದ ಲಲಿತಾಭಿನಯವನ್ನು ನೋಡ ಲಿಚ್ಛಿಸಿರುವನು.'' ಎಂದು ಉದ್ಘೋಷಿಸಲು ರಾಜನೂ ಅದನ್ನು ಕೇಳಿ "ನೀವು ನಿಮ್ಮೊಡೆಯನ ಅಪ್ಪಣೆಯನ್ನು ನೆರವೇರಿಸುವುದರಲ್ಲಿ ನಾನು ಅಡ್ಡಿಯಾಗತಕ್ಕವನಲ್ಲ. ಆದರೆ ಈ ಜನನನ್ನು ಮಾತ್ರ ಮರೆಯಕೂಡದು.'' ಎಂದು ಕೇಳಿಕೊಂಡು ಬೀಳ್ಕೊಡಲು, ವಿಯೋಗದುಃಖಿ ತೆಯಾದ ಊರ್ವಶಿಯು ರಾಜನನ್ನು ನೋಡುತ್ತಾ ಸಖಿಯೊಡನೆ ಹೊರಟುಹೋಗುವಳು.

ರಾಜನು 'ಇನ್ನು ಕಣ್ಣುಗಳು ಇದ್ದೂ ವ್ಯರ್ಥವೆಂ'ದು ಚಿಂತಿಸಲು, ವಿದೂಷಕನು ಭೂರ್ಜಪತ್ರವನ್ನಾದರೂ ತೋರಿಸೋಣವೆಂದುಕೊಂಡು, ಊರ್ವಶೀದರ್ಶನ ವಿ ಸ್ಮಿತನಾದ ತನ್ನ ಕೈಯ್ಯಿಂದ ತಾನರಿಯದಂತೆಯೇ ಅ ದು ಎಲ್ಲಿಯೋ ಬಿದ್ದುಹೋಗಿರುವುದನ್ನರಿತು, ಅದನ್ನು ಮರೆಸುವುದಕ್ಕೆ 'ವಯಸ್ಯ! ನೀನು ಮಾತ್ರ ದೇಹತ್ಯಾ ಗದ ಯೋಚನೆ ಮಾಡಬೇಡ. ನಿನ್ನಲ್ಲಿ ಊರ್ವಶಿಯು ದೃಢವಾದ ಅನುರಾಗವುಳ್ಳವಳಾಗಿರುವಳು. ಇಲ್ಲಿಂದ ಈಗ ಹೊರಟುಹೋದಮಾತ್ರಕ್ಕೇ ಅವಳು ಈ ರೀತಿ ಯಾದ ಅನುಬಂಧವನ್ನು ಸಡಿಲಪಡಿಸುವುದಿಲ್ಲ'ವೆಂದು

ಧೈರ್ಯ ಹೇಳುವಂತೆ ನಟಿಸುವನು. ರಾಯನೂ 'ಹೌದು. ಆಕೆಯು ಹೋಗುವಾಗ ಬಿಡುವ ನಿಟ್ಟುಸಿರಿನಿಂದ, ಎದೆಯು ಕಂಪಿಸುತ್ತಿತ್ತು. ಅದನ್ನು ನೋಡಿದರೆ "ಶರೀರವು ಪರವಶವು. ಸ್ವವಶವಾದ ಈ ಹೃದಯವನ್ನು ನೀನು ತೆಗೆದುಕೋ ?" ಎಂದಂತೆ ಇದ್ದಿತು.' ಎಂದು ಅದನ್ನೇ ಸಾಧಿಸುವನು. ಇನ್ನು ಯಾವ ವೇಳೆಯಲ್ಲಿ ಆ ಭೂರ್ಜ ಪತ್ರವನ್ನು ಕೇಳುವನೋ ಎಂದು ತನ್ನಲ್ಲಿಯೇ ಮಿಡುಕುತ್ತಿರುವ ವಿದೂಷಕನನ್ನು, ಅರಸನೂ ಬೇರೆ ಉಪಾಯ ತೋರದೆ ಭೂರ್ಜಪತ್ರವನ್ನು ತಾರೆನ್ನಲು, ವಿದೂಷಕನು 'ಇದೇನು? ಎಲ್ಲಿಯೂ ಕಾಣಲೇ ಕಾಣದು. ದಿವ್ಯವಾದ ಆ ಭೂರ್ಜ ಪತ್ರವೂ ಆ ಊರ್ವಶೀಮಾರ್ಗವನ್ನೇ ಹಿಡಿಯಿತೋ?' ಎಂದು ವಿಷಾದಿಸಿ ಅರಸನಿಂದ ಯಾವಾಗಲೂ ನೀನೊಬ್ಬ ಮೊಂಕನೊಂದು ಬಯ್ಯಿಸಿಕೊಂಡು ಅದನ್ನು ಹುಡುಕುತ್ತಿರುವನು.

ಆ ವೇಳೆಗೆ ಸರಿಯಾಗಿ ನಿಪುಣಿಕೆಯಿಂದ ರಾಯನ ಗುಟ್ಟನ್ನು ಅರಿತು ನಿಜಾಂಶವನ್ನು ವಿಚಾರಿಸಬೇಕೆಂದು ತಾನೇ ಪ್ರಮದ ವನಕ್ಕೆ ಬಂದ ಮಹಾರಾಣಿಯ ನೂಪುರಕ್ಕೆ ಈ ಭೂರ್ಜಪತ್ರವು ಸಿಕ್ಕಿಬೀಳುವುದು. ಆಕೆಯು ಅದನ್ನು ಚೇಟಿಯಿಂದ ಓದಿಸಿ ಕೇಳಿ ಜುಗುಪ್ಸೆಪಟ್ಟು ಅದನ್ನು ಕಾಣದೆ ಉದ್ವಿಗ್ನನಾದ ರಾಜನನ್ನು ಅದನ್ನು ಒಪ್ಪಿಸುವಳು. ಆಗ ವಿದೂಷಕನು ಏನು ಮಾಡೋಣವೆಂದ ರಾಜನಿಗೆ 'ಕಳುವು ಮಾಲಿನಿಂದ ಸಿಕ್ಕಿರುವ ಕಳ್ಳನು ಏನು ಹೇಳಬಲ್ಲ'

ನೆಂದು ಹಾಸ್ಯ ಮಾಡಿ, ದೇವಿಯನ್ನು ಕುರಿತು ಒಡತಿಯೆ! ಬೇಗ ಈತನಿಗೆ ಭೋಜನವನ್ನು ಮಾಡಿಸು, ಪಿತ್ತವು ಶಮನವಾಗಿ ಸ್ವಸ್ಥವಾಗಲೆ'ನ್ನುವನು. ರಾಜನ 'ಅಯ್ಯೋ! ಮೂರ್ಖ! ನನ್ನನ್ನು ಬಲವಂತವಾಗಿ ಅಪ ರಾಧಿಯಾಗಿ ಮಾಡುವೆಯೆಂ'ದು ಹೇಳಲು, 'ನಿನ್ನ ಪರಾ ಧವೇನು? ಪ್ರತಿಕೂಲದರ್ಶನೆಯಾಗಿದ್ದೂ ಎದುರಿ ಗಿರುವ ನನ್ನದೇ ಅಪರಾಧವೆಂ' ದು ಹೊರಡುವ ರಾಣಿಯ ಕಾಲಿಗೆ ಬಿದ್ದು, 'ನಾನು ಅಪರಾಧಿಯು, ಕೋಪಗೊಳ್ಳಬೇಡ. ಸೇವ್ಯರಾದಜನರು ಕೋಪಗೊಳ್ಳ ಬೇಕಾದರೆ, ದಾಸನು ಹೇಗೆ ತಾನೇ ನಿರಪರಾಧಿಯಾಗಿ ದ್ದಾನು?' ಎಂದು ಕೇಳಿಕೊಂಡರೂ ದೇವಿಯು ಹಾಗೂ ನಿಲ್ಲದೆ ಹೊರಟು ಹೋಗುವಳು. ವಿದೂಷಕನು 'ದೇವಿ ಯು ಮಳೆಗಾಲದ ನದಿಯಂತೆ ಪ್ರಸನ್ನಳಾಗದೆ ಹೊರ ಟು ಹೋದಳು. ನೀನು ಮೇಲಕ್ಕೇಳು'ಎನ್ನಲು, ರಾಯ ನೆದ್ದು 'ವಯಸ್ಯ! ದಯಿತಜನರ ಅನುನಯವು ಎಷ್ಟು ಪ್ರಿಯವಾಗಿದ್ದರೂ ನೀರಸವಾಗಿದ್ದರೆ,ಅವರಿಗೆಸೊಗಸದು' ಕೃತ್ರಿಮಮಣಿಯು ಅದನ್ನು ತಿಳಿದವರ ಮನಸ್ಸಿಗೆ ಹಿಡಿ ಯುವುದೆ ? ಎಂದು ಹೇಳುವನು. ವಿದೂಷಕನು 'ಹೋ ಗಲಿ. ಅನುಕೂಲವಾಯಿತು. ಕಣ್ಣುಬೇನೆಯವನುಎದು ರಿಗೆ ದೀಪಶಿಖೆಯನ್ನು ಸಹಿಸನು' ಎಂದು ಹೇಳಲು, ರಾಯನು 'ಹಾಗಲ್ಲ. ಊರ್ವಶಿಯಲ್ಲಿ ಅನುರಕ್ತನಾಗಿ ದ್ದರೂ ನನಗೆ ದೇವಿಯಲ್ಲಿ ಮೊದಲಿನ ಬಹುಮಾನವೇ ಇರುವುದು ಅದರಿಂದ ಈಗಾದುದಕ್ಕಾಗಿ ಬಹಳ ವಿಷಾದಿ ಸಿದರೂ, ನಾನು ಕಾಲುಹಿಡಿದು ಬೇಡಿದರೂ ಆಕೆಯು ನಿರಾಕರಿಸಿದಳೆಂಬುದರಿಂದ ಧೈರ್ಯವಾಗಿರುವೆನು '

ಎನ್ನುವನು. ಆಗ ವಿದೂಷಕನು 'ನಿನ್ನ ಧೈರ್ಯ
ವಿರಲಿ. ಹಸಿದ ಬ್ರಾಹ್ಮಣನ ಪ್ರಾಣವನ್ನು ಕಾಪಾಡು
ನಡೆ. ಸ್ನಾನಭೋಜನದ ಕಾಲವಾಯಿತೆ'ಂದು ಹೇಳಿ
ಅರಸನನ್ನು ಕರೆದುಕೊಂಡುಹೋಗುವನು.

ಇಂತಿದು ದ್ವಿತೀಯಾಂಕವು



# ತೃತೀಯಾಂಕವು.

ಭರತಾಶ್ರಮ ಪ್ರಾಂತದಲ್ಲಿ ಭರತರ್ಷಿಯು ದೇವ
ಲೋಕಕ್ಕೆ ನಾಟಕವಾಡಿಸಲು ಹೋಗಿದ್ದಾಗ, ಅಗ್ನಿ
ರಕ್ಷಣಾರ್ಥವಾಗಿ ಆಶ್ರಮದಲ್ಲಿಯೇ ಉಳಿದಿದ್ದ ಗಾಲ
ವನು ಭರತನ ಜತೆಯಲ್ಲಿ ಹೋಗಿದ್ದ ಪೈಲವನನ್ನು
ಕುರಿತು 'ಸರಸ್ವತಿಯು ಬರೆದ ನಾಟಕವು ಹೇಗಿದ್ದಿತು?
ಸಭೆಯವರು ಅದನ್ನು ಮೆಚ್ಚಿದರೆ?' ಎಂದು ಕೇಳಲು
ಅವನು 'ಪರಿಷತ್ತು ಆರಾಧಿತವಾಯಿತೋ ಇಲ್ಲವೋ
ತಿಳಿಯೆನು. ಆದರೆ ಊರ್ವಶಿಯು ಮಾತ್ರ ಅಲ್ಲಲ್ಲಿ
ಸ್ವಲ್ಪ ಉನ್ಮಾದಿತೆಯಾಗಿದ್ದಳು. ಲಕ್ಷ್ಮಿಯ ಪಾತ್ರ
ವನ್ನು ವಹಿಸಿದ್ದ ಊರ್ವಶಿಯನ್ನು ವಾರುಣಿಯ
ಪಾತ್ರವನ್ನು ವಹಿಸಿದ್ದ ಮೇನಕೆಯು 'ಇದೋ ಲೋಕ
ತ್ರಯವಿಖ್ಯಾತರಾದ ಪುರುಷರೂ, ಕೇಶವನೂ,
ಲೋಕಪಾಲರೂ ಬಂದಿರುವರು. ಇವರಲ್ಲಿ ನಿನಗೆ
ಯಾರ ಮೇಲೆ ಮನಸ್ಸು?' ಎಂದು ಕೇಳಲು, ಪುರ

ಷೋತ್ತಮನೆಂಬುದಕ್ಕೆ ಪ್ರತಿಯಾಗಿ ಪುರೂರವನೆಂದು ಆಕೆಯ ಬಾಯಲ್ಲಿ ಬಂದುಬಿಟ್ಟಿತು. ಆಗ ಉಪಾಧ್ಯಾಯನು 'ನನ್ನ ಉಪದೇಶವನ್ನು ಮೀರಿದೆ. ನಿನಗೆ ದಿವ್ಯಲೋಕವಾಸವು ತಪ್ಪಿಹೋಗಲಿ' ಎಂದು ಶಾಪ ಕೊಟ್ಟನು. ನಾಚಿಕೆಯಿಂದ ತಲೆಬಗ್ಗಿ ನಿಂತಿದ್ದ ಊರ್ವಶಿಯನ್ನು ನೋಡಿ ಪುರಂದರನು ಕೂಡಲೆ 'ನಿನ್ನ ಮನಸ್ಸು ನಟ್ಟಿರುವ ಆ ರಾಜರ್ಷಿಯು ನನಗೆ ರಣಸಹಾಯಕನಾದ ಸಖನು. ಆತನಿಗೆ ನಾನೂ ಒಂದು ಪ್ರಿಯವನ್ನು ಮಾಡಬೇಕಾದುದುಂಟು. ಆದರಿಂದ ಆತನು ಇಲ್ಲಿ ಪಡೆದ ಸಂತಾನವನ್ನು ನೋಡುವವರೆಗೂ ನೀನು ಆತನಲ್ಲಿದ್ದು ಬಾ' ಎಂದು ಆ ಶಾಪವನ್ನೇ ಅನುಗ್ರಹ ಮಾಡಿದನು' ಎಂದು ಹೇಳುತ್ತಾ 'ಮಾತನಾಡುತ್ತ ಅಭಿಷೇಕದ ವೇಳೆಯು ಮೀರಿತು. ನಡೆ, ಎಂದು ಉಪಾಧ್ಯಾಯನ ಬಳಿಗೆ ಹೊರಟುಹೋಗುವರು.

ಅನಂತರ ಅಂತಃಪುರದ ಕಂಚುಕಿಯು ಬಂದು 'ವ್ರತಾಚರಣೆಗಾಗಿ ಈ ಮೊದಲೇ ಕೋಪವುಳಿದು ನಿಪುಣಿಕೆಯ ಮೂಲಕವಾಗಿ ಮಹಾರಾಜನನ್ನು ಯಾಚಿಸಿರುವೆನು. ಅದನ್ನೇ ಮತ್ತೆ ವಿಜ್ಞಾಪಿಸು ಎಂದು ನೇಮದಲ್ಲಿರುವ ಕಾಶೀರಾಜಪುತ್ರಿಯ ಅಪ್ಪಣೆಯಾಗಿರುವುದು. ಇದೋ ನಾನೂ ಹೋಗಿ, ಸಂಧ್ಯಾಕಾರ್ಯವನ್ನು ಪೂರೈಸಿರುವ ಮಹಾರಾಜನನ್ನು ನೋಡುವೆನು' ಎಂದು ಮುಂದೆ ನಡೆದು, 'ಈ ಸಂಧ್ಯಾಕಾಲವು ರಾಜವಸತಿಯಲ್ಲಿ ರಮಣೀಯವಾಗಿರುವುದು

ಶಾಸಯಷ್ಟಿಗಳಲ್ಲಿ ನವಿಲುಗಳು ತೂಕಡಿಸುತ್ತ ಕೆತ್ತಿ ದಂತೆ ಕುಳಿತಿರುವುವು. ಗವಾಕ್ಷಗಳಲ್ಲಿ ಹೊಗೆಯು ಹೊರಹೊಮ್ಮುತ್ತಿರಲು, ಇಲ್ಲಿ ಪಾರಿವಾಳದ ಸಂದೇ ಹವು ತೋರುತ್ತಿರುವುದು. ಪರಿಶುದ್ಧವಾದ ಅಂತ ರಂಗವುಳ್ಳ ಈ ವೃದ್ಧರು ಪುಷ್ಪಬಲಿಸಮೇತವಾದ ಸ್ಥಳಗಳಲ್ಲಿ ಸಂಧ್ಯಾ ಮಂಗಳ ದೀಪಿಕೆಗಳನ್ನಿಡುತ್ತಿರು ವರು ಎಂದು ಮುಂದೆ ನೋಡಿ 'ಇದೋ ದೇವನಿತ್ತ ಕಡೆಯೇ ಬಿಜಮಾಡಿಸುತ್ತಿರುವನು. ಪರಿಜನರು ದೀವ ಟಿಗೆಗಳನ್ನು ಹಿಡಿದಿರಲು, ಸುತ್ತುವರದಿರುವ ಚಂಡು ಮಲ್ಲಿಗೆಗಳು ಹೂವು ಬಿಟ್ಟಿರಲು ರೆಕ್ಕೆಯು ಒಡಿತ ವಿಲ್ಲದೆಯೇ ನಡೆದುಬರುತ್ತಿರುವ ಗಿರಿಯಂತಿರುವನು' ಎಂದು ವರ್ಣಿಸಿ 'ಇರಲಿ ಈತನು ಬರುತ್ತಿರುವ ಮಾರ್ಗದಲ್ಲಿ ನಿಂತು ಈತನನ್ನು ನಿರೀಕ್ಷಿಸುವೆನು' ಎಂದು ನಿಂತುಕೊಳ್ಳುವನು.

ಅನಂತರ ರಾಜನು "ಕಾರ್ಯಾಂತರದಿಂದ ದಿನವ ನ್ನೆಲ್ಲ ಅತಿ ಕಷ್ಟದಿಂದ ಕಳೆದುದಾಯಿತು. ಯಾವು ದೊಂದು ವಿನೋದಕ್ಕೂ ಅವಕಾಶ ಕೊಡದ ರಾತ್ರಿ ಯನ್ನು ಹೇಗೆ ತಾನೇ ಕಳೆಯುವುದು?" ಎಂದು ಚಿಂತಿಸುತ್ತ ಮುಂದೆ ಬಂದು, ಅರಿಕೆ ಮಾಡಿದ ಕಂಚು ಕಿಯ ವಿಜ್ಞಾಪನೆಯನ್ನು ಕೇಳಿ 'ದೇವಿಯರಿಷ್ಟದಂ ತೆಯೇ ಆಗಲಿ' ಎಂದು ಮನ್ನಿಸಿ, ವಿದೂಷಕನನ್ನು ನೋಡಿ 'ವಯಸ್ಯ ! ದೇವಿಯು ವ್ರತವನ್ನು ಆಚರಿ ಸುವ ಕಾರಣವಾದರೂ ಏನಿರಬಹುದು?' ಎಂದು ವಿಚಾ ರಿಸುವನು. ಬುದ್ಧಿವಂತನಾದ ಅವನೂ 'ನೀನು

ಕಾಲುಹಿಡಿದು ಅಡ್ಡಬಿದ್ದಾಗ ದೇವಿಯು ತಿರಸ್ಕರಿಸಿ ಹೊರಟುಹೋದಳು. ಆ ಮೇಲೆ ಪಶ್ಚಾತ್ತಾಪ ಹುಟ್ಟಿ ಅದನ್ನು ಮರೆಸುವುದಕ್ಕಾಗಿ ಈ ವ್ರತವನ್ನಾಚರಿಸು ವಳು' ಎಂದು ಹೇಳಲು, 'ಇರಬಹುದು' ಎಂದು, ರಾಜನೂ ವಿದೂಷಕನೂ ಮಣಿಹರ್ಮ್ಯಕ್ಕೆ ಬರು ವರು.

ಗಂಗಾ ತರಂಗಗಳಿಂದ ಶೀತಲವಾದ ಸ್ಫಟಿಕದ ಹಂತಗಳನ್ನು ಹತ್ತಿ, ಸದಾ ರಮ್ಯವಾದ, ಅಲ್ಲಿಗೆಬಂದು ಕುಳಿತುಕೊಂಡು 'ಇನ್ನೇನು ಚಂದ್ರೋದಯವಾಗು ವುದು' ಎಂದು ವಿದೂಷಕನು ಸೂಚಿಸಲು 'ಅಹುದು. ಉದಯಾದ್ರಿಯನ್ನೇರಿ ಬರುತ್ತಿರುವ ಚಂದ್ರನ ಕಿರಣ ದಿಂದ ಕತ್ತಲು ದೂರವಾಗುತ್ತಿರಲು ಪೂರ್ವದಿಶೆಯು ಓಸರಿಸಿದ ಮುಂಗುರುಳುಳ್ಳ ಹೆಣ್ಣಿಂತೆ ಕಣ್ಣಿಗೆ ಒಣ್ಣ ವಾಗಿರುವುದು' ಎಂದು ವರ್ಣಿಸುವನು. ವಿದೂಷಕ ನೂ 'ಇದೋ, ಮುರಿದು ಹೋದ ಕಡುಬಿನಂತೆ ಸೊಗ ಸಾಗಿರುವ ಈ ಔಷಧೀಶನು ಹುಟ್ಟಿದನು.' ಎಂದು ತೋರಿಸಲು, 'ಹೊಟ್ಟೆಬಾಕನಾದವನಿಗೆ ಮೂರು ಹೊ ತ್ತೂ ತಿಂಡಿಯ ಯೋಚನೆಯೇ!' ಎಂದು ರಾಜನು ಮೆಲ್ಲಗೆ ನಕ್ಕು, 'ಸಜ್ಜನರ ಕ್ರಿಯೆಯು ನಡೆಯಲೆಂದು ಸೂರ್ಯನನ್ನು ಪ್ರವೇಶಿಸುವ, ಪಿತೃಗಳನ್ನೂ ದೇವತೆ ಗಳನ್ನೂ ಸುಧೆಯಿಂದ ತೃಪ್ತಿಗೊಳಿಸುವ, ರಾತ್ರಿಯಲ್ಲಿ ಮೋಹದಿಂದ ಮೂರ್ಛೆಗೆ ಸಂದವರನ್ನು ಶಿಕ್ಷಿಸುವ, ಈಶ್ವರನ ತಲೆಯಲ್ಲಿರುವ ನಿನಗೆ ನಮಸ್ಕಾರ' ಎಂದು ಚಂದ್ರನಿಗೆ ಕೈಮುಗಿದು ನಮಸ್ಕಾರಮಾಡಿ 'ಬ್ರಾಹ್ಮಣ

ನಿಂದ ನಿನ್ನ ಪಿತಾಮಹನು ಹೇಳಿಸುವನು ನೀನು ಆಸನದಲ್ಲಿ ಕುಳಿತುಕೋ, ನಾನೂ ಕುಳಿತುಕೊಳ್ಳುವೆನು.' ಎಂದು ವಿದೂಷಕನು ಹೇಳಲು, ಅದರಂತೆಯೇ ಕುಳಿತುಕೊಂಡು, 'ಚಂದ್ರಿಕೆಯು ಚೆನ್ನಾಗಿ ಬೆಳಗುತ್ತಿರಲು, ಈ ದೀಪಗಳು ಬೇರೆಯೇಕೆ?'' ಎಂದವುಗಳನ್ನು ನಿವಾರಿಸುವನು.

ದೇವಿಯು ಬರುವುದು ಒಂದು ಗಳಿಗೆ ತಡವಾಗಲು, 'ವಯಸ್ಯ! ವಿಷಮವಾದ ಅರೆಗಳಲ್ಲಿ ಉರುಳಿ, ಮುಂದಕ್ಕೆ ಹರಿಯಲಾರದ ಹೊಳೆಯು ಹೊನಲಂತೆ, ಕೈಸೇರಿದ್ದ ಸಮಾಗಮಸುಖಕ್ಕೆ ವಿಘ್ನವೊದಗಲು ಆಶೆಯೂ ಮುಂದೆ ಹೋಗಲಾರದೆ ತಪಿಸುತ್ತಿರುವುದು.'' ಎಂದು ರಾಜನು ಹೇಳಿಕೊಳ್ಳುವನು ವಿದೂಷಕನೂ, 'ನಿನ್ನ ಅವಸ್ಥೆಯು ಕಣ್ಣಿಗೆ ಕಾಣತಕ್ಕುದಲ್ಲ. ಆದರೂ ಆಕೆಯು ಆ ವಿಧವಾದ ಗಾಢಾನುರಾಗವನ್ನು ತಿಳಿದಿರುವೆಯಾಗಿ, ಆಶಾತಂತುವಿನಿಂದ ಆತ್ಮವನ್ನು ಹಿಡಿದಿರಬಹುದು. ಅಲ್ಲದೆ ನಿನಗೂ ಕೂಡ ವ್ಯೈಯ್ಯ ಬಡವಾಗುತ್ತಿದ್ದರೂ ಕಳೆಯೇರುತ್ತಲೇ ಇರುವುದು. ಇದರಿಂದ ನಿಮ್ಮಿಬ್ಬರಿಗೂ ಖಂಡಿತ ಸಮಾಗಮವಾಗಲೇ ಬೇಕು. ಎಂದು ಕಾಣುತ್ತದೆ' ಎಂದು ಹೇಳಲು, ರಾಯನೂ 'ಹೆಚ್ಚಾದ ವ್ಯಥೆಯುಳ್ಳ ನನ್ನನ್ನು ಆಶಾಜನಕವಾದ ಮಾತಿನಿಂದ ನೀನು ಸಂತೈಸುವಂತೆಯೇ ಈ ಬಲದೋಳೂ ಕುಣಿದು ಕುಣಿದು, ನಂಬಿಸುತ್ತಿರುವುದು' ಎಂದು ಆಶೆಯಿಂದ ಕುಳಿತುಕೊಳ್ಳುವನು.

ಆ ವೇಳೆಗೆ, ಆಕಾಶಯಾನದಲ್ಲಿ ಅಭಿಸಾರಿಕೆಯ

ವೇಷವುಳ್ಳ ಊರ್ವಶಿಯು ಚಿತ್ರಲೇಖೆಯೊಡನೆ ಬಂದು
'ಸಖಿ! ಮುಕ್ತಾಭರಣ ಭೂಷಿತವಾಗಿ, ನೀಲವಸ್ತ್ರವನ್ನು
ಹೊದೆದುಕೊಂಡಿರುವ ಈ ಅಭಿಸಾರಿಕಾ ವೇಷವು ನಿನ
ಗೆ ಸೊಗಸಿತೆ'? ಎಂದು ಕೇಳಲು, ಚಿತ್ರಲೇಖೆಯು
'ಹೊಗಳಲು ನನಗೆ ವಾಗ್ವಿಭವವಿಲ್ಲ. ಆದರೂ ಕೇಳು.
ನನ್ನ ಮನಸ್ಸು ನಾನೇ ಆ ಪುರೂರವನಾಗಲಿಲ್ಲವಲ್ಲ
ಎಂದು ಚಿಂತಿಸುತ್ತಿರುವುದು' ಎಂದು ಹೇಳುವಳು.
ಮತ್ತೆ ಊರ್ವಶಿಯು 'ನಾನು ಅಸಮರ್ಥೆಯಾಗಿರು
ವೆನು. ಆತನನ್ನಾದರೂ ಬೇಗ ಕರೆದು ತಾ. ಇಲ್ಲವಾದರೆ
ನನ್ನನ್ನಾದರೂ ಆ ಸೌಭಾಗ್ಯವಂತನ ಬಳಿಗೆ ಕರೆದು
ಕೊಂಡು ಹೋಗು' ಎಂದು ಕೇಳಿಕೊಳ್ಳಲು, ಚಿತ್ರಲೇ
ಖೆಯು "ಇದೋ ಯಾಮಿನೀ ಎಂಬ ಯಮುನೆಯಲ್ಲಿ
ಪ್ರತಿಬಿಂಬಿಸಿರುವ ಕೈಲಾಸ ಶಿಖರದಂತೆ ಹೊಳೆಯುತ್ತಿ
ರುವ ನಿನ್ನ ಪ್ರಿಯನರಮನೆಗೆ ಆಗಲೆ ಬಂದಿರುವೆ
ವೆಂದು" ತೋರಿಸಲು "ಹಾಗಾದರೆ ಪ್ರಭಾವದಿಂದ
ನನ್ನಹೃದಯಚೋರನೆಲ್ಲಿರುವನೊ ನೋಡು" ಎಂದ
ಊರ್ವಶಿಗೆ, ಇವಳೊಡನೆ ಹುಡುಗಾಟವಾಡಬೇಕೆಂದು
ಕೊಂಡು, "ಆತನಿದೋ ಕಾಣುತ್ತಿರುವನು; ಉಪಭೋ
ಗಕ್ಕೆ ಅವಕಾಶವು ದೊರೆತಿರಲು, ಮನೋರಥಲಬ್ಧವಾದ
ಪ್ರಿಯಾ ಸಮಾಗಮಸುಖವನ್ನು ಅನುಭವಿಸುತ್ತ ಕುಳಿ
ತಿರುವನು" ಎಂದು ಹೇಳಲು, "ಹೋಗೆ, ನನ್ನ
ಮನಸ್ಸು ನಂಬುವುದಿಲ್ಲ. ಮನಸ್ಸಿನಲ್ಲೇನೋ ಇಟ್ಟು
ಕೊಂಡು, ಬಾಯಿಗೆ ಬಂದಂತೆ ಹೇಳುತ್ತಿರುವೆ. ಆತನು
ನನ್ನ ಮನಸ್ಸನ್ನು ಈ ವೇಳೆಗಾಗಲೇ ಅಪಹರಿಸಿರು
ವನು" ಎಂದು ಹೇಳುತ್ತಿರುವ ಊರ್ವಶಿಯೊಡನೆ

ಮಣಿಹರ್ಮ್ಯ ಪ್ರಾಸಾದ ಗತನಾದ ಪುರೂರವನ ಬಳಿಗೆ ಬರುವಳು.

ಅಲ್ಲಿ ರಾತ್ರಿಯೊಡನೆ ಹೆಚ್ಚಾದ ಮದನ ಬಾಧೆಯನ್ನು ಅನುಭವಿಸುತ್ತಾ, "ಕುಸುಮಶಯನವೂ, ಚಂದ್ರಕಿರಣಗಳೂ, ದೇಹಕ್ಕೆಲ್ಲ ಲೇಪಿಸಿರುವ ಶ್ರೀಗಂಧವೂ, ತಣ್ಣಗಾಗಲೆಂದು ಕೈಯ್ಯಲ್ಲಿ ಹಿಡಿದುಕೊಂಡ ರತ್ನಯಷ್ಟಿಗಳೂ, ಹೋಗಲಾಡಿಸದ ಈ ಮನ್ಮಥ ರೋಗವನ್ನು ಶಮನ ಮಾಡಬೇಕಾದರೆ ದಿವ್ಯಾಂಗನೆಯಾದ ಆ ಊರ್ವಶಿಯಾದರೂ ಬೇಕು, ಅಥವಾ ಆಕೆಗೆ ಸಂಬಂಧಪಟ್ಟ ಕಥೆಯಾದರೂ ಆಗಬೇಕು" ಎಂದು ಹೇಳಿಕೊಳ್ಳುವ ರಾಯನನ್ನು ಕುರಿತು ವಿದೂಷಕನು 'ಹೌದು ಹೌದು. ನನಗೂ ಹಾಗೆಯೇ! ಮಾವಿನ ಹಣ್ಣಿನ ಶ್ರೀಕರಣೆಯು ಸಿಕ್ಕದೆ ಹೋದಾಗಲೆಲ್ಲಾ ಅದರ ಚಿಂತನದಿಂದಲೇ ಸುಖವನ್ನು ಹೊಂದುವೆನು' ಎಂದು ಹೇಳುವನ. ರಾಯನೂ ಹೂಗುಟ್ಟಿಕೊಂಡು "ಅಯ್ಯಾ! ರಥವು ಬೆಟ್ಟದ ಹಾದಿಯಲ್ಲಿ ಕುಲುಕಿದಾಗ, ಆಕೆಯ ಶರೀರವನ್ನು ತಗುಲಿದ ಈ ತೋಳೊಂದನ್ನು ಬಿಟ್ಟು ಮಿಕ್ಕ ಮೈಯೆಲ್ಲಾ ಭೂಮಿಗೆ ಭಾರವು' ಎಂದು ಹಂಬಲಿಸುತ್ತಿರುವುದನ್ನು ಮರೆಯಲ್ಲಿದ್ದ ಊರ್ವಶಿಯೂ ಕೇಳಿ - ಇನ್ನು ತಡಮಾಡುವುದು ಸರಿಯಲ್ಲವೆಂದು ಮುಂದೆ ಹೋಗಿ ನಿಂತು, ಮಹಾರಾಜನು ತನ್ನನ್ನು ಪಚರಿಸದಿರಲು, "ಚಿತ್ರಲೇಖೆ! ಕಣ್ಣು ಮುಂದೆಯೇ ನಿಂತಿದ್ದರೂ ಮಹಾರಾಜನು ನನ್ನಲ್ಲಿ ಉದಾಸೀನನಾಗಿರುವನು' ಎಂದು ವಿಷಾದಿಸಲು,

ಚಿತ್ರಲೇಖೆಯು "ಆತುರಗಾರಳೆ! ನೀನಿನ್ನೂ ತಿರಸ್ಕರಿಣಿಯನ್ನು ಪರಿತ್ಯಜಿಸಲಿಲ್ಲ." ಎಂದು ಸಮಾಧಾನ ಪಡಿಸುವಳು.

ಆ ವೇಳೆಗೆ ನೈಪಥ್ಯದಲ್ಲಿ ರಾಜಪತ್ನಿಯು ಬರುತ್ತಿರುವಳೆಂದು ಕಲಕಲವಾಗಲು, ಸರ್ವರೂ ಯಥಾಯಥಾ ಸುಸ್ಥಿತರಾಗುವರು ವಿಷಣ್ಣೆಯಾದ ಊರ್ವಶಿಯನ್ನು ಚಿತ್ರಲೇಖೆಯು "ಏಕೆ ಚಿಂತಿಸುವೆ? ಕೊಂಚ ಕಣ್ಮರೆಯಾಗಿಯೇ ಇರು. ರಾಜಪತ್ನಿಯು ನೇಮದಲ್ಲಿರುವಳೆಂದು ಆಕೆಯ ವಸ್ತ್ರಭೂಷಣಗಳು ಸೂಚಿಸುವುವು. ಆದುದರಿಂದ ಈಕೆಯು ಬಹಳ ಹೊತ್ತು ಇಲ್ಲಿರಲಾರಳು" ಎಂದು ಮತ್ತೆ ಸಮಾಧಾನ ಪಡಿಸುವಳು; ಆಗ ದೇವಿಯೂ ಪೂಜಾ ಪರಿಕರಗಳನ್ನು ತರುತ್ತಿರುವ ಪರಿಜನರೊಡನೆ ಬರಲು, ವಿದೂಷಕನು 'ನನಗೆ ಸ್ವಸ್ತಿವಾಚನವನ್ನು ಕೊಡುವಳು ಚಂದ್ರವ್ರತವೆಂಬ ನೆಪದಿಂದ ನಿನ್ನ ಮೇಲಿನ ಕೋಪವನ್ನು ಬಿಟ್ಟಿರುವಳು. ಆದರಿಂದ ಈಗ ಈ ದೇವಿಯನ್ನು ನೋಡಿದರೆ ಎಷ್ಟೋ ಸಂತೋಷವಾಗುವುದು' ಎಂದು ರಾಯನಿಗೆ ಅರಿಕೆ ಮಾಡಲು, ಆತನೂ 'ಎರಡೂ ಸರಿಹೋಗುವುದು, ಈಗ ಈಕೆಯು ಬಿಳಿಯ ಬಟ್ಟೆಯನ್ನುಟ್ಟು, ಅರಿಶಿನ ಕುಂಕುಮಗಳನ್ನು ಮಾತ್ರವಿಟ್ಟು, ಪವಿತ್ರವಾದ ಗರಿಕೆಯ ಹುಲ್ಲನ್ನು ಮುಂಗುರಳಲ್ಲಿ ಮುಡಿದು, ವ್ರತವೆಂಬ ನೆಪದಿಂದ ಸರ್ವವನ್ನೂ ಬಿಟ್ಟು, ನನ್ನಲ್ಲಿ ಪ್ರಸನ್ನೆಯಾಗಿರುವುದನ್ನು ತನ್ನ ತನುವೇ ತೋರುತ್ತಿರಲು ಒಪ್ಪು

ತ್ತಿರುವಳು' ಎಂದು ವಿದೂಷಕನ ಮಾತನ್ನು ಅನುಮೋದಿಸುತ್ತಿರಲು, ದೇವಿಯೂ ಪರಿಜನರೂ ಬಂದು ರಾಯನಿಗೆ ಪೂಜೆ ಮಾಡಿ ನಿಲ್ಲುವರು ರಾಜನು ದೇವಿಗೆ ಸ್ವಾಗತವೆನ್ನುವಾಗ, ಮರೆಸಿ ಕೊಂಡು ಅಲ್ಲಿಯೇ ನಿಂತಿದ್ದ ಊರ್ವಶಿಯು "ದೇವೀಶಬ್ದವು ಈಕೆಗೆ ತಕ್ಕದ್ದು. ಕಾಂತಿಯಲ್ಲಿ ಯೂ, ಸೊಗಸಿನಲ್ಲಿಯೂ, ಈಕೆಯು ಶಚೀದೇವಿಗೆ ಯಾವ ತೆರದಲ್ಲೂ ಕಡಿಮೆಯಾದವಳಲ್ಲ' ಎಂದು ಅಸೂಯೆಯನ್ನು ಬಿಟ್ಟು ಒಪ್ಪಿಕೊಳ್ಳುವಳು. ದೇವಿ ಯು 'ಆರ್ಯಪುತ್ರನನ್ನು ಮುಂದಿಟ್ಟುಕೊಂಡು ಯಾ ವುದೋ ವ್ರತವನ್ನು ಮಾಡಬೇಕೆಂದಿರುವೆನು. ಆದ ರಿಂದ ಒಂದು ಗಳಿಗೆ ಕಷ್ಟವನ್ನು ಸಹಿಸಬೇಕು' ಎಂದು ವಿಜ್ಞಾಪಿಸಿಕೊಳ್ಳುವಳು ರಾಯನೂ "ಕಷ್ಟವೇನೂ ಇಲ್ಲ ಮತ್ತು ಅನುಗ್ರಹವನ್ನು ಮಾಡಿದಂತಾಯಿತು." ಎಂದುಪಚಾರದ ಮಾತನಾಡಲು, ವಿದೂಷಕನೂ "ಈ ರೀತಿಯಾದ ಸ್ವಸ್ತಿವಾಚನಗಳಿಂದ ನನಗೆ ಬೇಕಾ ದಷ್ಟು ಕಷ್ಟವಾಗಲಿ. ಎಂದು ಸೇರಿ ನುಡಿಯುವನು. ರಾಯನು ನಿಪುಣಿಕೆಯಿಂದ ಈ ದೇವಿಯು ಆಚರಿ ಸುವುದು ಪ್ರಿಯ ಪ್ರಸಾದನವೆಂದರೆ, ಬೇಕಾದವರನ್ನು ಒಲಿಸಿಕೊಳ್ಳುವುದು ಎಂಬ ವ್ರತವೆಂದು ಕೇಳಿ, 'ದೇವಿ! ಹಾಗಾದರೆ, ನಿನ್ನ ಪ್ರಸಾದವನ್ನೇ ಬಯಸುತ್ತಿರುವ ದಾಸ ಜನವನ್ನು ಮತ್ತೆ ಒಲಿಸಿಕೊಳ್ಳಬೇಕೆಂದು ತಾವರೆಯಂತೆ ಕೋಮಲವಾದ ನಿನ್ನ ದೇಹವನ್ನು ಈ ವ್ರತದಿಂದ ಅಕಾರಣವಾಗಿ ತಾಪ ಪಡಿಸುವೆ" ಎಂದು ಹೇಳಿಕೊಳ್ಳಲು, ಊರ್ವಶಿಯು ಅದನ್ನು ಸಹಿಸ

ಲಾರದೆ ಬೇರೆ ಕಡೆ ತಿರುಗಿ "ಈತನಿಗೆ ಈಕೆಯಲ್ಲಿ ಬಲು ಬಹುಮಾನ"ವೆನ್ನುವಳು. ಚಿತ್ರಲೇಖೆಯು "ಎಲೆ ಮುಗ್ಧೆ! ಮತ್ತೊಬ್ಬಳಿಗೆ ಮನಸ್ಸು ಕೊಟ್ಟಿರುವ ನಾಗರಕನು ಹೆಂಡತಿಯಲ್ಲಿ ಬಹು ದಾಕ್ಷಿಣ್ಯವನ್ನು ತೋರಿಸುವನೆಂ"ದು ಸಮಾಧಾನ ಮಾಡುವಳು. ದೇವಿಯೂ "ರಾಯನು ನನ್ನಲ್ಲಿ ಹೀಗೆ ಅನುಗ್ರಹ ಮಾಡಿರುವುದು ಈ ವ್ರತದ ಮಹಿಮೆ"ಯೆಂದು ಹೇಳಿ, ರೋಹಿಣೀ ಸಹಿತನಾದ ಚಂದ್ರನನ್ನು ಪೂಜೆಗೈದು ಮಾಣವಕನಿಗೂ ಕಂಚುಕಿಗೂ ವಾಯನವನ್ನೂ ಕೊಟ್ಟು ಅವರ ಆಶೀರ್ವಾದವನ್ನು ಪಡೆದು, ಪತಿಗೂ ಪೂಜೆ ಮಾಡಿ, "ಈ ರೋಹಿಣೀ ಚಂದ್ರರೆಂಬ ದೇವತಾಮಿಥುನವೇ ಸಾಕ್ಷಿ. ಆರ್ಯಪುತ್ರನ ಪ್ರಸಾದವನ್ನು ಪಡೆದುಕೊಳ್ಳುವೆನು. ಇಂದಿನಿಂದ ಆರ್ಯಪುತ್ರನು ತನಗೆ ಬೇಕಾದವಳೊಡನೆಯೂ, ತನ್ನನ್ನು ಕಾಮಿಸಿದವಳೊಡನೆಯೂ, ಸಹ ಯಾವ ಪ್ರತಿಬಂಧಕವೂ ಇಲ್ಲದೆ ವರ್ತಿಸಬಹುದು" ಎಂದು ಪ್ರತಿಜ್ಞೆ ಮಾಡುವಳು. ಊರ್ವಶಿಯು ಅದನ್ನು ಕೇಳಿ ಅಲ್ಲೇ ಕರಗಿಹೋಗುವಳು. ಚಿತ್ರಲೇಖೆಯು, ಮಹಾನುಭಾವೆಯೂ ಪತಿವ್ರತೆಯೂ ಆದ ಈಕೆಯಿಂದ ಅನುಜ್ಞೆಯಾಗಿರಲು, ಇನ್ನು ನಿನಗೆ ಯಾವ ತಡೆಯೂ ಇಲ್ಲದೆ ಪ್ರಿಯನು ದೊರೆಯುವ'ನೆಂದು ಧೈರ್ಯ ಪಡಿಸುತ್ತಿರಲು ವಿದೂಷಕನು ಮರೆಯಲ್ಲಿ, 'ಕೈ ತಪ್ಪಿ ಮತ್ಸ್ಯವೂ ಓಡಿಹೋದರೆ ಬೆಸ್ತನೂ, 'ಹೋಗು ಧರ್ಮ ಬಂದಿತೆನ್ನುವನು' ಎಂದು, ಪ್ರಕಾಶವಾಗಿ, 'ಒಡತಿ! ಹಾಗಾದರೆ ಒಡೆಯನು ಉದಾಸೀನನಾಗಿರುವನೋ,? ಎಂದು ಕೇಳಲು,

ದೇವಿಯು "ಮೂಢ! ನನ್ನ ಸುಖವಿಲ್ಲದಿದ್ದರೂ ಹೆ
ಗೇ; ಆರ್ಯ ಪುತ್ರನಿಗೆ ಸುಖವಾಗಲೆಂದು ಬಯು
ವವಳು ನಾನು. ಇಷ್ಟರಿಂದಲೇ ಆತನು ನ
ಪ್ರಿಯನೋ ಅಲ್ಲವೋ ತಿಳಿದುಕೋ' ಎಂದ, ಹೇ
"ಎಲೆ! ಅಸಹನೇ! ನನ್ನನ್ನು ಅನ್ಯಳಿಗಾದರೂ
ಡು. ದಾಸನ ದಾಸನನ್ನಾಗಿಯಾದರೂ ಮಾಡಿಕೊ
ನೀನು ನನ್ನ ನಡತೆಯಲ್ಲಿ ಅನುಮಾನ ಪಡುತ್ತಿರು
ಆದರೆ ನಾನು ಮಾತ್ರ ಹಾಗಿಲ್ಲ." ಎಂದು ಹೇ
ಕೊಳ್ಳುವ ರಾಜನನ್ನು ಗಣಿಸದೆ, 'ಹೇಗಾದ
ಆಗಲಿ ವಿಹಿತವಾದಂತೆ ವ್ರತವನ್ನಾಚರಿಸಿದು
ಯಿತು. ಬನ್ನಿ ಹೋಗೋಣ.' ಎಂದು ಪರಿಜ
ರೊಡನೆ ಹೊರಟು ಹೋಗುವಳು.

ಊರ್ವಶಿಯು ಇದೆಲ್ಲವನ್ನೂ ನೋಡಿ 'ಸ
ರಾಜರ್ಷಿಯಾದರೋ ಪ್ರಿಯಕಳತ್ರನು. ನಾ
ದರೋ ಮನಸ್ಸನ್ನು ಹಿಂತಿರುಗಿಸಲಾರೆನು' ಎಂ
ವ್ಯಥೆಪಡುತ್ತಿರಲು, ರಾಯನು 'ವಯಸ್ಯ! ದೇವಿಯ
ಹೊರಟುಹೋದಳು' ಎನ್ನಲು ವಿದೂಷಕನು 'ಹ
ಏನು ಹೇಳಬೇಕೆಂದಿರುವೆಯೊ ಅದನ್ನು ಸ್ವೇಚ
ವಾಗಿ ಹೇಳು. ಅಸಾಧ್ಯವೆಂದು ತಿಳಿದು, ರೋ
ಯನ್ನು ಕೈಬಿಡುವ ವೈದ್ಯನಂತೆ ದೇವಿಯೂ ನಿನ್ನನ
ತೊರೆದು ಹೋದಳು' ಎನ್ನಲು, ರಾಜನು 'ವಯಸ
ಗುಟ್ಟಾಗಿ ಬರುವ ಆ ಊರ್ವಶಿಯು ಕಾಲುಕಡಗ
ಸದ್ದಾದರೂ ಕೇಳಬಾರದೆ? ಆಕೆಯು ಹಿಂದಿನಿಂ
ಬಂದು ನನ್ನ ಕಣ್ಣು ಮುಚ್ಚಬಾರದೆ? ಈ ಮಾಡದ

ಳಿದು ಲಜ್ಜೆಯಿಂದ ಮುಂಬರಿಯಲಾರದ ಆಕೆಯನ್ನು ಚತುರೆಯಾದ ಆ ಸಖಿಯಾದರೂ ನನ್ನ ಸಮೀಪಕ್ಕೆ ಒಂದೊಂದು ಹೆಜ್ಜೆಯಾಗಿ ಕರೆದುತರಬಾರದೆ?' ಎಂದು ತನ್ನ ಆಶೆಯನ್ನು ಹೇಳಿಕೊಳ್ಳಲು, ಅದನ್ನು ಕೇಳಿದ ಊರ್ವಶಿಯೂ ಹಾಗೆಯೇ ಬಂದು ಅರಸನ ಕಣ್ಮುಚ್ಚುವಳು. ರಾಜನು 'ಕುಮುದವು ಚಂದ್ರಕಿರಣದಿಂದಲ್ಲದೆ ಸೂರ್ಯಕಿರಣಗಳಿಂದ ಅರಳದು. ಹಾಗೆಯೇ ನನ್ನ ದೇಹವೂ ಕೈಸೋಂಕಿನಿಂದ ಪುಲಕಿತವಾಗಬೇಕಾದರೆ, ಈಕೆಯು ಊರ್ವಶಿಯೇ ಆಗಿರಬೇಕು.' ಎಂದು ನಿರ್ಧರಿಸಲು ಊರ್ವಶಿಯೂ ಪ್ರಿಯಸ್ಪರ್ಶದಿಂದ ಹೊಂದಿ ಆನಂದದಿಂದ ನಿಷ್ಟಬ್ಧಳಾಗಿ ಕೊನೆಗೆ ಹೇಗೆ ಹೇಗೋ ಕೈತೆಗೆದು ನಾಚಿಕೆಯು ಮಿತಿಮೀರಿ ನಿಂತುಕೊಳ್ಳಲು ರಾಯನು ಕೈಹಿಡಿದುಕೊಳ್ಳುವನು. ಊರ್ವಶಿಯು 'ಜಯವಾಗಲಿ. ಮಹಾರಾಜನಿಗೆ ಜಯವಾಗಲಿ' ಎಂದು ಜಯಶಬ್ದವನ್ನು ನುಡಿಯುವಳು. ಚಿತ್ರಲೇಖೆಯು 'ವಯಸ್ಯನಿಗೆ ಸುಖವೇ?' ಎಂದು ಕೇಳುವಳು. ಆತನು 'ಇದೋ ಕಣ್ಣೆದುರಿಗೇ ಲಭಿಸಿರುವುದಲ್ಲಾ' ಎನ್ನುವನು. ಊರ್ವಶಿಯು ಆಗ ''ಎಲೆ! ಮಹಾರಾಜನು ದೇವಿಯಿಂದ ದತ್ತನಾಗಿರುವನು. ಆದುದರಿಂದ ನಾನು ಈತನ ದೇಹದಲ್ಲಿ ಐಕ್ಯವಾಗಿರುವೆನು. ನನ್ನನ್ನು ಕೇವಲ ದೋಷೈಕ ದೃಷ್ಟಿಯಿಂದು ಭಾವಿ

ಸದಿರು.' ಎನ್ನಲು, ರಾಯನು ಮತ್ತೆ 'ದೇವೀದತ್ತನೆಂ
ದು ನನ್ನ ಶರೀರದಲ್ಲಿ ನೀನು ವ್ಯಾಪಾರವನ್ನು ಮಾಡು
ವುದಾದರೆ ನೀನು ಮೊಟ್ಟಮೊದಲು ಯಾರನ್ನು ಕೇಳಿ
ನನ್ನಹೃದಯವನ್ನುಕದ್ದೆ?' ಎಂದು ಹಾಸ್ಯ ಮಾಡಲು,
ಚಿತ್ರಲೇಖೆಯು 'ವಯಸ್ಯ! ಈಕೆಯು ನಿರುತ್ತರೆಯಾ
ದಳು. ನಾನು ವಿಜ್ಞಾಪಿಸುವುದನ್ನು ಲಾಲಿಸಬೇಕು.
ವಸಂತದನಂತರ ಗ್ರೀಷ್ಮದಲ್ಲಿ ಭಗವಂತನಾದ ಸೂರ್ಯ
ನನ್ನು ನಾನು ಉಪಚರಿಸಬೇಕಾಗಿರುವುದು. ಅದರಿಂದ
ನಾನು ಹೋಗುವೆನು. ಆದುದರಿಂದ ಹೇಗೂ ಈ ನಮ್ಮ
ಪ್ರಿಯಸಖಿಯು ಸ್ವರ್ಗಕ್ಕಾಗಿ ಹಂಬಲಿಸದಿರುವಂತೆ
ನೋಡಿಕೊಳ್ಳಬೇಕು' ಎಂದು ವಿಜ್ಞಾಪಿಸಲು,
ವಿದೂಷಕನು "ಭವತಿ! ಸ್ವರ್ಗವನ್ನು ನೆನಸಿಕೊಳ್ಳು
ವುದಕ್ಕೆ ಅಲ್ಲೇನಿದೆ? ತಿನ್ನುವುದಿಲ್ಲ, ಕುಡಿಯುವುದಿಲ್ಲ.
ಕೇವಲ ಮೀನಿನಂತೆ ಸುಮ್ಮನೆ ಬಿಟ್ಟ ಕಣ್ಣು
ಬಿಟ್ಟಂತೆ ಕುಳಿತಿರುವುದು" ಎಂದು ಪರಿಹಾಸ್ಯ
ಮಾಡಲು, ರಾಯನು 'ಹೀಗೆಂದು ಹೇಳಲೂ ಆಗದ
ಸುಖವುಳ್ಳ ಸ್ವರ್ಗವನ್ನು ಮರೆವುದೆಂತು? ಆದರೂ
ಇನ್ನಾವ ಹೆಂಗುಸಿಗೂ ದೊರೆಯದ ಪುರೂರವನು ಇವ
ಳಿಗೆ ದಾಸನಾಗಿರುವನು' ಎಂದು ಹೇಳಲು, ಚಿತ್ರಲೇ
ಖೆಯು ಸಂತುಷ್ಟಳಾಗಿ ಊರ್ವಶಿಯ ಮತ್ತು ರಾಯನ
ಅನುಜ್ಞೆಯನ್ನು ಪಡೆದು ಹೊರಟು ಹೋಗುವಳು.

ವಿದೂಷಕನು 'ಅದೃಷ್ಟವಶದಿಂದ ನಿನ್ನ ಮನೋ ರಥವು ಸಿದ್ಧಿಸಿತು' ಎನ್ನಲು, ರಾಯನು 'ಈ ಮನೋ ರಥ ಸಿದ್ಧಿಯನ್ನಾದರೂ ನೋಡು. ಸಾಮಂತ ಮೌಲಿ ಮಣಿಗಳಿಂದ ರಂಜಿತವಾದ ಪಾದಪೀಠವುಳ್ಳ ಸಿಂಹಾಸನದಲ್ಲಿ ಕುಳಿತು, ಒಂದೇ ಛತ್ರಿಯಿಂದ, ಅವನಿಯನ್ನೆಲ್ಲ ಆಳುವುದಕ್ಕಿಂತಲೂ ಈಕೆಯ ಚರಣತ ಲದಲ್ಲಿದ್ದು ಈಕೆಯ ಆಜ್ಞಾಕರನಾಗಿ ಕೃತಾರ್ಥನಾಗು ವುದೇ ಸೌಖ್ಯವಾಗಿರುವುದು' ಎಂದು ತನ್ನ ಸಂತೋಷ ವನ್ನು ಹೇಳಿಕೊಳ್ಳಲು, ಇನ್ನು ಇದಕ್ಕಿಂತಲೂ ಹೆಚ್ಚಾ ಗಿ ಏನು ಹೇಳಲೆಂದು ಊರ್ವಶಿಯು ಸುಮ್ಮನಾಗಲು ರಾಯನು ಆಕೆಯನ್ನು ಕೈಹಿಡಿದು ನುಡಿಸುತ್ತಾ 'ಬೇ ಕಾದುದು ದೊರೆತಾಗ ಎಲ್ಲವೂ ಬೇಕಾದುದೇ ಆಗಿ ಬೆಳೆವುವು' ಎಂದು ಹೇಳಿ 'ಮೊದಲಿನ ಚಂದ್ರಕಿರಣವೇ ಈಗ ದೇಹವನ್ನು ಸುಖಗೊಳಿಸುವುದು. ಅದೇ ಮದನ ಬಾಣಗಳು ಮನಸ್ಸಿಗೆ ಅನುಕೂಲಗಳಾಗಿರುವುವು ಎಲೆ ಸುಂದರಿ! ಮೊದಮೊದಲು ಕೋಪಗೊಂಡು ದಾರುಣ ಗಳಾಗಿದ್ದವುಗಳೆಲ್ಲವೂ ನಿನ್ನ ಸಂಗಮದಿಂದ ಸಮಾ ಧಾನಪಟ್ಟಂತೆ ಅನುಕೂಲವಾಗಿರುವುವು ನೋಡು' ಎಂದು ತನ್ನ ಸ್ಥಿತಿಯನ್ನು ತೋರಿಸುವನು ಊರ್ವಶಿ ಯು 'ಅಯ್ಯೋ ನಾನು ಮುಂಚೆಯೇ ಬರಬಾರದಾಗಿತ್ತೆ?' ಎಂದು ವ್ಯಥಿಸುವಳು. ರಾಯನು 'ಸುಂದರಿ! ಹಾಗಲ್ಲ.

ಬಿಸಿಲಿನಲ್ಲಿ ವ್ಯಥೆಪಟ್ಟಿರುವವನಿಗೇ ಮರದ ನೆರಳು ಸುಖ ಕರವಾಗುವಂತೆ, ದುಃಖಪಟ್ಟಮೇಲೆ ಹೊಂದಿದ ಸುಖ ವೇ ರಸವತ್ತರವಾದುದು' ಎಂದು ಸಮಾಧಾನ ಪಡಿಸಿ, 'ಹೊತ್ತಾಯಿತು. ಇನ್ನು ಅರಮನೆಯೊಳಕ್ಕೆ ಹೋಗೋಣ' ಎಂದು ಅರಿಕೆ ಮಾಡಿದ ವಿದೂಷಕನ ಮಾತಿನಂತೆ ರಾಯನು ಊರ್ವಶಿಯನ್ನು ಕರೆದೊಯ್ಯುತ್ತ, 'ಮನೋರಥವು ಲಭಿಸದಿರಲು ಒಂದು ರಾತ್ರಿಯು ನೂರು ರಾತ್ರಿಯಾಗುತ್ತಿತ್ತು; ನಿನ್ನ ಸಮಾಗಮದಲ್ಲಿಯೂ ಹಾಗೆಯೇ ದೀರ್ಘವಾಗುವುದಾದರೆ ನಾನು ಕೃತಾರ್ಥನಾದೇನು' ಎಂಬ ತನ್ನಾಶೆಯನ್ನು ಹೇಳಿಕೊಳ್ಳುತ್ತಾ ಎಲ್ಲರೊಡನೆಯೂ ಹೊರಟುಹೋಗುವನು.

**ಇಂತಿದು ತೃತೀಯಾಂಕವು.**



# ಚತುರ್ಥಾಂಕ

ಊರ್ವಶಿಗೆ ಬೇಕಾದವರೂ, ಸೂರ್ಯಪಂಚೆಯ್ಲ ಯಲ್ಲಿರುವವರೂ ಆದ ಸಹಜನ್ಯೆ, ಚಿತ್ರಲೇಖೆಯೆಂಬಿಬ್ಬರು ಅಪ್ಸರೆಯರು ಬರುವರು. ದುಃಖಿಸುತ್ತಿರುವ ಕಾರಣವನ್ನು ಕೇಳಿದ ಸಹಜನ್ಯೆಗೆ ಚಿತ್ರಲೇಖೆಯು "ಮಂತ್ರಿಗಳ ವಶದಲ್ಲಿ ರಾಜ್ಯವನ್ನು ಇಟ್ಟು, ಪುರೂರವನು ಊರ್ವಶಿಯೊಡನೆ ಕೈಲಾಸ, ಶಿಖರ, ಗಂಧಮಾದನವನ ಇವುಗಳಲ್ಲಿ ವಿಹರಿಸಲು ಹೊರಟನು. ಮಂದಾಕಿನೀ ತೀರದಲ್ಲಿ ಮರಳು ದಿಣ್ಣೆಯಲ್ಲಿ ಕ್ರೀಡಿಸುತ್ತಿದ್ದ ಉದಯವತಿಯೆಂಬ ವಿದ್ಯಾಧರ ಕುಮಾರಿಯನ್ನು ಆತನು ದೀರ್ಘಕಾಲ ನೋಡಿದನೆಂದು ಊರ್ವಶಿಯು ಕೋಪಗೊಂಡು, ಆತನನುನಯವನ್ನೂ ಲಕ್ಷಿಸದೆ, ಗುರು ಶಾಪದಿಂದ ಮರೆವುಗೊಂಡು, ಸ್ತ್ರೀ ಜನರು ಪ್ರವೇಶಿಸಬಾರದಾದ ಕುಮಾರವನವನ್ನು ಹೊಕ್ಕು ಅಲ್ಲಿ ಲತೆಯಾಗಿರುವಳು. ಆತನೂ ಅದೇ ವನದಲ್ಲಿಯೇ ಪ್ರಿಯೆಯನ್ನು ಹುಡುಕುತ್ತ ಹುಚ್ಚನಾಗಿ ಹೋಗಿರುವನು. ಸಾಲದುದಕ್ಕೆ ಈಗ ಮುಂಗಾರೂ ಬಂದಿರುವುದು. ಏನಾಗುವುದೋ ಎಂದು ಶಂಕಿಸುವೆನು." ಎಂದು ಹೇಳಲು, ಆಕೆಯೂ ವ್ಯಸನಪಟ್ಟು "ಸಖಿ! ಸಂಗಮೋಪಾಯವೇನೂ ಇಲ್ಲವೇ?" ಎಂದು ಕೇಳಿ, "ಗೌರೀಚರಣ ರಾಗದಿಂದ ಸಂಭವಿಸಿದ ಸಂಗಮಮಣಿಯೊಂದನ್ನು ಬಿಟ್ಟು ಬೇರೆ ಉಪಾಯವೇ ಇಲ್ಲವೆಂ" ದು ಆಕೆಯು ಹೇಳಲು, "ಸಖಿ! ಹಾಗಾದರೆ ಚಿಂತೆ

ಯಿಲ್ಲ. ಅಂತಹ ಲಕ್ಷಣವಂತರಾದವರು ಬಹುಕಾಲ ದುಃಖವನ್ನನುಭವಿಸರು. ಯಾವುದಾದರೊಂದು ಪಾಯದಿಂದ ಅವರಿಗೆ ಸಂಗಮವಾಗುವುದು" ಎಂದು ಹೇಳುತ್ತಾ, ಆಗ ತಾನೆ ಉದಯಿಸುವ ಸೂರ್ಯಬಿಂಬ ವನ್ನು ನೋಡಿ ಅವರಿಬ್ಬರೂ ಉಪಸ್ಥಾನಕ್ಕಾಗಿ ಹೊರ ಟುಹೋಗುವರು.

ಅನಂತರ ಹುಚ್ಚನಾದ ರಾಯನು ಆಕಾಶವನ್ನೇ ನೋಡುತ್ತಾ ಬಂದು, ಹೋಗುತ್ತಿರುವ ಮೋಡವನ್ನು ನೋಡಿ ಪೂರ್ವದ ರಾಕ್ಷಸ ಬಾಧೆಯನ್ನು ನೆನಸಿಕೊಂ ಡು ಭ್ರಾಂತನಾಗಿ ಕೋಪದಿಂದ "ಎಲೆ ದುರಾತ್ಮ ನಾದ ರಾಕ್ಷಸನೆ! ನಿಲ್ಲು, ನಿಲ್ಲು. ನನ್ನ ಪ್ರಿಯತಮೆ ಯನ್ನು ಹಾರಿಸಿಕೊಂಡು ಎಲ್ಲಿ ಹೋಗುವೆ?" ಎಂದು ಮುಂದೆ ಹೋಗಿ, ಅಷ್ಟರಲ್ಲಿಯೇ ಮೋಡವು ಕೋಡು ಗಲ್ಲನ್ನು ಸಂಧಿಸಲು, "ಎಲೆಲಾ! ಶೈಲ ಶಿಖರವನ್ನೇರಿ ನನ್ನನ್ನು ಬಾಣಗಳಿಂದ ಹೊಡೆಯುವೆಯಾ?" ಎಂ ದು, ಮತ್ತೇನೂ ಸಿಕ್ಕದಿರಲು ಅಲ್ಲಿ ಬಿದ್ದಿದ್ದ ಮಣ್ಣು ಹೆಂಟೆಯನ್ನೆತ್ತಿ ಹೊಡೆಯಲೋಡುತ್ತಾ, ಚೆನ್ನಾಗಿ ನೋಡಿ ಮೋಡವೆಂದು ತಿಳಿದು ವ್ಯಥಿಸಿ, "ಅಯ್ಯೋ! ಇದು ಹೊಸ ಮೋಡವಲ್ಲದೆ ಗರ್ವಿತನಾದ ರಾಕ್ಷಸನಲ್ಲ. ಇದು ಮಣಿ ಧನುವಲ್ಲದೆ ಅವನ ಧನುವಲ್ಲ. ಇದು ಪಟಪಟನುದುರುವ ಮಳೆ ಹನಿಯಲ್ಲದೆ ಬಾಣ ಪರಂ ಪರೆಯಲ್ಲ. ಇದು ಒರೆಗಲ್ಲಿನಲ್ಲಿ ಉಜ್ಜಿದ ಚಿನ್ನದ ರೇಖೆಯಂತಿರುವ ಮಿಂಚಲ್ಲದೆ ನನ್ನ ಪ್ರಿಯೆಯಾದ ಊರ್ವಶಿಯಲ್ಲ" ಎಂದು ಮೂರ್ಛಿತನಾಗುವನು. ಮತ್ತೆ ಹಾಗೆಯೇ ಮೇಲಕ್ಕೆದ್ದು "ಬಾಳೆಯಂತೆ ತೊಡೆ

ಯುಳ್ಳ ಆ ನನ್ನ ಪ್ರಿಯೆಯು ಎಲ್ಲಿ ಹೋಗಿದ್ದಾಳು ?
ಎಂದು ಹೇಳಿ ಕೋಪಿಸಿಕೊಂಡು ಪ್ರಭಾವದಿಂದ ತನ್ನ
ನ್ನು ಮುಚ್ಚಿಕೊಂಡು ಮರೆಯಾಗಿ ಕುಳಿತಿರುವಳೆಂದರೆ
ಕೆಯು ಬಲು ಹೆಚ್ಚು ಹೊತ್ತು ಕೋಪಗೊಳ್ಳುವ
ಲ್ಲ. ಸ್ವರ್ಗಕ್ಕಾಗಿ ಹೊರಟುಹೋಗಿರಬಹುದೇ ಎಂದರೆ,
ಕೆಯು ನನ್ನಲ್ಲಿ ಬದ್ಧಾನುರಾಗವುಳ್ಳವಳು ನನ್ನ
ಿರಿರುವ ಆಕೆಯನ್ನು ದೇವದ್ವೇಷಿಗಳಾದ ಅಸುರರೂ
ಾರಿಸಿಕೊಂಡು ಹೋಗಲಾರರು. ಹೀಗಿದ್ದರೂ
ಕೆಯು ಕಣ್ಣಿಗೇ ಕಾಣದೇ ಹೋದಳೆಂದರೆ ಏನೀ
ಧಿಯು !" ಎಂದು ಚಿಂತಿಸುತ್ತಾ ಮುಂದೆ ಬಂದು,
ಎಲಾ ! ಅದೃಷ್ಟವು ಪರಾಙ್ಮುಖವಾಗಿರುವವರಿಗೆ
ಃಖದ ಮೇಲೆ ದುಃಖವು ಒದಗುವುದು. ಇಗೋ !
ತ್ತ ಒಂದು ಕಡೆ,ಆ ಪ್ರಿಯೆಯ ವಿಯೋಗವು ಸಹಿಸು
ದಕ್ಕೆ ಅಸಾಧ್ಯವಾಗಿ ಪ್ರಾಪ್ತವಾಗಿರುವುದು. ಹೊಸ
ಾದ ಮೇಘಗಳ ಉದಯದಿಂದ ಬಿಸಿಲಿನ ಹೆಸರಿಲ್ಲದೆ
ತಿ ರಮ್ಯವಾದ ದಿನಗಳೂ ಈಗಲೇ ಒದಗಿರುವುವು."
ಂದು ವ್ಯಥಿಸುತ್ತಾ ಮತ್ತೆ ನಕ್ಕು, "ರಾಜನೇ ಕಾಲಕ್ಕೆ
ಾರಣನೆಂದು ಋಷಿಗಳೂ ಹೇಳುವಲ್ಲಿ ನಾನೇ ಮನ
ನ ಸಂತಾಪವೃದ್ಧಿಯನ್ನು ಉಪೇಕ್ಷಿಸುತ್ತಿರುವೆನು.
ಾನೇಕೆ ಈ ಕಾರ್ಗಾಲವನ್ನು ನಿರಾಕರಿಸಬಾರದು ?"
ಂದುಕೊಂಡು, ಹಾಗೆಯೆ ಮತ್ತೆ, "ಈ ಮಳೆಗಾಲವು
ದೇ ಚಿಹ್ನೆಗಳಿಂದಲೆ ನನಗೆ ರಾಜೋಪಚಾರ ಮಾ
ತ್ತಿರಲು ಇದನ್ನು ನಾನೇಕೆ ನಿರಾಕರಿಸಲಿ? ಇಗೋ
ಂಚಿನ ಬಳ್ಳಿಯೆಂಬ ಚಿನ್ನವುಳ್ಳ ಈ ಮೋಡವು
ನಗೆ ಬೆಳ್ಗೊಡೆಯು. ಕಂಪಿಸುತ್ತಿರುವ ನಿಚುಲ

ತರುಗಳ ಚಿಗುರು ಜೊಂಪೆಯೇ ಚಾಮರಗಳು. ಬೇಸಿಗೆ
ಯು ಕಳೆದು ತಂಪಾಗಿರಲು, ಸುಂದರವಾಗಿ ಕೇಕೆಹಾ
ಕುವ ಈ ನೀಲಕಂಠಗಳೇ ವಂದಿಗಳು. ಈ ಮೋಡ
ಗಳೇ ಧಾರೆ ಎಂಬ ಸಾರವನ್ನು (ನೀರು—ಐಶ್ವರ್ಯ)
ತರುವ ವ್ಯಾಪಾರಗಾರರು." ಹೀಗೆ ಸುತ್ತಮುತ್ತಲಿರು
ವುದನ್ನು ಹೊಗಳುತ್ತಾ ಕುಳಿತರೇನಾಯಿತು. ಇರಲಿ
ಈ ಕಾನನದಲ್ಲಿ ಆ ಪ್ರಿಯೆಯನ್ನು ಹುಡುಕುವೆನು."
ಎಂದು ಹಾಗೆಯೇ ಸುತ್ತಲೂ ನೋಡಿ, "ಅಯ್ಯೋ!
ಹುಡುಕಲು ಹೊರಟ ನನಗೆ ವಿರಹವು ಹೊಗೆಯಾಡು
ತ್ತಿದ್ದುದು ಕಿಚ್ಚೆದ್ದಂತಾಯಿತು. ಇಗೋ ಈ ಹೊಸ
ಬಾಳೆಯ ಗಿಡವು ಕೊಂಚ ಕೆಂಪುಗೂಡಿದ, ಒಳನೀರಿ
ನಿಂದ ಸೊಗಸಾದ, ಹೂಗಳಿಂದ, ಕೋಪಗೊಂಡ
ಆಕೆಯ ಹನಿಗೂಡಿದ ಕಣ್ಣನ್ನು ನೆನಹಿಗೆ ತರುವುದು."
ಎಂದು ವ್ಯಥಿಸಿ, "ಅಯ್ಯೋ! ಇದೇ ಮಾರ್ಗವಾಗಿಯೇ
ಆಕೆಯು ಹೋದಳೆಂದು ನಾನು ಹೇಗೆ ತಿಳಿಯಲಿ?
ಹೊಸದಾಗಿ ಮಳೆಯಾಗಿರುವ ಈ ಕಾಡಿನಲ್ಲಿ ಈ
ಮರಳಿನಲ್ಲಿ ಕಾಲಿಟ್ಟು ನಡೆದು ಹೋದುದೇ ಆದರೆ,
ಹಿಮ್ಮಡಿಯು ಗುರುವಾದ ನಿತಂಬದ ಭಾರದಿಂದ ಹಳ್ಳ
ವಾಗಿಯೂ, ಆ ಹಜ್ಜೆಯು ಕಾಲಿನ ಅಲಕ್ತರಸದಿಂದ
ಕೆಂಪಾಗಿಯೂ ಇರಬೇಕು" ಎಂದುಕೊಂಡು ಮುಂದೆ
ಹೋಗುತ್ತ, ಅಲ್ಲೊಂದು ಹುಲ್ಲಿನ ಹೆಪ್ಪನ್ನು ನೋಡಿ
"ಆ ಮಂಗೋಪಿಯು ಹೋದ ಹಾದಿಯನ್ನು ಹಿಡಿವ
ಗುರುತು ಸಿಕ್ಕಿತೆಂ"ದು ನಲಿದು, "ಅಧರ ರಾಗವನ್ನು
ತೊಳೆದುಕೊಂಡು, ಹಳ್ಳವಾದ ನಾಭಿಗೆಂದು ಕೆಳಕ್ಕಿಳಿ
ಯುವ, ಆಕೆಯು ಕೋಪದಿಂದ ಬಿಟ್ಟ ಕಂಬನಿಗಳಿಂದ

ಅಂಕಿತವಾಗಲು, ಹೋಗುತ್ತಿದ್ದವಳು ರೋಷದಿಂದ ಒಂದುಗಳಿಗೆ ನಿಂತು ತೆಗೆದೆಸೆದ, ಶುಕೋದರದಂತೆ ಶ್ಯಾಮವಾದ ಸ್ತನಾಂಶುಕವಿದು" ಎಂದು ಹತ್ತಿರ ಹೋಗಿ, 'ಅಯ್ಯೋ! ಇಂದ್ರ ಗೋಪದ ಹುಳು ಹಿಡಿದಿರುವ ಹೊಸ ಹುಲ್ಲಿನ ಹೆಪ್ಪಿದು" ಎಂದು ಭಗ್ನ ಮನೋರಥನಾಗಿ "ಈ ನಿರ್ಜನವಾದ ವನದಲ್ಲಿ ಪ್ರಿಯೆಯು ಹೋದ ಮಾರ್ಗನ್ನು ಹೇಗೆ ತಿಳಿಯು ವುದು" ಎಂದು ಶೋಕಿಸುವನು.

ಅಲ್ಲಿ ಮಳೆ ನೀರು ಕುಡಿದು ತಣ್ಣಗಿರುವ ಕಿಬ್ಬ ರಿಯ ಕಲ್ಲಿನ ಮೇಲೆ ಗಾಳಿಯಿಂದ ಶಿಖೆಯು ಹಾ ರುತ್ತಿರಲು, ಹೋಗುತ್ತಿರುವ ಮೇಘರಾಜಿಯನ್ನು ನೋಡುತ್ತಾ, ಕತ್ತನ್ನು ಮುಂದಕ್ಕೆ ಚಾಚಿ ಕೇಕೆ ಹಾಕುತ್ತ ನಿಂತಿರುವ ನವಿಲನ್ನು ನೋಡಿ, "ಇದನ್ನಾ ದರೂ ಕೇಳುವೆನು" ಎಂದು ಹತ್ತಿರ ಹೋಗಿ "ಎಲೆ ನೀಲಕಂಠನೆ! ಈ ವನದಲ್ಲಿ ಉತ್ಕಂಠೆಯಾದ ನನ್ನ ಹೆಂಗಸನ್ನು ಕಂಡೆಯಾ? ಎಲೆ ಸಿತಾಪಾಂಗನೇ! ದೀರ್ಘಾಪಾಂಗೆಯಾದಾಕೆಯು ನಿನ್ನ ಕಣ್ಣಿಗೆ ಬಿದ್ದ ಳೆ?" ಎಂದು ಕೇಳಿ ಅದು ಗಮನಿಸದೆ ತನ್ನ ಪಾಡಿಗೆ ತಾನು ಕುಣಿಯುತ್ತಿರಲು, "ಇದೇಕೆ ಇಷ್ಟು ಹರ್ಷ ಪಡುತ್ತಿರುವುದು?" ಎಂದು ವಿಚಾರಿಸಿ, "ಆಹಾ! ನನ್ನ ಪ್ರಿಯೆಯು ನಷ್ಟವಾದುದರಿಂದ, ಹೂ ಗಾಳಿಗೆ ಹಾರುತ್ತಿರುವ ನಿಬಿಡವಾದ ತನ್ನ ಕಲಾಪಕ್ಕೆ ಎದುರಿ ಲ್ಲದೆ ಹೋಯಿತು ಎಂದು ನಲಿಯುತ್ತಿರುವುದು. ರತಿ ಕಾಲದಲ್ಲಿ ಬಿಚ್ಚಿ ಹೋದ, ಹೂ ಮುಡಿದ ಮುಡಿಯ

ನ್ನು ಕೈಯಲ್ಲಿ ಹಿಡಿದು ಆಡಿಸುವ ನನ್ನೊಡತಿಯಿದ್ದಿದ್ದರೆ, ಈ ನವಿಲೇನು ಮಾಡುತ್ತಿದ್ದಿತು? ಹೋಗಲಿ, ಇನ್ನೊಬ್ಬರ ದುಃಖದಲ್ಲಿ ಸಂತೋಷಪಡುವ ಇವನ್ನು ಇನ್ನು ಕೇಳೆನು" ಎಂದು ಮುಂದೆ ಹೋಗುವನು.

೨

ಅಲ್ಲಿ ಗ್ರೀಷ್ಮಾಂತದಲ್ಲಿ ಹೆಚ್ಚಿದ ಮದವುಳ್ಳ ಒಂದು ಹೆಣ್ಣುಕೋಗಿಲೆಯು ನೇರಿಲೇ ಮರದಲ್ಲಿ ಕುಳಿತಿರಲು, "ಹಕ್ಕಿಗಳಲ್ಲೆಲ್ಲಾ ಇದು ಬಹಳ ಪಂಡಿತನಾದ ಜಾತಿಯು. ಇರಲಿ. ಇದನ್ನು ಪ್ರಾರ್ಥಿಸುವೆನು" ಎಂದು "ಎಲೆ ಕೋಕಿಲೆ! ಕಾಮಿಗಳು ನಿನ್ನನ್ನು ಮದನ ದೂತಿಯೆಂದೂ, ಕಾಮಿನಿಯರ ಮಾನವನ್ನು ಮುರಿವ ಮನ್ಮಥನ ಅಮೋಘವಾದ ಅಸ್ತ್ರವೆಂದೂ ಹೇಳುವರು. ಪ್ರಿಯತಮೆಯಾದ ಆಕೆಯನ್ನಾದರೂ ನನ್ನ ಸಮೀಪವನ್ನು ಹೊಂದಿಸು. ಅಥವಾ ನನ್ನನ್ನಾದರೂ ಕಲಭಾಷಿಣಿಯಾದ ಆ ಕಾಂತೆಯು ಬಳಿಗೆ ಕರೆದುಕೊಂಡು ಹೋಗು" ಎಂದು ಬೇಡಿಕೊಂಡರೆ, ಅದು—"ಆಕೆಯು ನಿನ್ನನ್ನೇಕೆಬಿಟ್ಟು ಹೋದಳು?" ಎಂದು ಕೇಳಿದಂತೆ ಭಾವಿಸಿಕೊಂಡು "ಆಕೆಯು ಕೋಪಗೊಂಡುದುಂಟು. ಆದರೆ ಆಕೆಯು ಹಾಗೆ ಕೋಪಿಸಿಕೊಳ್ಳುವುದಕ್ಕೆ ನಾನೇನು ಮಾಡಿರುವೆನೋ ನನಗೆ ತಿಳಿಯದು. ಮುಖ್ಯವಾಗಿ, ಹೆಂಗಸರು ಕೋಪಗೊಳ್ಳಲು, ಗಂಡಂದಿರ ಮೇಲೆ ಅವರಿಗೆ ಇರುವ ಪ್ರಭುತ್ವವೇ ಸಾಕಾಗಿರಲು, ಬೇರೆಯೊಂದು ತಪ್ಪಾದರೂ ಏಕೆ ಬೇಕು?" ಎಂದು ಹೇಳಿ, ಅದು ತನ್ನ ಕೆಲಸವನ್ನು ತಾನು ಮಾಡಿಕೊಳ್ಳುತ್ತಿರಲು, "ಎಲೈ ನನ್ನ

ಕಥೆಯನ್ನು ಹೇಳುಕೊಳ್ಳುತ್ತಿರಲು ಕೇಳದೆ ನಡುವೆ ಮತ್ತೊಂದನ್ನು ತಂದಿಡುವುದಲ್ಲ! ಇತರರ ದುಃಖವು ಎಷ್ಟೇ ಹೆಚ್ಚಿದ್ದರೂ, ಲೋಕರು ಅದರ ವಿಚಾರವಾಗಿ ಬಲು ತಣ್ಣಗೆ ಸೊಗಸಾಗಿ ಮಾತನಾಡುವರು. ಆಪದ್ಗತನಾದ ನನ್ನ ಪ್ರಣಯದ ವ್ಯಥೆಯನ್ನು ಗಣಿಸದೆ ಅಧರದಂತೆ ಕೆಂಪಾಗಿರುವ ಈ ಜಂನೇರಳೆಯ ದೊರೆಗಾಯನ್ನು ಕಚ್ಚುವುದರಲ್ಲಿಯೇ ಈ ಮತ್ತ ಕೋಕಿಲೆಯು ವ್ಯಗ್ರವಾಗಿರುವುದಲ್ಲಾ!" ಎಂದು ವ್ಯಥಿಸಿ ಮತ್ತೆ, "ಹೀಗಿದ್ದರೂ ನನ್ನ ಪ್ರಿಯೆಯಂತೆ ಇದೂ ಮನೋಹರವಾದ ಕಂಠಸ್ವರವುಳ್ಳುದಾದುದರಿಂದ ನನಗೆ ಇದರಲ್ಲಿ ಕೋಪವಿಲ್ಲ. ಎಲ್ಲಾದರೂ ಸುಖವಾಗಿರಲಿ. ನಾವೆಲ್ಲಿಯಾದರೂ ಹುಡುಕಿಕೊಳ್ಳೋಣ" ಎಂದು ಮುಂದೆ ನಡೆದು, "ಆ! ಇದೋ! ಈ ತೆಂಕಣಿಂದ ಪ್ರಿಯೆಯ ಪದವಿನ್ಯಾಸವನ್ನು ಸೂಚಿಸುವ ನೂಪುರರವವು ಕೇಳಿ ಬರುತ್ತಿರುವುದು"ಯೆಂದಲ್ಲಿ ಹೋಗುವನು. ಇದು ನೂಪುರಸಿಂಜಿತವಲ್ಲದೆ, ಮೇಘಗಳಿಂದ ತುಂಬಿದ ದಿಕ್ಕುಗಳನ್ನು ನೋಡಿ. ಮಾನಸ ಸರೋವರಕ್ಕೆ ಹಿಂತಿರುಗಲು ಹೊರಟಿರುವ ಹಂಸಪಕ್ಷಿಗಳ ಕೂಜಿತವಾಗಿರಲು, ಭಗ್ನಮನೋರಥನಾಗಿ, "ಇರಲಿ ಈ ಪಕ್ಷಿಗಳು ಸರಸ್ಸನ್ನು ಬಿಡುವುದಕ್ಕಿಂತ ಮುಂಚೆಯೇ ಪ್ರಿಯೆಯು ಎತ್ತ ಹೋದಳೆಂಬುದನ್ನು ತಿಳಿದುಕೊಂಡು ಬಿಡಬೇಕು" ಎಂದು ಮುಂದೆ ಬಂದು, "ಎಲೈ ಜಲವಿಹಂಗಮ ರಾಜನೆ! ಮಾನಸ ಸರೋವರಕ್ಕೆ ಆಮೇಲೆ ಹೋಗುವೆಯಂತೆ; ಬುತ್ತಿ ಕಟ್ಟಿರುವೀ ತಾವರೆ ದಂಟನ್ನು ಬಿಡು; ಮತ್ತೆ ತೆಗೆದು

ಕೊಳ್ಳುವೆಯಂತೆ; ಪ್ರಿಯೆಯ ವಿರಹದಿಂದ ದುಃಖ ಸಾಗರದಲ್ಲಿ ಮುಳುಗಿರುವ ನನ್ನನ್ನು ಉದ್ಧರಿಸು. ಸತ್ಪುರುಷರಿಗೆ ತಮ್ಮ ಕೆಲಸಕ್ಕಿಂತಲೂ ಶೋಕಾರ್ತರ ಕೆಲಸವೇ ಹೆಚ್ಚಲ್ಲವೆ?" ಎಂದು ಬೇಡಿ "ಯೇನು ಮಾನಸಕ್ಕೆ ಹೋಗುವ ಅವಸರದಲ್ಲಿರುವ ನಾನು ನೋಡಲಿಲ್ಲವೆನ್ನುವೆಯಾ? ಎಲೆ ಹಕ್ಕಿ! ಕುಪಿತೆಯಾದ ಆ ಕಾಂತೆಯು ಸರೋವರದ ತೀರದಲ್ಲಿ ನಿನ್ನ ಕಣ್ಣಿಗೆ ಬಿದ್ದಿರಬೇಕು. ಇಲ್ಲವಾದರೆ ಆ ಮಡದಿಯ ಬೆಡಗಿನ ನಡೆಯನ್ನು ಮತ್ತೆಲ್ಲಿ ತಾನೆ ಕಲಿಯುವೆ? ಕಳುವು ಮಾಲಿನ ಒಂದು ಭಾಗವಿರುವವನೇ ಎಲ್ಲದಕ್ಕೂ ಹೊಣೆಯು. ನೀನು ಆಕೆಯ ನಡೆಯನ್ನು ಅಪಹರಿಸಿದರೂ ಹೋಗಲಿ ನನ್ನ ಕಾಂತೆಯನ್ನು ತೋರಿಸಿ ಕೊಡು" ಎಂದು ಮುಂದೆ ನಡೆದು, ಅದು ಪುರ್ರನೆ ಹಾರಿ ಹೋಗಲು, ನಕ್ಕು, "ಇದು ಕಳ್ಳರನ್ನು ಶಿಕ್ಷಿಸುವ ರಾಜನೆಂದು ಭಯಪಟ್ಟು ಓಡಿಹೋಯಿತು" ಎಂದು ಮುಂದಕ್ಕೆ ಹೋಗುವನು,

ಅಲ್ಲಿ ಒಂದು ಚಕ್ರವಾಕ ಮಿಥುನವನ್ನು ಕಂಡು, "ಎಲೆ! ರಥಾಂಗವೆಂದು ಹೆಸರುಳ್ಳ ಚಕ್ರವಾಕವೇ! ರಥಾಂಗದಂತೆ ವಿಸ್ತಾರವಾದ ನಿತಂಬ ಭಾಗವುಳ್ಳ ಹೆಂಡತಿಯಿಂದ ವಿಯುತನಾದ, ನೂರಾರು ಮನೋರಥಗಳಿಂದ ಕೂಡಿದ ಈ ರಥಿಯು ಕೇಳಿಕೊಳ್ಳುವನು" ಎಂದು ಹೇಳಿಕೊಂಡು. ಅದು ಕ್-ಕ್ ಎಂದುಕೊಳ್ಳಲು, "ನೀನು ಯಾರೆನ್ನುವಿಯಾ? ನಿನಗೆ ತಿಳಿಯದೆ? ಸೂರ್ಯ ಚಂದ್ರರೇ ನನ್ನ ಮಾತಾಮಹಪಿತಾಮಹರು, ಊರ್ವಶಿಯು ಭೂಮಿಯೂ ಸ್ತ್ರೀತಾವಾಗಿ

ವರಿಸಿದ ಪತಿಯು ನಾನು'' ಎಂದು ಹೇಳಿ, ಹಾಗೂ ಉತ್ತರ ಕೊಡದಿರಲು ರೇಗಿ, "ಕೊಳದಲ್ಲಿ ಒಂದು ತಾವರೆ ಯೆಲೆಯ ಮರೆಯಲ್ಲಿದ್ದು ನಿನ್ನ ಸಹಚರಿಯು ಕಣ್ಣಿಗೆ ಕಾಣದಿರಲು ಎಲ್ಲಿಯೋ ದೂರಗತಳಾದ ಳೆಂದು ಅಳುವೆ ಯಲ್ಲವೆ? ಹೆಂಡತಿಯ ಮೇಲಿನ ಸ್ನೇಹ ದಿಂದ ವಿರಹ ಭೀತಿಯು ನಿನಗಿಷ್ಟಿದ್ದರೂ ದುಃಖಿತ ನಾದ ನನಗೆ ನನ್ನ ಕಾಂತೆಯ ಸಮಾಚಾರವನ್ನು ಹೇಳದೆಯಿರುವುದೂ ಸರಿಯೆ? "ಎಂದು ಬಯ್ದು "ಹು! ನಮ್ಮಂತ ಹವರಲ್ಲಿ ದುರ್ವಿಧಿಯು ತನ್ನ ಪ್ರಭಾವನ್ನು ತೋರಿಸುವುದು.'' ಎಂದು ತಾನೇ ಸಮಾಧಾನ ಹೇಳಿ ಕೊಳ್ಳುತ್ತಾ ಮುಂದೆ ಹೋಗುವನು.

ಅಲ್ಲಿ ಒಂದು ದುಂಬಿಯು ಝುಂಕಾರದಿಂದ ಸುಂದ ರವಾದ ತಾವರೆಯನ್ನು ಕಂಡು 'ಹೀಗೆಯೇ ಸಸೀ ತ್ಕಾರವಾಗಿ ಆಕೆಯ ವದನವನ್ನು ಚುಂಬಿಸುತ್ತಿದ್ದ ನಾನು ಇಲ್ಲಿಂದ ಮುಂದೆ ಹೋಗಲಾರೆನು. ಇಲ್ಲಿ ಯೇ ಇದ್ದು ಈ ಕಮಲದಲ್ಲಿರುವ ದುಂಬಿಯೊಡನೆ ಸ್ನೇಹ ಮಾಡಿಕೊಳ್ಳುವೆನು ಇಲ್ಲಿಂದ ಮುಂದೆ ಹೋಗಿ ಪಶ್ಚಾತ್ತಾಪ ಪಡದಂತಿರಲಿ' ಎಂದು ಆ ಮಧುಕರವನ್ನು ಸಂಬೋಧಿಸಿ, 'ಮದಿರಾಕ್ಷಿಯು ಎಲ್ಲಿ ಹೋದಳು ಹೇಳು' ಎಂದು ಕೇಳಿ, ಹಾಗೆಯೇ, "ಅಥವಾ ನೀನು ಆಕೆಯನ್ನು ನೋಡಲಿಲ್ಲ. ಹಾಗೆ ನೋಡಿ, ಆಕೆಯ ಉಚ್ಛ್ವಾಸದ ಸುಗಂಧವು ನಿನಗೆ ದೊರೆತಿದ್ದರೆ, ಈ ಪುಂಡರೀಕದಲ್ಲಿ ನಿನಗೆ ಮನಸ್ಸಿರು ತ್ತಿದ್ದಿತೇನು ?'' ಎಂದು ಅದನ್ನು ಬಿಟ್ಟು ಮುಂದೆ ಹೋಗಿ, ಹೆಣ್ಣಾನೆಯೊಡನೆ ವಿಹರಿಸುತ್ತಾ ನೀಪ

ವೃಕ್ಷದ ಕೆಳಗೆ ಕುಳಿತಿರುವ ಆನೆಯು ಬಳಿಗೆ ಹೋಗಿ
ಸಲ್ಲಕಿಯ ಹೊಸ ಚಿಗುರನ್ನು ಹೆಣ್ಣಾನೆಯು ಕಯ್ಯಿಂದ
ಸ್ವೀಕರಿಸಿ ಭೋಜನ ಮಾಡುತ್ತಿರುವುದರಿಂದ ಹೋ
ಗುವುದು ಸರಿಯಲ್ಲವೆಂದು ಅದರ ಊಟವು ಮುಗಿದ
ಮೇಲೆ ಹತ್ತಿರ ಹೋಗಿ, 'ಬಾಲಚಂದ್ರಕಲೆಯಂತಿ
ರುವ ಜಾಜಿಯ ಹೂವನ್ನು ಮುಡಿದಿರುವ ಸ್ತ್ರೀಯಾ
ವನೆಯಾದ ಆಕೆಯನ್ನು ಕಂಡೆಯಾ?' ಎಂದು ಕೇಳಿ
ಅದರ ಬೃಂಹಿತದಿಂದ ಸಂತುಷ್ಟನಾಗಿ 'ನಾವಿಬ್ಬರೂ
ಸಮಾನಧರ್ಮಿಗಳು. ಆದರಿಂದ ನನ್ನಲ್ಲಿ ನಿನಗೆ
ಪ್ರೀತಿಯಿರುವುದು. ನನ್ನನ್ನು ಪೃಥ್ವೀಭೃತ್ತು
ಗಳಾದ ಕ್ಷತ್ರಿಯರಿಗೆ ಅಧಿಪತಿಯೆಂದು ಹೇಳುವರು.
ನೀನು ನಾಗಾಧಿರಾಜನು ನನಗೆ ಅರ್ಥಿಗಳಲ್ಲಿರುವ
ದಾನಪ್ರವೃತ್ತಿಯೂ ನಿನಗೂ ಸಂತತವಾಗಿರುವುದು.

ಸ್ತ್ರೀ ರತ್ನಗಳಲ್ಲಿ ಊರ್ವಶಿಯು ನನಗೆ ಕಾಂತೆಯು.
ನಿನಗೆ ಈ ಹೆಣ್ಣಾನೆಯು ಹೀಗೆ ಸರ್ವಥಾ ನಮ್ಮಿ
ಬ್ಬರಿಗೂ ಸಮನಾಗಿದ್ದರೂ, ಪ್ರಿಯಾವಿರಹದಿಂದುಂ
ಟಾಗುವ ವ್ಯಥೆಯನ್ನು ಮಾತ್ರ ನೀನು ಎಂದೆಂದಿಗೂ
ಅನುಭವಿಸಬೇಡ. ಎಲ್ಲಾದರೂ ಚೆನ್ನಾಗಿರು. ನಾನು
ಹುಡುಕಿಕೊಂಡು ಹೋಗುವೆನು' ಎಂದು ಮುಂದೆ
ಹೊರಟು, 'ಇದು ಸುರಭಿಕಂದರವೆಂದು ಪ್ರಸಿದ್ಧವಾದ
ವಿಶೇಷ ರಮಣೀಯವಾದ ಪರ್ವತವು. ಇದು ಅಪ್ಸರಸೆ
ಯರಿಗೆ ಪ್ರಿಯವಾದುದು ಒಂದುವೇಳೆ ಆ ಊರ್ವ
ಶಿಯು ಇಲ್ಲೇ ದೊರೆತರೂ ದೊರೆಯಬಹುದು' ಎಂದು
ಕೊಂಡು ಆವೇಳೆಗೆ ಅಂಧಕಾರ ಪ್ರಾಪ್ತಿಯಾಗಲು
ಮಿಂಚಿನ ಬೆಳಕಿನಿಂದ ನೋಡುವುದಕ್ಕೆ ಆದೂ ಇಲ್ಲ

ದಿರಲು ವ್ಯಥೆಪಟ್ಟು ಆ ಪರ್ವತವನ್ನು ಕುರಿತು, "ಎಲೆ ಪರ್ವತವೆ! ತುಂಬಿ ಬೆಳೆದ ಮೈಯುಳ್ಳ, ನಿತಂಬವತಿಯೂ ಗುರುಸ್ತನವುಳ್ಳವಳೂ ಆದ ಆಕೆಯು ಮನ್ಮಥನ ಮನೆಯಾದ ಈ ಕಾಡಿನಲ್ಲೇನಾದರೂ ಇರುವಳೆ?" ಎಂದು ಕೇಳಿ ಪ್ರತ್ಯುತ್ತರ ಬರದಿರಲು 'ದೂರದಿಂದ ಕೇಳುವುದಿಲ್ಲ, ಹತ್ತಿರ ಹೋಗುವೆನು' ಎಂದು ಹೋಗಿ "ಎಲೆ ಪರ್ವತನಾಥನೆ, ನನ್ನಿಂದ ಬಿಡಲ್ಪಟ್ಟು ಒಬ್ಬಳೇ ತಿರುಗುತ್ತಿದ್ದ ಸರ್ವಾಂಗಸುಂದರಿಯಾದ ಆ ನನ್ನ ಕಾಂತೆಯನ್ನು, ಈ ವನೋದ್ದೇಶದಲ್ಲಿ ನೀನು ನೋಡಿದೆಯಾ?' ಎಂದು ಕೇಳಿ ಅಲ್ಲುಂಟಾದ ಪ್ರತಿಶಬ್ದವನ್ನು ಪ್ರತ್ಯುತ್ತರವೆಂದುಕೊಂಡು 'ಹಾಗಾದರೆ ನನ್ನ ಕಾಂತೆಯೆಲ್ಲಿ?' ಎಂದು ಕೇಳಿ ಉತ್ತರ ಬರದಿರಲು ಪ್ರತಿಧ್ವನಿಯೆಂದು ಆಗ ತಿಳಿದು, 'ದಣಿದಿರುವೆನು. ಈ ಗಿರಿನದಿಯ ದಡದಲ್ಲಿ ಕುಳಿತು ಈ ಅಲೆಗಳ ಮೇಲೆ ಬರುವ ಗಾಳಿಯನ್ನು ಸೇವಿಸುವೆನು' ಎಂದು ಅಲ್ಲಿ ಕುಳಿತುಕೊಳ್ಳುವನು.

ಹೊಸ ನೀರಿನಿಂದ ಕಲುಷವಾಗಿರುವ ನದಿಯನ್ನು ನೋಡಿ ಅದರಲ್ಲಿ ಪ್ರೀತಿಯನ್ನು ಪಡೆದು, 'ಅಸಹನೆಯಾದಾಕೆಯ ಭ್ರೂಭಂಗದಿಂದಲೂ, ಗಾಬರಿಯಾಗಿ ಚದುರಿರುವ ನೀರುಹಕ್ಕಿಗಳೆಂಬ ನಡುಕಟ್ಟಿನಿಂದಲೂ ತಡೆವ ರಭಸದಲ್ಲಿ ಜಾರಿರುವ ಒಟ್ಟೆಯನ್ನು ಎಳೆದುಕೊಳ್ಳುತ್ತಿರುವಂತೆ ಕಾಣುವ ನೊರೆಯಿಂದಲೂ ಕೂಡಿ ಅಲ್ಲಿಗಲ್ಲಿಗೆ ನಿಂತು ನಿಂತು, ಸುತ್ತಿಕೊಂಡು ಸುತ್ತಿಕೊಂಡು ಮುಂದೆಮುಂದೆಹೋಗುತ್ತಿರುವ ಈ ನದಿಯಾಗಿರಬೇಕು' ಎಂದು ನಿರ್ಧರಿಸಿ, ಅದಕ್ಕೆ ಕೈಮುಗಿದು

'ಎಲೆ! ನಿನ್ನಲ್ಲಿಯೇ ಮನಸ್ಸಿಟ್ಟುಕೊಂಡು, ಪ್ರಿಯ ವಾದಿಯಾಗಿ, ತಪ್ಪು ಮಾಡುವುದು ಎಂಬುದನ್ನೇ ಕಾಣದ ನನ್ನಲ್ಲಿ ಯಾವ ಅಪರಾಧವನ್ನು ಕಂಡೆ? ನಿನಗೆ ದಾಸನಾದ ನನ್ನನ್ನು ಯಾತಕ್ಕೆ ತೊರೆದೆ?' ಎಂದು ಕೇಳಿಕೊಂಡರೂ ನದಿಯು ಪ್ರಸನ್ನವಾಗದಿರಲು, 'ಊರ್ವಶಿಯು ಪುರೂರವನನ್ನು ಬಿಟ್ಟು ಸಮುದ್ರವನ್ನು ಎಂದಿಗೂ ಸೇರಳು ಆದರಿಂದ ಇದು ನದಿಯೇ ಆಗಿರಬೇಕು. ಇರಲಿ. ಶ್ರೇಯಸ್ಸೆಂಬುದು ನಮಗೆ ತಿಳಿಯದೆಯೇ ಪ್ರಾಪ್ತವಾಗುವುದು. ಆಕೆಯು ನನಗೆ ಕಾಣದೆ ಮಾಯವಾದ ಆಯೆಡೆಗೇ ಹೋಗುವೆನು' ಎಂದುಕೊಂಡು, ಅಲ್ಲಿದ್ದ ರಕ್ತಕದಂಬವನ್ನು ಗುರ್ತಿಸಿ, ಬೇಸಿಗೆಯ ಕೊನೆಯಲ್ಲಾಗುವ ಅದರ ಹೂವನ್ನು, ಇನ್ನೂ ಚನ್ನಾಗಿ ಅರಳದೆಯೇ ಇದ್ದರೂ, ತೆಗೆದು ಊರ್ವಶಿಯು ಮುಡಿದುಕೊಂಡುದನ್ನು ನೆನೆದು, ಇದೇ ಆಕೆಯು ಹೋದ ಮಾರ್ಗವೆಂದು ನಿಶ್ಚಯಿಸಿಕೊಂಡು ಅತ್ತ ಕಡೆಯೇ ಹೋಗುವನು.

ಅಲ್ಲಿರುವ ಒಂದು ಸಾರಂಗವನ್ನು ಕಂಡು ಅದರಿಂದೇನಾದರೂ ತನ್ನ ಪ್ರಿಯೆಯ ವರ್ತಮಾನವು ತಿಳಿದೀತೇನೋ ಎಂದು 'ಕಪ್ಪಗಿರುವೀ ಸಾರಗವು ವನಲಕ್ಷ್ಮಿಯು ಅರಣ್ಯದ ಸೊಬಗನ್ನು ನೋಡಲು ಬಿಟ್ಟಿರುವ ಕಣ್ಣಿನಂತೆ ಇರುವುದು' ಎಂದು ವರ್ಣಿಸಿ, ಮರಿಗೆ ಹಾಲು ಕೊಡುತ್ತಿರುವ ತನ್ನ ಕೆಳದಿಯನ್ನು ಕತ್ತು ತಿರುಗಿಸಿಕೊಂಡು ನೋಡುತ್ತಿರುವ ಆ ಸಾರಗವು ತನ್ನನ್ನು ಗಣಿಸದಿದ್ದರೂ ಚಿಂತೆಯಿಲ್ಲವೆಂದು, ಅದನ್ನು ಸಂಬೋಧಿಸಿ 'ಎಲೆ ಯೂಥಪತಿಯೆ! ನೀನು

ಈ ವನದಲ್ಲಿ ನನ್ನ ಪ್ರಿಯೆಯನ್ನು ಕಂಡೆಯಾ ?
ಆಕೆಯ ಗುರುತನ್ನು ಹೇಳುವೆನು ಕೇಳು. ನಿನ್ನ ಸಹ
ಚರಿಯಂತೆ ವಿಸ್ತಾರವಾದ ಕಣ್ಣುಳ್ಳವಳು. ಹಾಗೆ
ಯೇ ಲಕ್ಷಣವಾದ ನೋಟವುಳ್ಳವಳು" ಎಂದು ಹೇಳಿ
ದರೂ ಗಮನಿಸದೆ ತನ್ನ ಹೆಂಡತಿಯ ಕಡೆಗೇ ತಿರು
ಗಿದುದನ್ನು ನೋಡಿ, "ದುರ್ದಶೆಗಳಲ್ಲಿ ಅವಮಾನ
ವಾಗುವುದೂ ಸರಿಯೆ!" ಎಂದು ಮುಂದೆ ಹೋಗಿ,
ಅಲ್ಲಿ ಕಲ್ಲಿನ ಹೊಳ್ಳಿನಲ್ಲಿ ಕೆಂಪಗಿರುವ ಏನೋ
ಒಂದನ್ನು ಕಂಡು, "ಸಿಂಹವು ಬೇಟೆಯಾಡಿದ ಮೃಗದ
ಮಾಂಸದ ಚೂರಾದರೆ ಇಷ್ಟು ಪ್ರಭೆಯೆಲ್ಲಿಯದು ?
ಒಂದು ವೇಳೆ ಬೆಂಕಿಯ ಕಿಡಿಯಿರಬಹುದೇ,
ಎಂದರೆ, ಈಗತಾನೇ ಮಳೆಯಾಗಿರುವುದು. ಇದನ್ನು
ತೆಗೆದುಕೊಳ್ಳುವುದಕ್ಕೆ ಸೂರ್ಯನೇನಾದರೂ ಕರವ
ನ್ನು ನೀಡಿರುವನೋ ಎಂಬಂತಿರುವ, ರಕ್ತಾಶೋಕಕ್ಕೆ
ಸಮಾನವಾದ ಕಾಂತಿಯುಳ್ಳ ಇದು ರತ್ನವೆ ಆಗಿರ
ಬೇಕು. ನನ್ನ ಮನಸ್ಸನ್ನು ಅಪಹರಿಸಿರುವ ಇದನ್ನು
ತೆಗೆದುಕೊಳ್ಳುವೆನು." ಎಂದುಕೊಂಡು ಕೈ ನೀಡಿ,
ಹಾಗೆಯೇ,—"ಅಯ್ಯೋ ! ಈ ಮಣಿಯು ಮನ್ದಾರ
ಪುಷ್ಪವನ್ನು ಮುಡಿದಿರುವ ಆಕೆಯ ಕಬರಿಯಲ್ಲಿ
ಇರುವುದಕ್ಕೆ ಯೋಗ್ಯವಾದುದು. ಅಂಥಾ ಪ್ರಿಯೆಯೇ
ದುರ್ಲಭಳಾಗಿರಲು, ಈ ಮಣಿಯನ್ನು ತೆಗೆದುಕೊಂಡು,
ಏತಕ್ಕೆ ನನ್ನ ಕಣ್ಣೀರಿಂದ ಕೆಡಿಸಲಿ?" ಎಂದು
ಸುಮ್ಮನಾಗುವನು.

ಆಗ "ವತ್ಸ! ತೆಗೆದುಕೋ, ತೆಗೆದುಕೋ. ಪಾರ್ವತೀ
ದೇವಿಯ ಚರಣರಾಗದಿಂದ ಜನಿಸಿದ ಸಂಗಮನೀ

ಯು ಮಣಿಯು ಇದು. ಇದನ್ನು ಧರಿಸಿದವರು ಪ್ರಿಯ ಜನರನ್ನು ಬಹು ಬೇಗ ಹೊಂದುವರು.” ಎಂದು ಆಕಾಶವಾಣಿಯಾಗಲು, ಯಾರು ಹೀಗೆ ನನಗೆ ಅಪ್ಪಣೆ ಮಾಡುವರೆಂದು ನೋಡಿ ಭಗವಂತನಾದ ಚಂದ್ರನ ಅನುಗ್ರಹವೆಂದು ತಿಳಿದು, “ನಿಮಗ್ನಮಧ್ಯೆಯಾದಾಕೆ ಯನ್ನು ನನಗೆ ದೊರಕಿಸಿ ಕೊಟ್ಟದೇ ಆದರೆ, ಈಶ್ವರನು ಬಾಲಚಂದ್ರನನ್ನು ಧರಿಸುವಂತೆ ನಿನ್ನನ್ನು ಶಿಖಾಮಣಿಯನ್ನಾಗಿ ಧರಿಸುವೆನು” ಎಂದು ಆ ಸಂಗಮನೀಯಕ್ಕೆ ಹರಕೆ ಹೊತ್ತು, ಅದನ್ನು ತೆಗೆದು ಕೊಂಡು, ಅಲ್ಲಿರುವ ಒಂದು ಬಳ್ಳಿಯನ್ನು ನೋಡಿ, “ಇದೇನು? ಹೂವಿಲ್ಲದಿದ್ದರೂ, ಈ ಲತೆಯನ್ನು ನೋಡಿ ನನಗೆ ಅತಿ ಪ್ರೀತಿಯು ಆಗುತ್ತಿರುವುದು. ಇದಾದರೋ, ಮೇಘ ಜಲವು ಚಿಗುರನ್ನು ತೆಳುವಾಗಿ ನೆನೆಯಿಸಿರಲು, ಕಣ್ಣೀರಿಂದ ತೊಳೆದ ಚೆಂದುಟಿಯುಳ್ಳವಳಂತೆ; ಹೂವಿನ ಕಾಲವು ಕಳೆದು ಒಂದೂ ಹೂವಿಲ್ಲದೆ ಇರಲು ಆಭರಣಗಳನ್ನೇ ತೊಡದೇ ಇದ್ದವಳಂತೆ; ದುಂಬಿಯ ಶಬ್ದವಿಲ್ಲದಿರಲು, ಚಿಂತೆಯಿಂದ ಮೌನವಾಗಿ ಕುಳಿತಿರುವಳಂತೆ, ಕಾಲಿಗೆ ಬಿದ್ದರೂ ನನ್ನನ್ನು ಕೇಳದೆ ಹೋಗಿ, ಆಮೇಲೆ ಜನಿಸಿರುವ ಅನುತಾಪವುಳ್ಳ ಆ ಊರ್ವಶಿಯಂತೆಯೇ ಕಾಣುವುದು. ಆದರಿಂದ ಪ್ರಿಯೆಯಂತೆಯೇ ಇರುವ ಈ ಲತೆಯನ್ನು ಆಲಂಗಿಸುವೆನು” ಎಂದು ಆ ಬಳ್ಳಿಯನ್ನು ತಬ್ಬಿಕೊಳ್ಳಲು, ಅದೇ ಬಳ್ಳಿಯೇ ಸಂಗಮನೀಯದ ಪ್ರಭಾವದಿಂದ ಊರ್ವಶಿಯಾಗುವುದು. ರಾಜನು ಅಂಗಸ್ಪರ್ಶ ಸುಖವನ್ನು ಅನುಭವಿಸುತ್ತಾ, ಇನ್ನೂ

ಆದರಲ್ಲಿ ನಂಬಿಕೆ ಪಡದೆ, "ನಾನು ಪ್ರಿಯೆಯೆಂದು ತಿಳಿಯುತ್ತಿರುವುದೇ ಒಂದು ಕ್ಷಣದಲ್ಲಿ ಹಾಗಾಗದೇ ಹೋದೀತು. ಆದುದರಿಂದ ನಾನು ಪ್ರಿಯೆಯ ಅಂಗದ ಸ್ಪರ್ಶವನ್ನು ಹೊಂದಿದರೂ ತಟ್ಟನೆ ಕಣ್ಣು ಬಿಡಲಾರೆನು" ಎಂದು ಹಾಗೆಯೇ ಒಂದು ಗಳಿಗೆಯಿದ್ದು, ಕೊನೆಗೆ ನಿದಾನವಾಗಿ ಕಣ್ಣು ಬಿಟ್ಟು ಎದುರಿಗಿರುವ ಊರ್ವಶಿಯನ್ನು ನೋಡಿ, "ಪ್ರಿಯೆ! ನಿನ್ನ ವಿರಹವೆಂಬ ಅಂಧಕಾರದಲ್ಲಿ ಬಿದ್ದಿದ್ದ ನನಗೆ ನೀನು ದೊರೆತುದು ಹೋಗಿದ್ದ ಪ್ರಾಣಗಳು ಮರಳಿ ಬಂದಂತಾಯಿತು" ಎಂದು ನಲಿಯುವನು. ಆಕೆಯೂ, "ನಾನೂ ಮನೋದೃಷ್ಟಿಯಿಂದಲೇ ಎಲ್ಲವನ್ನೂ ನೋಡುತ್ತಿದ್ದೆನು" ಎಂದು, ತನಗೆ ಸಂಭವಿಸಿದ ದುರವಸ್ಥೆಯನ್ನೆಲ್ಲಾ "ನೀನಷ್ಟು ದಿವಸ ನನ್ನನ್ನು ಬಿಟ್ಟು ಹೇಗಿದ್ದೆ?" ಎಂದು ಆಶ್ಚರ್ಯ ಪಡುತ್ತಿರುವ ರಾಯನಿಗೆ ಅರಿಕೆ ಮಾಡುವಳು. ಆತನು, "ಸುಂದರಿ! ಸ್ವಲ್ಪ ಹಾಗೆಯೆ ನಿಂತುಕೊ" ಎಂದು ಆ ಸಂಗಮನೀಯವನ್ನು ಆಕೆಗೆ ಅಲಂಕರಿಸುವನು. ಆಮೇಲೆ ಊರ್ವಶಿಯು "ರಾಜಧಾನಿಯಿಂದ ಬಂದು ಬಹಳ ದಿನವಾಯಿತು"ಎಂದು ಜ್ಞಾಪಿಸುವಳು. ಮಹಾರಾಜನಿಷ್ಟದಂತೆ ಮಿಂಚೆಂಬ ಪತಾಕೆಯಿಂದಲೂ, ಸುರಧನುಗಳೆಂಬ ಚಿತ್ರಗಳಿಂದಲೂ ಕೂಡಿರುವ, ಹೊಸ ಮೋಡವೆಂಬ ವಿಮಾನದಲ್ಲಿ ಕುಳಿತು, ಇಬ್ಬರೂ ಹೊರಟು ಹೋಗುವರು.

ಇಂತಿದು ಚತುರ್ಥಾಂಕಂವು.



*

# ಪಂಚಮಾಂಕ

---

ನಂದನವನವೇ ಮೊದಲಾದ ಪ್ರದೇಶಗಳಲ್ಲಿ ಊ
ರ್ವಶೀ ಸಹಾಯನಾಗಿ ವಿಹರಿಸುತ್ತಿದ್ದ ರಾಜನು ಹಿಂ
ದಿರುಗಿ ಬಂದು ರಾಜಧಾನಿಯನ್ನು ಸೇರಿ, ರಾಜ್ಯಭಾ
ರವನ್ನು ಮಾಡುತ್ತಾ ಸುಖದಿಂದಿದ್ದನು. ಆತನಿಗೆ
ಸಂತಾನವಿಲ್ಲವೆಂಬುದೊಂದು ವಿನಾ ಇನ್ನಾವ ಯೋ
ಚನೆಯೂ ಇರಲಿಲ್ಲ

ಹೀಗಿರಲು ಒಂದಾನೊಂದು ದಿನ ಯೇನೋ ವಿಶೇ
ಷವೆಂದು ಅರಸನು ದೇವಿಯೊಡನೆ ಗಂಗಾ ಯಮುನಾ
ಸಂಗಮದಲ್ಲಿ ಮೀಯ್ಯುವುದಕ್ಕೆ ಹೋಗಿದ್ದನು.
ಆಗ ಅವರ ಅಲಂಕಾರಕ್ಕೆಂದು ಚೇಟಿಯು, ತಾಳೆಯ
ಗರಿಯ ಬೀಸಣಿಗೆಯನ್ನು ಮುಚ್ಚಿದ ಒಂದು ತಟ್ಟೆ
ಯಲ್ಲಿ ರತ್ನಾಭರಣಗಳನ್ನೆಲ್ಲಾ ಇಟ್ಟುಕೊಂಡು ಹೋ
ಗುತ್ತಿರಲು, ಅರಮನೆಯಲ್ಲಿ ಸಾಕಿದ್ದ ಒಂದು ಗಿಡಗವು
ಸರ್ರನಿಳಿದು ಮಾಂಸವೆಂಬ ಭ್ರಾಂತಿಯಿಂದ ಸಂಗಮ
ನೀಯವೆಂಬ ಮಣಿಯನ್ನು ಹಾರಿಸಿಕೊಂಡು ಹೋ
ಯಿತು.

ಇದನ್ನು ತಿಳಿದ ರಾಜನು ಊರ್ವಶಿಯನ್ನು ದೊರ
ಕಿಸಿದ ಮಣಿಯು ಹೋಯಿತಲ್ಲಾ ಎಂಬ ಆಕ್ರೋಶ
ದಿಂದ ಧನುವನ್ನು ತೆಗೆದುಕೊಳ್ಳುವುದರೊಳಗಾಗಿ
ಆ ಹಕ್ಕಿಯು, " ಆ ಮಣಿಯ ಪ್ರಭೆಯೆಂಬ ಚಿಗುರಿ

ನಿಂದ ದಿಕ್ಕುಗಳಿಗೆ ಅಶೋಕದ ಚಿಗುರಿನ ಕಿವಿಯೊಡ
ವೆಯನ್ನು ಮಾಡುವಂತೆ ಸುತ್ತುತ್ತಾ ಅಲಾತ ಚಕ್ರ
(ದೀವಟಿಗೆಯ ಸಲಾಮು) ಭ್ರಮೆಯನ್ನುಂಟುಮಾಡು
ತ್ತಾ ರಾತ್ರಿಯಲ್ಲಿ ಮೋಡದ ನಡುವೆ ಮೆರೆಯುವ ಅಂ
ಗಾರಕ ನಕ್ಷತ್ರದಂತೆ ಶರಪಥವನ್ನತಿಕ್ರಮಿಸುವುದು.
ರಾಜನೂ "ಆ ಹಕ್ಕಿಯು ಸಂಜೆಗೆ ಯಾವುದಾದರೂ
ಮರೆದ ಮೇಲೆ ಕೂಡುವುದು. ಆಗ ಅದನ್ನು ಹೊಡೆದು
ಮಣಿಯನ್ನು ತರುವುದು" ಎಂದು ಆಜ್ಞಾಪಿಸುವನು.

ಆ ವೇಳೆಗೆ ಆಗಲೆ ಮತ್ತೊಬ್ಬನು ಧನುರ್ಧಾರಿ
ಯಿಂದ ಆಹತವಾಗಿ, ಆ ಹಕ್ಕಿಯು ಬಿದ್ದು ಹೋಗ
ಲು, ಆ ಮಣಿಯನ್ನು ಆ ಹಕ್ಕಿಯನ್ನೂ ಹೊಡೆದ
ಶರವನ್ನೂ ಸಹ ತೆಗೆದುಕೊಂಡು ಕಂಚುಕಿಯು
ಬಂದು ರಾಯನಿಗೊಪ್ಪಿಸಲು, ರಾಯನು ಸಂತುಷ್ಟ
ನಾಗಿ, ಆ ಶರದಲ್ಲಿ "ಊರ್ವಶೀ ಪುರೂರವ ಸಂಭ
ವನಾದ ಆಯುವಿನ ಬಾಣವಿದು. ದ್ವೇಷಿಸಿದವರ
ಆಯುಷ್ಯವನ್ನು ತೊಡೆಯುವುದು" ಎಂದು ಬರೆದಿರು
ವುದನ್ನು ನೋಡಿ ಆಶ್ಚರ್ಯಪಟ್ಟು, ವಿದೂಷಕನನ್ನು
ಕುರಿತು, "ವಯಸ್ಯ! ಆ ನೈಮಿಷಾರಣ್ಯದಲ್ಲಿ ನಡೆದ
ಯಜ್ಞ ಕಾಲದಲ್ಲಿ ವಿನಾ ಮತ್ತಾವಾಗಲೂ ಆಕೆ
ಯನ್ನು ನಾನು ಬಿಟ್ಟಿದ್ದುದಿಲ್ಲವಾದರೂ. ಆಕೆ
ಯಲ್ಲಿ ನಾನು ಗರ್ಭಚಿನ್ಹೆಯನ್ನು ಕಾಣಲಿಲ್ಲ.
ಕಪ್ಪಾದ ಸ್ತನಾಗ್ರವನ್ನು ನೋಡಲಿಲ್ಲ. ಲವಲೀ
ಲತೆಯ ಚಿಗುರಿನಂತೆ ಬೆಳ್ಳಗಿರುವ ಮುಖ ಕಾಂತಿ
ಯನ್ನು ನೋಡಲಿಲ್ಲ. ಆಕೆಯು ಆಲಸ್ಯ ಪಡುತ್ತಿದ್ದು

ದನ್ನಂತೂ ನೋಡಲೇ ಇಲ್ಲ'' ಎಂದು ಹೇಳಿ ವಿಚಾರಿಸುವನು. ವಿದೂಷಕನು, “ ಮಾನುಷೀ ಧರ್ಮವನ್ನು ದಿವ್ಯ ವನಿತೆಯಾದ ಆಕೆಯಲ್ಲಿ ಭಾವಿಸದಿರು. ಆಕೆಯು ಎಲ್ಲವನ್ನೂ ಏತಕ್ಕಾಗಿ ಮುಚ್ಚಿಟ್ಟಿರುವಳೋ, ಯಾರು ಬಲ್ಲರು?'' ಎಂದು ರಾಯನಿಗೆ ಅರಿಕೆ ಮಾಡುವನು.

ಅಷ್ಟರಲ್ಲಿಯೇ ಚ್ಯವನಾಶ್ರಮದಿಂದ ಬಂದ ಒಬ್ಬ ತಾಪಸಿಯು, ಆ ಹಕ್ಕಿಯನ್ನು ಹೊಡೆದ ಕುಮಾರನನ್ನು ಕರೆದು ತಂದು ರಾಯನಿಗೊಪ್ಪಿಸುವಳು. ತಂದೆ ಮಕ್ಕಳೆಂಬ ಸಂಬಂಧವನ್ನು ಅವರವರ ಅಂಗಗಳೇ ಉದ್ಘೋಷಿಸುತ್ತಿರಲು, ರಾಯನು, ಆ ಕುವರನನ್ನು ನೋಡಿ ವಾತ್ಸಲ್ಯದಿಂದ ಹೃದಯವು ಉಬ್ಬಿ, ಮನಸ್ಸು ಪ್ರಸನ್ನವಾಗಿರಲು, ತನಗೆ ನಮಸ್ಕರಿಸಿದ ಆತನನ್ನು ತಬ್ಬಿಕೊಳ್ಳುವನು. ತಾಪಸಿಯೂ ಆತನಿಗೆ “ಊರ್ವಶಿಯು ಈತನನ್ನು ಇನ್ನೂ ಮಗುವಾಗಿರುವಾಗಲೇ ಕರೆತಂದು ಆಶ್ರಮದಲ್ಲಿ ಬಿಟ್ಟಳು. ಈತನಿಗೆ ಚ್ಯವನ ಭಗವಾನರು ಕ್ಷತ್ರಿಯೋಚಿತವಾದ ಸಂಸ್ಕಾರಗಳನ್ನೆಲ್ಲಾ ಮಾಡಿ, ಧನುರ್ವೇವವನ್ನು ಕಲಿಸಿದರು. ಈತನು ಇಂದು ಸಮಿತ್ಕುಶಾರ್ಥವಾಗಿ ಹೋಗಿದ್ದು, ಮಾಂಸವನ್ನು ಬಾಯಲ್ಲಿ ಕಚ್ಚಿಕೊಂಡು, ಮರದ ಮೇಲೆ ಕೂತುಕೊಳ್ಳುತ್ತಿದ್ದ ಹಕ್ಕಿಯನ್ನು ಹೊಡೆದನು. ಆದುದರಿಂದ ಚ್ಯವನ ಭಗವಾನರು ಇವನನ್ನು ಕರೆದುಕೊಂಡು ಹೋಗಿ ಊರ್ವಶಿಗೊಪ್ಪಿಸಿಬಿಡೆಂದು ಅಪ್ಪಣೆ ಮಾಡಿದರು. ಅದಕ್ಕಾಗಿ ಆಕೆಯನ್ನು

ನೋಡ ಬಂದೆನು" ಎಂದು ಅರಿಕೆ ಮಾಡುವಳು. ರಾಯನೂ ಊರ್ವಶಿಗೆ ಹೇಳಿ ಕಳುಹಿಸಿ, ಮಗನನ್ನು ಮುತ್ತಿ ತಬ್ಬಿಕೊಂಡು ತನ್ನ ಚಿನ್ನದ ಮಣೆಯ ಮೇಲೆ ಕುಳ್ಳಿರಿಸಿಕೊಂಡು ತಲೆಯನ್ನು ಸವರುತ್ತಿರುವನು. ಊರ್ವಶಿಯೂ ಆ ವೇಳೆಗೆ ಸರಿಯಾಗಿ ಅಲ್ಲಿಗೆ ಬಂದು, ಮಗನನ್ನು ಗುರ್ತಿಸುವಳು. ತಾಪಸಿಯೂ ದ್ವಿತೀಯಾ ಶ್ರಮಯೋಗ್ಯನಾದ, ಮಗನನ್ನು ಊರ್ವಶಿಗೊಪ್ಪಿಸಿ, ಎಲ್ಲರನ್ನೂ ಬೀಳ್ಕೊಂಡು ಆಶ್ರಮಕ್ಕೆ ಹಿಂತಿರುಗುವಳು.

ರಾಯನು "ಸುಂದರಿ! ಪೌಲೋಮೀ ಸಂಭವನಾದ ಜಯಂತನಿಂದ ಪುರಂದರನು ಪುತ್ರವಂತರಲ್ಲಿ ಶ್ರೇಷ್ಠನಾದಂತೆ, ನೀನು ಕೊಟ್ಟ ಈ ಮಗನಿಂದ ನಾನೂ ಶ್ರೇಷ್ಠನಾದೆನು." ಎಂದು ಊರ್ವಶಿಯನ್ನು ಬಹುವಾಗಿ ಅಭಿನಂದಿಸಲು, ಆಕೆಗೆ ಏನೋ ನೆನೆಪಿಗೆ ಬಂದು, ಆಕೆಯು ವಿಷಾದಿಸುವಳು. "ವಂಶವು ಬೆಳೆಯಿತೆಂದು ನಾನು ಸಂತೋಷ ಸಾಗರದಲ್ಲಿ ಮುಳುಗೇಳುತ್ತಿರುವ ಈ ಸಮಯದಲ್ಲಿ ನೀನೇಕೆ ಕಂಬನಿಯಿಂದ ಸ್ತನಾಂಶುಕವನ್ನು ತೋಯಿಸುತ್ತಿರುವೆ?" ಎಂದು ರಾಯನು ಭೀತನಾಗಲು, ಊರ್ವಶಿಯು ಆತನಿಗೆ, ಹಿಂದೆ ಇಂದ್ರನು ಮಾಡಿದ್ದ "ನಿನ್ನಲ್ಲಿ ಜನಿಸಿದ ಪುತ್ರನ ಮುಖವನ್ನು ಕಾಣುವವರೆಗೆ ಮಾತ್ರ ನೀನು ಪುರೂರವನಲ್ಲಿರು." ಎಂಬ ಸಮಯವನ್ನು ವಿಜ್ಞಾಪಿಸಿ, ತಾನು ರಾಯನನ್ನು ಅಗಲುವ ವೇಳೆಯು ಬಂದಿತೆಂದು ವ್ಯಥಿಸುವಳು.

ರಾಯನು ಆ ಮಾತನ್ನು ಕೇಳುತ್ತಲೇ ಮೂರ್ಛೆ ಹೋಗಿ, ಮತ್ತೆ ಹಾಗೆಯೇ ಅರಿವು ತಂದುಕೊಂಡು, "ಪುತ್ರನು ಲಭಿಸಿದನೆಂದು ಸಂತೋಷ ಪರವಶನಾಗಿದ್ದ ನನಗೆ, ಈಗಲೇ ನಿನ್ನ ವಿಯೋಗವೂ ಆಗುವುದೆಂದರೆ, ಮೊದಲನೆಯ ಮಳೆಯಲ್ಲಿ ನೆನೆದು, ಬೇಸಿಗೆಯ ಬೇಗೆಯನ್ನು ಕಳೆಯುತ್ತಿರುವ ಮಹಾವೃಕ್ಷವು ಹಾಗೆಯೇ ಸಿಡಿಲು ಬಿದ್ದು ಬಿದ್ದಂತಾಯಿತು" ಎಂದು ವ್ಯಥೆಗೊಳ್ಳುವನು.

ವಿದೂಷಕನು "ಹಾಗಾದರೇನು? ನೀನು ನಾಡು ಡೆಯುಟ್ಟು ವಾನಪ್ರಸ್ಥನಾಗಿ ತಪೋವನಗಳಿಗೆ ಹೊರಡುವೆಯೆಂದು ಇದರ ಅರ್ಥವೇನು?" ಎಂದು ಗಾಬರಿ ಪಡುವನು. ಊರ್ವಶಿಯು "ಅಯ್ಯೋ! ನನ್ನ ದುರದೃಷ್ಟವೆ! ಪುತ್ರ ರತ್ನದ ಲಾಭದನಂತರ ನಾನೂ ಅರಸನನ್ನು ಬಿಟ್ಟು ಸ್ವರ್ಗಕ್ಕೆ ಹೊರಟುಹೋಗಬೇಕಾಗಿರುವುದನ್ನು ಈ ವಚನವು ಸೂಚಿಸುವುದಲ್ಲಾ!" ಎಂದು ಅತಿಯಾಗಿ ಚಿಂತಿಸುವಳು.

ಅರಸನೂ "ಸುಂದರಿ! ಹಾಗಲ್ಲ ಪರರಧೀನದಲ್ಲಿರುವಾಗ ಆತ್ಮಪ್ರಿಯವನ್ನು ಸಾಧಿಸಿಕೊಳ್ಳಲು ಆಗುವುದಿಲ್ಲ. ಆದರಿಂದ ನೀನು ಪ್ರಭುವಿನ ಆಜ್ಞೆಯನ್ನು ನಡೆಸು. ಈಗ ನಾನೂ ಕೂಡ, ನಿನ್ನ ಮಗನಿಗೆ ರಾಜ್ಯಭಾರವನ್ನು ವಹಿಸಿ, ಜಿಂಕೆಗಳ ಹಿಂಡು ತಿರುಗುವ ವನಗಳನ್ನು ಆಶ್ರಯಿಸುವೆನು" ಎಂದು ಊರ್ವಶಿಯನ್ನೂ, "ನೃಪಪುಂಗವನು ಧರಿಸಿರುವ ರಾಜ್ಯದಲ್ಲಿ ಎಳೆಯ ಹುಡುಗನನ್ನು ನಿಯೋಜಿಸುವುದು

ಸರಿಯೆ?'' ಎಂದು ಮರುಗುವ ರಾಯುಗುವರನನ್ನು, “ವತ್ಸ! ಹಾಗಲ್ಲ. ಮರಿಯಾಗಿದ್ದರೂ, ಗಂಧದ್ವಿಪವು ಇತರ ಗಜಗಳನ್ನು ಗೆಲ್ಲಬಲ್ಲುದು. ಹಾವು ಮರಿಯಾಗಿದ್ದರೂ, ಅದರ ವಿಷವು ಮಾತ್ರ ತೀವ್ರವಾಗಿಯೇ ಇರುವುದು. ನೃಪತಿಯು ಬಾಲನಾಗಿದ್ದರೂ ಭೂಮಿಯನ್ನು ಆಳಬಲ್ಲನು ಸ್ವಕಾರ್ಯವನ್ನು ನಿರ್ವಹಿಸುವ ಗುಣವು ಜನ್ಮದಿಂದಲೇ ಬರುವುದಲ್ಲದೆ ವಯಸ್ಸಿನಿಂದಲ್ಲ'' ಎಂದು ಆತನನ್ನೂ ಸಮಾಧಾನಪಡಿಸಿ, “ಆಯುವಿಗೆ ರಾಜ್ಯಾಭಿಷೇಕ ಮಾಡಲು ಸಾಮಗ್ರಿಯನ್ನು ಸಿದ್ಧಪಡಿಸೆಂ'' ದು ಅಮಾತ್ಯನಿಗೆ ಆಜ್ಞೆಮಾಡುವನು.

ಆ ವೇಳೆಗೆ, ಅಂತರಿಕ್ಷದಿಂದ, ಗೋರೋಚನದಂತೆ ಪಿಂಗಲವರ್ಣವಾದ ಜಟಾಕಲಾಪವುಳ್ಳ, ಚಂದ್ರನಂತೆ ನಿರ್ಮಲವಾದ ಯಜ್ಞೋಪವಿತವುಳ್ಳ, ಮುತ್ತಿನ ಹಾರಗಳಿಂದ ಅಲಂಕೃತನಾದ, ಚಿನ್ನದ ಚಿಗುರಿನಿಂದ ಕೂಡಿತಿರುಗುತ್ತಿರುವ ಕಲ್ಪವೃಕ್ಷವೋ ಎಂಬಂತಿರುವ ನಾರದನು ಬಂದು ರಾಯನನ್ನು ಸಮಾಧಾನಪಡಿಸಿ “ಎಲೈ ರಾಯನೇ, ಇಂದ್ರನು ಹೀಗೆ ಆಜ್ಞಾಪಿಸುವನು. ಮುಂದೆ ಸುರಾಸುರರಿಗೆ ಯುದ್ಧವಾಗುವುದೆಂದು ತ್ರಿಕಾಲಜ್ಞಾನಿಗಳಾದ ಮಹರ್ಷಿಗಳು ಅಪ್ಪಣೆಕೊಟ್ಟಿರುವರು. ನೀನು ನಮಗೆ ಯುದ್ಧಕಾಲದಲ್ಲಿ ಸಹಾಯನಾಗತಕ್ಕವನು. ಆದುದರಿಂದ ನೀನು ಶಸ್ತ್ರಸಂನ್ಯಾಸಮಾಡುವುದು ತಕ್ಕುದಲ್ಲ. ಈ ಊರ್ವಶಿಯೂ ಕೂಡ ಜನ್ಮಾಂತ್ಯದವರೆಗೂ ನಿನ್ನಲ್ಲಿಯೇ ಇರಲಿ. ಸೂರ್ಯ

ನು ತೇಜಸ್ಸಿನಿಂದ ಅಗ್ನಿಯನ್ನೂ ಅಗ್ನಿಯು ಸೂರ್ಯ
ನನ್ನೂ ಪ್ರಜ್ವಲಿಸುವಂತೆ ನೀನು ವಾಸವನ ಕಾರ್ಯ
ವನ್ನೂ ನಿನ್ನ ಕಾರ್ಯವನ್ನು ವಾಸವನೂ ಮಾಡು
ವುದು.'' ಎಂದು ತನ್ನ ಜತೆಯಲ್ಲಿ ಬಂದ ರಂಭಾದ್ಯಪ್ಸ
ರೆಯರು ತಂದ ದಿವ್ಯೋದಕಗಳಿಂದ ಆಯುವಿಗೆ ಯೌ
ವ್ವರಾಜ್ಯಾಭಿಷೇಕ ಮಾಡಿದನು. ರಾಯನು ಕುಲಧು
ರಂಧರನಾಗೆಂದೂ ಊರ್ವಶಿಯು ಪಿತೃವನ್ನಾರಾಧಿಸು
ವನಾಗೆಂದೂ ಆಶೀರ್ವಾದ ಮಾಡಿದರು. ವೈತಾಳಿಕರು
''ದೇವರ್ಷಿಯಾದತ್ರಿಯು ಬ್ರಹ್ಮನಿಗೂ, ಅತ್ರಿಗೆ ಚಂದ್ರ
ನೂ, ಚಂದ್ರನಿಗೆ ಬುಧನೂ, ಆತನಿಗೆ ನಮ್ಮ ಸ್ವಾಮಿ
ಯಾದ ಪುರೂರವನೂ ಇರುವಂತೆ ನೀನೂ ಲೋಕಮ
ನೋಹರವಾದ ಗುಣಗಳಿಂದ ನಿನ್ನ ತಂದೆಗೆ ಅನುರೂ
ಪನಾಗು. ಅತಿಶಯವಾದ ನಿನ್ನ ವಂಶದಲ್ಲಿ ಸಮಸ್ತ
ವಾದ ಆಶೀರ್ವಾದಗಳೂ ಫಲಿಸಲಿ, ಎಂದು ಹೊಗಳಲು,
ಮತ್ತೊಬ್ಬ ವೈತಾಳಿಕನು ''ದೊಡ್ಡವರಿಗೆಲ್ಲಾ ದೊಡ್ಡವ
ನಾದ ಈ ನಿನ್ನ ತಂದೆಯಲ್ಲಿದ್ದ ರಾಜ್ಯಲಕ್ಷ್ಮಿಯು
ಹಿಮವಂತನಲ್ಲಿದ್ದುಕೊಂಡು ಸಮುದ್ರವನ್ನು ಸೇರಿದ
ಗಂಗೆಯಂತೆ ಚಲಿಸದ ಧೈರ್ಯವುಳ್ಳ ನಿನ್ನಲ್ಲಿಯೂ
ಸ್ಥಿತಿಯನ್ನು ಹೊಂದಿ ಮೆರೆಯುವಳು'' ಎಂದು ಹೊಗ
ಳಲು, ನಾರದನು ''ನಿನ್ನ ಮಗ ಆಯುವಿನ ಯೌವರಾ
ಜ್ಯಾಭಿಷೇಕವು ಇಂದ್ರನು ಮಹಾಸೇನನನ್ನು ಸೈನ್ಯಾಧಿ
ಪತ್ಯದಲ್ಲಿ ಅಭಿಷೇಕ ಮಾಡಿದ್ದನ್ನು ಜ್ಞಾಪಕಕ್ಕೆ ತರು
ವುದು'' ಎನ್ನುತ್ತಿರಲು, ಕವಿಯು ''ಪರಸ್ಪರ ವಿರೋಧಿನಿ
ಯರಾಗಿ ಒಂದೇಕಡೆ ಕಾಣುವಿಕೆಯೆಂಬುವುದು ದುರ್ಲ
ಭವಾಗಿರುವ ಶ್ರೀ ಸರಸ್ವತಿಯರು ಒಟ್ಟಿಗಿರಲಿ. ಒಳ್ಳೆಯ

ವರಿಗೆ ಸರ್ವದಾ ಮಹತ್ವಗಳುಂಟಾಗಲಿ” ಎಂದು ಭರತ ವಾಕ್ಯವನ್ನು ನುಡಿಸಿ ತ್ರೋಟಕವನ್ನು ಸಾಂಗವಾಗಿ ಸಮರ್ಥಿಸಿದನು.

— ಸಂಪೂರ್ಣ —

ಮಕ್ಕಳ ಪುಸ್ತಕ ಪ್ರೆಸ್, ಬೆಂಗಳೂರು ಸಿಟಿ.

ತಾರೀಖು ೧೫—೨—೧೯೩೦ ನೇ ಶನಿವಾರ

ಬೆಂಗಳೂರಿನಲ್ಲಿ-ಮೈಸೂರು ಸಂಸ್ಥಾನದ

ಯುವಜನ ಸಂಘದ ಪರವಾಗಿ

ಮಾಡಿದ ಉಪನ್ಯಾಸ.

# ತರುಣ ಪ್ರಪಂಚ.



ಇಂದು ನನಗೆ ಬಹಳ ಆನಂದವಾಗಿದೆ. ನಾನು ಸಂತೋಷದಲ್ಲಿ ಮುಳಿಗಿರುವಂತಿದೆ. ಉತ್ಸಾಹದಿಂದ ಎದ್ದು ಹಾರುವಂತಿದೆ. ಏಕೆಂದರೆ—ಇಂದು ನಾನು ನಿಂತಿರುವುದು- ತರುಣರ ಕ್ಷೇತ್ರದಲ್ಲಿ; ಇಂದು ಮಾತನಾಡುತ್ತಿರುವುದು, ತರುಣರ ಮಧ್ಯದಲ್ಲಿ; ಇಂದು ನಾನು ನೋಡುತ್ತಿರುವುದು, ಆಶೆ ಭರವಸೆಗಳಿಂದ ನೋಡುತ್ತಿರುವುದು, ತರುಣ ಪ್ರಪಂಚದಲ್ಲಿ. ಇಂದು ನನಗೆ ಭರವಸೆಯಿರುವುದು, ತರುಣ ಪ್ರಪಂಚದಲ್ಲಿ. ನನ್ನ ಮುಂದಿನ ಸೇವೆಯು ತರುಣರ ಜೊತೆಯಲ್ಲಿ. ನಾನು ತರುಣ. ನನ್ನ ಸಹಾಯಕರೂ ತರುಣರು. ನನ್ನ ದೇಶವು ತರುಣರ ಕಡೆಗೆ ನೋಡುತ್ತಿದೆ.

ಇಂದು ಜಗತ್ತಿನಲ್ಲಿ ತರುಣರ ಯುಗವು ಆರಂಭವಾಗಿದೆ. ಎಲ್ಲ ರಾಷ್ಟ್ರಗಳಲ್ಲಿಯೂ ತರುಣ ಯುಗದ ಅರುಣೋದಯವಾಗಿದೆ. ಪಾಶ್ಚಾತ್ಯ ರಾಷ್ಟ್ರಗಳ ಕಡೆಗೆ ನೋಡಿರಿ! ಯುರೋಪಿನ ಘೋರಯುದ್ಧದಿಂದ ಜರ್ಮನೀ ರಾಜ್ಯವು ಪುಡಿ ಪುಡಿಯಾಗಿ ಹೋಗಿತ್ತು. ಜರ್ಮನಿಯಲ್ಲಿ ತರುಣ ಯುಗದ ಆವಿರ್ಭಾವವಾಗಿ, ನವಚೇತನದಿಂದ ಜರ್ಮನಿಯು ಹೊಸದಾಗಿ ಆವಿರ್ಭಾವವಾಯಿತು. ಅಲ್ಲಿ ರಾಜ್ಯವನ್ನು ಆಳುವವರು ತರುಣರು. ಐಶ್ವರ್ಯವನ್ನು ಗಳಿಸುವವರು ತರುಣರು.

ಜರ್ಮನಿಯ ವಿಷಯದಲ್ಲಿ ಶತ್ರುಗಳಿಗೂ ಕೂಡ ಪ್ರೀತಿ ವಿಶ್ವಾಸಗಳುಂಟಾಗುವಂತೆ ಮಾಡಿದವರು ತರುಣರು. ಅದನ್ನು ನೋಡಿ ಪ್ರಪಂಚವೆಲ್ಲವೂ ತಲೆದೂಗುವಂತೆ ಮಾಡಿದವರು ತರುಣರು.

ರಷ್ಯಾದೇಶದಲ್ಲಿ ಹಳೆಯ ಪಂಥದ ಚಕ್ರಾಧಿಪತ್ಯವಿತ್ತು ಬರಬರುತ್ತಾ ನಿರಂಕುಶಾಧಿಕಾರದ ಶಿಖರಕ್ಕೇರಿತು. ಅಲ್ಲಿ ಜಾರ್ ಚಕ್ರವರ್ತಿಗಳಿಗೆ-ಅವರ ಆಪ್ತೇಷ್ಟರಿಗೆ-ಅವರ ಅಧಿಕಾರಿವರ್ಗದವರಿಗೆ-ಅವರ ಮೈತ್ರಿಯನ್ನು ಸಂಪಾದಿಸಿದ ಐಶ್ವರ್ಯವಂತರಿಗೆ-ಎದುರಿಲ್ಲದೇ ಹೋಯಿತು. ಬಡವರ ಕಷ್ಟಕ್ಕೆ ಕೊನೆಮೊದಲಿಲ್ಲದೇ ಹೋಯಿತು. ಬಡವರು ಕಷ್ಟಪಟ್ಟು ನಾಲ್ಕು ಕಾಸುಗಳನ್ನು ಕೈಲಿಟ್ಟುಕೊಂಡರೆ ಅದನ್ನು ಬಲಾಢ್ಯರು ಕಿತ್ತು ತಿನ್ನುತ್ತಿದ್ದರು ಬಡವರಿಗೆ "ತನ್ನದು" ಎಂದುಕೊಳ್ಳುವ ವಸ್ತುವೇ ಇಲ್ಲದಂತಾಯಿತು. ಬಡವರ ಅನ್ನವು ಅವರದಲ್ಲ. ಅವರ ದುಡ್ಡು ಅವರಲ್ಲಿಲ್ಲ. ಅವರ ಹೆಂಡರು ಮಕ್ಕಳ ಪಾಡು ಕಾಡುಪಾಲು! ಬಡವರ ಸರ್ವಸ್ವವೂ ಐಶ್ವರ್ಯವಂತರ ಭೋಗ ಪೂರಣಕ್ಕೇ ಪರ್ಯವಸಾನವಾಗುತ್ತಿತ್ತು. ಇದರಿಂದ ದೇಶದಲ್ಲಿ ಕ್ಷೋಭೆಯುಂಟಾಯಿತು ತರುಣರು ತಲೆಎತ್ತಿ ನೋಡಿದರು ಸಹಿಸಲಾಗಲಿಲ್ಲ. ಪ್ರಳಯ ಕರ್ಮಗಳಿಗೆ ಆರಂಭಿಸಿದರು. ಎಲ್ಲಾ ತಲೆಕೆಳಗಾಯಿತು. ಐಶ್ವರ್ಯವಂತರು ದಿಕ್ಕಿಲ್ಲದ ಭಿಕಾರಿಗಳಾದರು. ಅಧಿಕಾರಿಗಳು ಪ್ರಾಣಗಳನ್ನು ಕಳಕೊಂಡರು. ಜಾರ್ ಚಕ್ರವರ್ತಿಗೆ ಚಿತ್ರವಧೆಯಾಯಿತು. ಆ ದೊಡ್ಡ ಚಕ್ರಾಧಿಪತ್ಯವು, ಪ್ರಪಂಚದಲ್ಲೆಲ್ಲಾ ತಲೆಎತ್ತಿ ಮೆರೆಯುತಿದ್ದ ಆ ಆಸುರೀ ಚಕ್ರಾಧಿಪತ್ಯವು ನಿರ್ನಾಮವಾಗಿ ಹೋಯಿತು.

ರಷ್ಯದಲ್ಲಿ ನವಯುಗವು ಆರಂಭವಾಯಿತು. ಆದರ ಪರಿಣಾಮವೇನಾಗುತ್ತದೋ, ಎಂದು ಪ್ರಪಂಚವೆಲ್ಲವೂ ಅತ್ತ ಕಡೆಗೆ ನೋಡುತ್ತಿದೆ.

ಟರ್ಕಿಯು ಮತ್ತೊಂದು ರಾಜ್ಯ! ಅದು ಬೇರೊಂದು ಜನಾಂಗದವರದು. ಅದು ತುರುಕರ ರಾಜ್ಯ. ಅಲ್ಲಿರುವವರು ತುರಕ ಜನಾಂಗದವರು. ಅಲ್ಲಿ ಹಳೆಯ ಕಾಲದ ರಾಜ್ಯವಿತ್ತು ಮತದ ಅಂಧಶ್ರದ್ಧೆಯಿತ್ತು. ರಾಜ್ಯದಲ್ಲಿ ಪ್ರಜಾಪೀಡೆಯು ಪ್ರಬಲಿಸಿತ್ತು. ಸಮಾಜ ಸ್ವಾಮಿಗಳ ಅಮಲು ಬಲು ಜೋರಾಗಿತ್ತು. ಯಾವುದೋ ಒಂದು ವಳಸಂಚಿನಲ್ಲಿ ಘೋರ ಯುದ್ಧದಲ್ಲಿ ತುರ್ಕಿಯು ಜರ್ಮನಿಯ ಪಕ್ಷವನ್ನು ಸೇರಿತು. ನಮ್ಮ ಮಿತ್ರಮಂಡಲಿಯವರು ಅದನ್ನು ಪೂರ್ಣವಾಗಿ ಜಯಿಸಿಬಿಟ್ಟರು. ದಾಸ್ಯದ ಸಂಕೋಲೆಗಳನ್ನು ತೊಡಿಸಿದರು. ಆದರೆ ಆ ಸಂಕೋಲೆಯನ್ನು ತೊಟ್ಟುಕೊಂಡು ಟರ್ಕಿಯು ನಿದ್ರಿಸಲಿಲ್ಲ. ಕ್ಷಣದಲ್ಲಿ ಎಚ್ಚೆತ್ತಿತ್ತು. ತರುಣ ಟರ್ಕಿಯ ಆವಿರ್ಭಾವವಾಯಿತು. ಕ್ಷಣಮಾತ್ರದಲ್ಲಿ ರಾಷ್ಟ್ರದ ಎಲ್ಲ ಶಕ್ತಿಗಳನ್ನು ಒಂದುಕೂಡಿಸಿತು ದಾಸ್ಯ ಶೃಂಖಲೆಯನ್ನು ಕಿತ್ತೊಗೆಯಿತು. ಮತಾಚಾರ್ಯರ ಗೊಡ್ಡು ಬೆದರಿಕೆಗಳನ್ನು ನಿರ್ಲಕ್ಷಿಸಿ ಮೂಢ ನಂಬಿಕೆಗಳನ್ನು ರಾಷ್ಟ್ರ ಕಂಟಕಗಳಾದ ಹಳೆಯ ಆಚಾರಗಳನ್ನು ನಿರ್ಮೂಲ ಮಾಡಿತು. ಟರ್ಕಿಯ ತರುಣಿಯರು, ಘೋಷಾ ಪದ್ಧತಿಯನ್ನು ತೆಗೆದೊಗೆದು ಸ್ವಾತಂತ್ರದಿಂದ ಮುಂದೆ ಬಂದು ದೇಶಸೇವೆಯಲ್ಲಿ ತೊಡಗಿದರು. ಮಶೀದಿಗಳ-ಮುಲ್ಲಾಗಳ-ಖಾಜಿಗಳ-ಪ್ರಭಾವವು ಅಸ್ತವಾಯಿತು. ಖಲೀಫರೂ ಕೂಡ ಅಧಿಕಾರಭ್ರಷ್ಟರಾದರು. ಹೊಸಟರ್ಕಿಯಲ್ಲಿ ಎಲ್ಲಾ ಹೊಸದು. ವೇಷಭೂಷಣಗಳು ಹೊಸವು. ಎಲ್ಲವೂ ಹೊಸ

ದಾಗಿ ಹೋಗಿದೆ. ಈಗ ಟರ್ಕಿಯು ಸ್ವತಂತ್ರರಾಷ್ಟ್ರ ಈ ಸ್ವತಂತ್ರರಾಷ್ಟ್ರವನ್ನು ಕಟ್ಟಿದವರು ಟರ್ಕಿಯ ತರುಣರು

ಈ ನವಚೇತನದ ಆಂದೋಳನವು ಪೂರ್ವರಾಷ್ಟ್ರಗಳಲ್ಲಿ ಆಗದೇ ಹೋಗಲಿಲ್ಲ. ಈ ರಾಷ್ಟ್ರ ಜಾಗೃತಿಯ ಪ್ರಚಂಡ ಮಾರುತವು ಏಷ್ಯಾ ಖಂಡದಲ್ಲಿಯೂ, ಬೀಸಲಾರಂಭಿಸಿತು. ಈ ಪೂರ್ವ ರಾಷ್ಟ್ರಗಳು ಎಚ್ಚೆತ್ತವು. ಪೂರ್ವ ದೇಶಗಳಲ್ಲಿ ಚೈನವು ಬಲುದೊಡ್ಡ ರಾಷ್ಟ್ರ. ಚೈನರು ನಲವತ್ತಾರು ಕೋಟಿ ಸಂಖ್ಯಾತರಾಗಿದ್ದಾರೆ. ಚೈನಾರಾಷ್ಟ್ರಕ್ಕೊಂದು ಪುರಾತನ ನಾಗರೀಕತೆ ಇದೆ. ಚೈನಾದ ರೇಷ್ಮೆ ಕೈಗಾರಿಕೆಯು ಪುರಾಣ ಕಾಲದಿಂದ ಬೆಳೆದು ಬಂದದ್ದು. ಚೈನದಲ್ಲಿಯೂ ಒಂದು ಹಳೆಯ ರಾಜ್ಯವಿತ್ತು. ಪಾಶ್ಚಾತ್ಯರು ಅಲ್ಲಿ ಕಾಲಿಟ್ಟರು. ಅವರ ಪ್ರಭಾವವು ಅಲ್ಲಿ ಪ್ರವಹಿಸಲಾರಂಭಿಸಿತು. ಒಂದುಕಡೆ ಬ್ರಿಟಿಷರು; ಮತ್ತೊಂದುಕಡೆ ಫ್ರೆಂಚರು. ಇನ್ನೊಂದುಕಡೆ ಜಪಾನರು ಎಲ್ಲರೂ ಆಕ್ರಮಣಕ್ಕಾರಂಭಿಸಿದರು. ಚೈನದ ಬಂದರುಗಳನ್ನೆಲ್ಲಾ ಕೈವಶ ಮಾಡಿಕೊಂಡರು ಕೋಟೆಕೊತ್ತಲುಗಳನ್ನು ಕಟ್ಟಿಕೊಂಡರು. ಸೈನ್ಯಗಳನ್ನು ಇಟ್ಟುಕೊಂಡರು. ಫಿರಂಗಿಗಳನ್ನು ಮದ್ದು ಗುಂಡುಗಳನ್ನು ತಂದಿಟ್ಟುಕೊಂಡರು. ಚೈನವು ಛಿನ್ನ ವಿಚ್ಛಿನ್ನವಾಗಿ ದಾಸ್ಯದಲ್ಲಿ ಮುಳುಗಿಹೋಯಿತು. ಇದು ಚೈನದ ಹಳೆಯ ಚಿತ್ರ ಹೊಸ ಚಿತ್ರವೇಬೇರೆ. ಚೈನಾದ ತರುಣರು ಚೈತನ್ಯವಂತರಾಗಿ ಎಚ್ಚೆತ್ತು ಕರನಿರಾಕರಣ ಮಾಡಿದರು. ನ್ಯಾಷನಲ್ ಚೈನಾಸಂಘವನ್ನು ಕಟ್ಟಿದರು. ಚೈನಾದ ಮೇಲೆ ಪ್ರಳಯವಾಯಿತು. ಬಂದರುಗಳನ್ನು ಬಿಟ್ಟುಕೊಡಬೇಕೆಂದು ಪಾಶ್ಚಾತ್ಯ ರಾಷ್ಟ್ರಗಳವರನ್ನು ಒತ್ತಾಯ ಪಡಿಸಿದರು. ತೆರಿಗೆಗಳನ್ನು ತಾವೇ ವಸೂಲು ಮಾಡತೊಡಗಿದರು

ಚೈನಾದ ನ್ಯಾಷನಲ್ ಸೈನ್ಯವನ್ನು ಕಟ್ಟಿದರು. ಪಶ್ಚಿಮ
ಗಳ ಸೈನ್ಯವನ್ನು ಅಲ್ಲಿಂದ ತೆಗೆಯಬೇಕೆಂದು ಹಕ್ಕ ಹಿ
ರಷ್ಯಾದ ಪ್ರಳಯ ಕಾರಕರನ್ನು ಮೂರಿದರು. ಚೈನ
ನ್ಯಾಷನಲ್ ಸರ್ಕಾರವನ್ನು ಸ್ಥಾಪಿಸಿದರು. ಎಲ್ಲ ಜ
ದವರೂ ಆ ಸರ್ಕಾರದೊಡನೆ ಸಂಧಿಗೊಪ್ಪಿದರು. ಇದು
ಚೈನದ ಪ್ರಾದುರ್ಭಾವ. ವಿದ್ಯಾ, ಮತ, ಸಮಾಜ, ಕೈ
ಎಲ್ಲದರಲ್ಲಿಯೂ ಚೈನವು ಹೊಸದಾಗುತ್ತಿಧೆ '
ಚೈನಾದ ತರುಣರ ಕ್ರಿಯಾಶಕ್ತಿಯ ಪ್ರಾದುರ್ಭಾವದ

ಭಾರತವರ್ಷ! ನಮ್ಮ ಭಾರತವರ್ಷ! ಈ ಹಿಂದೂ
ಇಲ್ಲಿಯೂ, ನವಚೇತನದ ಆವಿರ್ಭಾವವಾಗಿಧೆ.
ಹೇಳಿದ ಜರ್ಮನಿ, ರಷ್ಯಾ, ಟರ್ಕಿ, ಜೈನಾ ಈ ರಾಷ್ಟ
ಜಾಗೃತಿಗೂ ಭಾರತವರ್ಷದ ಜನಜಾಗೃತಿಗೂ ಮಹ
ವಿಧೆ. ಆ ರಾಷ್ಟ್ರಗಳಲ್ಲಿ ಹಿಂಸೆಯ ಘೋರ ರೂಪದ
ರ್ಭಾವವಾಯಿತು. ರಕ್ತದ ಕೋಡಿಯು ಹರಿದುಹೋ
ಹಿಂದೂಸ್ಥಾನದಲ್ಲಿ ಅಹಿಂಸಾ ಪೂರ್ವಕವಾದ ಆತ್ಮ
ಸಾತ್ವಿಕಶಕ್ತಿ, ಇದರಿಂದಲೇ ನವಚೇತನದ ಆವಿರ್ಭಾ
ಗಿಧೆ. ಭಾರತ ವರ್ಷದ ಅಥವಾ ಇಡೀ ಜಗತ್ತಿನ
ಶಕಾಪುರುಷನು ಆತ್ಮಶಕ್ತಿಯಿಂದ ಶಾಂತಿಯ ಅಸ್ತ್ರ
ಹಿಡಿದು ಮುಂದೆ ಹೊರಟಿಧಾನೆ. ಆ ಮಹಾತ್ಮಾ ಗಾ
ಹಿಂದೆ ಈ ಹಿಂದೂಸ್ಥಾನದ ಸಮಸ್ತ ಶಕ್ತಿಯೂ ಕೇ
ಕೃತವಾಗುತ್ತಿಧೆ. ಆ ಮಹಾತ್ಮನು ನಮ್ಮ ದೇಶದಲ್ಲಿ
ರ್ಭಾವವಾಗಿರುವ ತರುಣರ ಶಕ್ತಿಯನ್ನು ನೋಡಿ ಅ
ದೇಶಸೇವೆಯಲ್ಲಿ ತಿರುಗಿಸಿ, ರಾಷ್ಟ್ರೋದ್ಧಾರ ಮಾ
ಕ್ಕಾಗಿ ತರುಣರ ಮುಂದಾಳಾದ ವೀರಜವಾಹಿರಲಾ

ರಾಷ್ಟ್ರಸಭೆಯ ಸಿಂಹಾಸನದಲ್ಲಿ ಕುಳ್ಳರಿಸಿಧಾನೆ. ಆ ಮಹಾತ್ಮನು ನಮ್ಮ ಹಿಂದೂಸ್ಥಾನದಲ್ಲಿ ಅಲ್ಲಲ್ಲಿ ಎದ್ದಿರುವ ಪ್ರಳಯ ಕರ್ಮಗಳನ್ನು ನೋಡಿ ದುಃಖದಿಂದ ಪರಿತಾಪ ದಿಂದ ತರುಣರನ್ನು ಬೇಡಿಕೊಳ್ಳುತ್ತಾನೆ. ತರುಣರೇ? ಶಾಂತಿಯಿಂದ ನಡೆಯಿರಿ. ಆತ್ಮಬಲವೇ ಮೇಲಾದ ಬಲ. ಹಿಂಸಾಕರ್ಮಗಳನ್ನು ನಿಲ್ಲಿಸಿರಿ. ನನ್ನನ್ನು ಮಹಾತ್ಮಾ ಮಹಾತ್ಮಾ ಎಂದು ಸ್ತೋತ್ರ ಮಾಡುತ್ತೀರಲ್ಲಾ! ಈ ನಿಮ್ಮ ಮಹಾತ್ಮನಮೇಲೆ ನಂಬಿಕೆಯಿಟ್ಟು ಅಹಿಂಸೆಯಿಂದ ನನ್ನನು ಹಿಂಬಾಲಿಸಿ ಸಹಾಯಮಾಡಿರಿ. ಎಂದು ಹೇಳುತ್ತಾ ರಾಷ್ಟ್ರ ಶಕ್ತಿಗಳನ್ನು ಕೇಂದ್ರೀಕರಿಸುತ್ತಾ ರಾಷ್ಟ್ರವನ್ನು ತನ್ನ ಹಿಂದೆ ಒಯ್ಯುತ್ತಿಧಾನೆ.

ಅದೇ ಹಿಂದೂಸ್ಥಾನದಲ್ಲಿ ನಮ್ಮ ಮೈಸೂರು, ಮಧ್ಯದಲ್ಲಿ ಶಿಕ್ಕಿಕೊಂಡಿಧೆ. ಹಿಂದೂಸ್ಥಾನದ ವಾತಾವರಣವು ಮೈಸೂರಿನಲ್ಲಿಯೂ ವ್ಯಾಪ್ತವಾಗಿಧೆ. ಹಿಂದೂಸ್ಥಾನದಲ್ಲಿ ಮೊಳತಿರುವ ನವಜೈತನ್ಯವು ಮೈಸೂರಿನಲ್ಲಿಯೂ ಆವಿರ್ಭವಿಸಿಧೆ ಮೈಸೂರಿನ ತರುಣರು ತಮ್ಮ ಶಕ್ತಿಯನ್ನು ಕೇಂದ್ರೀಕರಿಸುವುದಕ್ಕೋಸ್ಕರ "ಯುವಜನಸಂಘ"ವನ್ನು ಇಲ್ಲಿ ಸ್ಥಾಪಿಸಿದರು. ಆಗ ನಾನು ಜೈಲಿನಲ್ಲಿದ್ದೆ. ನನ್ನ ಸ್ನೇಹಿತರುಗಳು ನನ್ನದೊಂದು ಸಂದೇಶ ಕೊಡಬೇಕೆಂದು ಕೇಳಿದರು. ನಾನು ಒಂದು ಸಂದೇಶವನ್ನು ಕೊಟ್ಟು ಕಳುಹಿಸಿದೆ.

"ನಾನು ನಿಮ್ಮವನು. ನಾನು ತರುಣರ ಜೊತೆಯಲ್ಲಿ ಸೇವೆಮಾಡಲು ಇಷ್ಟಉಳ್ಳವನಾಗಿಧೇನೆ. ನಾನು ಜೈಲಿನಿಂದ ಬರುತ್ತಲೇ ನಿಮ್ಮ ಮಧ್ಯದಲ್ಲಿ ಬಂದು ಸೇರುತ್ತೇನೆ. ನಾವೆಲ್ಲರೂ ನಮ್ಮ ದೇಶೋದ್ಧಾರ ಕಾರ್ಯದಲ್ಲಿ ಧೈರ್ಯ ವೀರ್ಯ ಉತ್ಸಾಹಗಳಿಂದ ಮುಂದುವರಿಯೋಣ!

ಈ ಸಂದೇಶವನ್ನು ಕೊಟ್ಟಿ. ಆ ಸಭೆಯು ಯಶ
ಸ್ವಿಂದುಕೇಳಿ ನನಗಾದ ಆನಂದಕ್ಕೆ ಪಾರ
ಆ ಪ್ರಥಮ ಸಮ್ಮೇಳನಕ್ಕೆ ನಮ್ಮ ಮೈಸೂರಿನ ತರ
ರಾದ ವೆಂಕಟಪ್ಪನವರು ಅಧ್ಯಕ್ಷರು. ಅವರಂತ
ದಾಳುಗಳು ತರುಣರಿಗೆ ದೊರತದ್ದು ನಮ್ಮ ಭಾಗ್ಯ
ಆ ವೆಂಕಟಪ್ಪನವರು ನಮ್ಮ ವೆಂಕಟಪ್ಪನವರೇ
ತರುಣರು ಮತ್ತಷ್ಟು ಮುಂದುವರಿಯುತ್ತಿದ್ದರು. ಆ
ಸೂರಿನಲ್ಲಿ ಅವರಂತಹ ಧೀರ ಮುಂದಾಳುಗಳು
ಮಂದಿ ಇಲ್ಲ. ನಮ್ಮ ಕಾಂಗ್ರೆಸ್ ಸಭೆಗೂ ಅವರ
ಪ್ರಜಾಮಿತ್ರಮಂಡಲಿಯುವರೂ ಅವರನ್ನು ಹಿಡಿದೆಳೆ
ಎಲ್ಲಾಕಡೆಯೂ, ವೆಂಕಟಪ್ಪನವರು ಬೇಕಾಗಿದೆ.
ಯಾರಿಗೂ ಬೇಡದವನು. ನಾನು ಯಾವುದಕ್ಕೂ ಕಟ
ವನು. ಯಾವ ಕಾನೂನುಗಳಿಂದ ನನ್ನನ್ನು ಕಟ್ಟಿಬ
ನನಗೇ ಗೊತ್ತಿಲ್ಲ. ಯಾವ ಸಮಾಜವು ನನಗೆ ಸ
ತ್ತದೋ ನಾನರಿಯೆ ! ಅಂಥಾ ಉಚ್ಛೃಂಖಲ ಮನ
ನನ್ನ ಕಠಿನವಾದ ವಾಕ್ಕಿನಿಂದ ನಮ್ಮ ಮೈಸೂರಿನ
ಹೃದಯದಲ್ಲೇನಿದೆಯೋ ನಾನು ಹೇಳಿಬಿಡುತ್ತೇನೆ.
ವೆಂಕಟಪ್ಪನವರು ನಮಗೇಬೇಕು. ಅವರನ್ನು ಮತ
ಸ್ಥೆಯುವರೂ ಕಿತ್ತುಕೊಳ್ಳಕೂಡದು ಅವರು ಮತ್ತಾ
ಗೂ ಹೋಗಕೂಡದು ಹಾಗಾದರೆ ಮಾತ್ರ ನವ
ಮುಂದಾಳುಗಳು ಧೀರಮುಂದಾಳುಗಳು ದೊರತಂತಾ
ಇದೇ ತರುಣರ ಕೋರಿಕೆ.

ನಮ್ಮ ಶೀಮೆಯಲ್ಲಿ ಯುವಜನ ಸಭೆಯು ನ
ನಿಂದ ಈಚಿಗೆ ನಮ್ಮ ದೇಶದ ತರುಣರು

ಮುಂದುವರಿದಿಧಾರೆ. ಆದರೆ, ನಾವು ಏನೇನು ಕೆಲಸಗಳನ್ನು ಮಾಡಬಹುದು, ನಮ್ಮಲ್ಲಿರುವ ನ್ಯೂನಾತಿರಿಕ್ತಗಳೇನು ಅವ ಮ್ನ ಹೋಗಲಾಡಿಸಿಕೊಂಡು ಹೇಗೆ ಮುಂದುವರಿಯಬೇಕು ಎಂಬುದನ್ನು ನಾವು ಈಗಲೇ ಪರಿಶೀಲಿಸಬೇಕಾಗಿಧೆ.

ತರುಣರು ದೇಶಭೇದ, ಜಾತಿಭೇದಗಳ ಸೋಂಕು ತಗಲದೇ, ಎಚ್ಚರವಾಗಿರಬೇಕು. ಸಮಗ್ರ ಹಿಂದೂಸ್ಥಾನದ ತರುಣರ ಪ್ರಗತಿಯಲ್ಲಿ ನಮ್ಮ ಪ್ರಗತಿಯು ಸೇರಿರಬೇಕು. ನಾವು ಮೈಸೂರಿನವರು, ನಾವು ದೇಶೀಯ ಸಂಸ್ಥಾನದವರು ನಮಗೆ ಇದು ಬೇಡ ಅದು ಬೇಕು ಎನ್ನುತ್ತಾ ಕೂಡುವುದರಿಂದ ಫಲವಿಲ್ಲ. ನಾವು ಭಾರತೀಯರು. ಎಲ್ಲ ರಾಷ್ಟ್ರಗಳಂತೆ ನಾವೂ ಮುಂದುವರಿಯಬೇಕು. ನಮಗೆ ಎಲ್ಲವೂ ಬೇಕು. ಹಚ್ಚಿದ ಕೈ ತೆಗೆಯದೆ ಕಾರ್ಯವನ್ನು ಸಾಧಿಸಲೇಬೇಕು ಎಷ್ಟು ಕಷ್ಟಗಳನ್ನಾದರೂ ನಾವು ಅನುಭವಿಸಲು ಸಿದ್ಧರಾಗಿರಬೇಕು. ಯಾವುದಕ್ಕೂ ಭಯಪಡಬಾರದು. ಇಡೀ ಹಿಂದೂಸ್ಥಾನದಲ್ಲಿ ತರುಣರ ಚಳವಳಿಯಲ್ಲಿ ವಿದ್ಯಾರ್ಥಿಗಳೇ ಮುಂಧೆ ನಿಂತಿಧಾರೆ. ಹಿಂದೂಸ್ಥಾನದಲ್ಲಿ ಮಾತ್ರವೇ ಏಕೆ? ಇಡೀ ಭೂಮಂಡಲದಲ್ಲಿ ಹೊಸಯುಗದ ನಿರ್ಮಾಣಕರ್ತರು ತರುಣರೇ ಎಂಬುದನ್ನು ನಮ್ಮ ಮೈಸೂರಿನವರು ಮನಸ್ಸಿನ ಮೇಲೆ ತಂದಿರುವರೇ ? ನಮ್ಮ ಯುವಜನ ಸಂಘದಲ್ಲಿ ವಿದ್ಯಾರ್ಥಿಗಳ ಸಂಖ್ಯಾಬಲವು ಬಹು ಕಡಿಮೆಯಾಗಿಧೆಯೆಂದು ಕೇಳಿ ನನ್ನ ಮನಸ್ಸಿಗೆ ಬಹು ಪೇಚಾಟವಾಯಿತು. ನಮ್ಮ ವಿದ್ಯಾರ್ಥಿಗಳು ಏಕೆ ಹೀಗೆ ಉದಾಸೀನರಾಗಿಧಾರೆಂದು ನಾನು ಕೇಳುತ್ತೇನೆ. ಅವರು ನನಗೆ ಸಮಂಜಸವಾದ ಉತ್ತರ ಹೇಳಲು ಸಿದ್ಧರಾಗಿರುವರೇ ! ಈಗಿನ ಕಾಲದ ವಿದ್ಯಾಭ್ಯಾ

ಷದ ವಿಷಯವಾಗಿ ನಾನು ಇಲ್ಲಿ ಪ್ರಸ್ತಾಪಿಸುವುದಿಲ್ಲ
ದರೆ ಅದೇ ಒಂದು ದೊಡ್ಡ ವಿಷಯ. ಆದರಿಂದ ಪ್ರ
ನವಿದೆಯೋ ಇಲ್ಲವೋ ಇಲ್ಲಿ ನಾನು ವಿಚಾರಮಾಡ
ಆದರೆ ಈಗಲೂ ವಿದ್ಯಾರ್ಜನೆಯು ದೇಶಸೇವಗಿಂತ
ದುದಲ್ಲವೆಂದು ನಾನುನಂಬಿಧೇನೆ ಇಂದಲ್ಲ ನಾಳೆ ಮ
ಗಾಂಧಿಯವರು "ಶಾಲೆಗಳನ್ನು ಬಿಟ್ಟು ಬನ್ನಿ" ಎಂದ
ನ್ನು ಕರೆದರೆ ನೀವು ಹಳೆಯ ಪುರಾಣೀಕರಂತೆ ಪು
ಹೊರೆಯನ್ನು ಬಿಚ್ಚಿಕೊಂಡು ಕೂಡುತ್ತೀರೋ ? :
ರಂತೆ ಮುಂದೆಬಂದು ನಿಲ್ಲುತ್ತೀರೊ? ಇದಕ್ಕೆ ಉತ್ತ

ಆದರೆ ನಾನು ಈಗ ವಿದ್ಯಾರ್ಥಿಗಳನ್ನು "ಪ್ರೋ
ಬನ್ನಿರಿ !" ಎಂದು ಕರೆಯುವುದಿಲ್ಲ. ಆವರು
ಮಾಡುತ್ತಲೇ ಮಾಡುವ ದೇಶಸೇವೆಯು ಎಷ್ಟೋ
ಆವರು ಬಂದು ನನ್ನ ಮುಂದೆ ನಿಂತರೆ ಆವರಿಗೆ ತಕ್ಕ
ಕ್ರಮವನ್ನು ಹೊಂದಿಸಿ ಕೊಡಲು ನಾನು ಸಿದ್ಧನಾ
ಅಷ್ಟು ಮಾತ್ರವಲ್ಲ. ಆವರು ದೇಶಸೇವೆಗೆ ನೆರವಾಗಿ
ಅವರ ವ್ಯಾಸಂಗಕ್ಕೂ, ಸಹಾಯ ದೊರೆಯುವಂತಹ
ಡನ್ನು ಮಾಡಲು ನಾವು ತಯಾರಾಗಿಧೇವೆ. ಇದು ವಿ
ಗಳಿಗೆ ನಾನು ಹೇಳುವ ಮಾತು, ಆವರಲ್ಲಿ ನಾನು ವ
ಪ್ರಾರ್ಥನೆ.

ಇನ್ನು-ವಿದ್ಯಾವಂತರಾದ ತರುಣರು ಬಹುಮಂದಿ
ಅವರು ಸರ್ಕಾರೀ ನೌಕರಿಗಳಾಗಿ ಸೆಕ್ರೆಟರಿಯೇಟನ
ಅಧಿಕಾರಸ್ಥರ ಮನೆಯ, ಹಂತಗಳನ್ನು ಹತ್ತಿ ಇ

ಧಾರೆ. ಇಲ್ಲ, ಅವರಿಗೆ ಕೆಲಸಗಳು ದೊರೆಯುವುದಿಲ್ಲ. ಅವರ ಆಶೆಯು ನಿರಾಶೆಯಾಗುತ್ತದೆ. ಅವರು ಭಗ್ನಮನೋರಥ ರಾಗಿ ಮನೆಯಲ್ಲಿ ಕುಳಿತಿಧಾರೆ. ನಾನು ಅವರಿಗೆ ಹೇಳು ವುದೇನೆಂದರೆ, ಮಹಾಶಯರೆ, ಸುಮ್ಮನೇ ಏಕೆ ಮನೆಯಲ್ಲಿ ಕೂಡುತ್ತೀರಿ? ಏಕೆ ಇಲ್ಲದ ಆಶಾಪಾಶಗಳನ್ನು ಹಚ್ಚಿಕೊಂ ಡು ಸರ್ಕಾರದ ಚಾಕರಿಗಳಿಗಾಗಿ ಅಲೆಯುತ್ತೀರಿ? ಯೇಕೆ ನಿರಾಶರಾಗಿ ನಿರ್ವೀರ್ಯರಾಗಿ ಕುಳಿತಿಧೀರಿ. ಏಳಿರಿ ! ಧೈರ್ಯ ದಿಂದ ಮುಂದೆ ಬನ್ನಿರಿ. ದೇಶಸೇವೆಗೆ ನಿಲ್ಲಿರಿ. ನಾವೆಲ್ಲರೂ ಒಟ್ಟಿಗೆ ಸೇವೆ ಮಾಡೋಣ ! ಒಟ್ಟಿಗೆ ಭಿಕ್ಷಬೇಡೋಣ ! ಒಟ್ಟಿಗೆ ಭೋಜನಮಾಡೋಣ! ನಮಗೊಂದು ಮಾಳಿಗೆಯು ಸ್ವತಂತ್ರವಾಗಿ ದೊರತರೆ ಅಲ್ಲಿ ನಾವೆಲ್ಲರೂ ವಾಸಮಾಡೋ ಣ. ಇಲ್ಲವೇ ವಿಶಾಲ ಭೂಮಿಯಲ್ಲಿ ಆಕಾಶದ ಗುಡಾರ ದಲ್ಲಿ ಬೀಡುಬಿಡೋಣ ! ಕಾಡಿನಲ್ಲಿದ್ದರೂ-ಊರಿನಲ್ಲಿದ್ದ ರೂ ; ಮನೆಯಲ್ಲಿದ್ದರೂ-ಮಠದಲ್ಲಿದ್ದರೂ; ಮಾಳಿಗೆಯಲ್ಲಿ ದ್ದರೂ-ಬಯಲಿನಲ್ಲಿದ್ದರೂ; ಬೆಳಕಿನಲ್ಲಿದ್ದರೂ-ಕತ್ತಲೆಯ ಲ್ಲಿದ್ದರೂ ; ನಾವು ಒಂದುಕಡೆ ಇರೋಣ ! ಒಂದು ಮಾತ ನಾಡೋಣ ! ಒಂದು ಕೆಲಸಮಾಡೋಣ ! ನಾವೆಲ್ಲರೂ ಒಟ್ಟಿಗೆ ದೇಶಸೇವೆಮಾಡೋಣ! ಬಂದ ಕಷ್ಟಗಳನ್ನೆಲ್ಲಾ ಧೀರರಂತೆ ಅನುಭವಿಸೋಣ. ಅದೇ ಯಜ್ಞದಲ್ಲಿಯೇ ಆತ್ಮಾರ್ಪಣ ಮಾಡಿಬಿಡೋಣ.

ವಿದ್ಯೆಯೂ ಇಲ್ಲದೇ ಕೆಲಸವೂ ಇಲ್ಲದೆ, ಹೊಟ್ಟೆಗೆ ಅನ್ನವೂ ಇಲ್ಲದೇ; ವೂರಿನಲ್ಲಿ ಮನೆಇಲ್ಲದೇ, ಸಮಾಜದಲ್ಲಿ ನೆಲೆಇಲ್ಲದೆ ದುರ್ವ್ಯಾಪಾರಗಳಲ್ಲಿ ಮಗ್ನರಾಗಿ ಇರುವ ಬಹುಮಂದಿ

ತರುಣರು ನಮ್ಮ ಸಮಾಜದಲ್ಲಿದ್ದಾರೆ. ನಾನು ಅವರನ್ನು ನಮ್ಮ ಯುವಜನ ಸಭೆಗೆ ಬರಬೇಕೆಂದು ಆದರದಿಂದ್ದು ಕರೆಯುತ್ತೇನೆ ಅವರ ಅಪರಾಧಗಳನ್ನೆಲ್ಲಾ ಮನ್ನಿಸಿ ಸೌಹಾರ್ದದಿಂದ, ಸಮಭಾವದಿಂದ, ನಾವೆಲ್ಲರೂ ವರ್ತಿಸುವಂತೆ ಬೇಡುತ್ತೇನೆ ಅವರಿಗೆ ನನ್ನ ಪೂಟದಲ್ಲಿ ಅರ್ಧವನ್ನು ಹಂಚಿಕೊಡುತ್ತೇನೆ. ನನ್ನ ಬಟ್ಟೆಯಲ್ಲಿ ಅರ್ಧವನ್ನು ಹರಿದು ಹೊದಿಸುತ್ತೇನೆ. ಅವರಿಂದ ದೇಶಸೇವೆಯಾಗುತ್ತದೆಂದು ನನ್ನ ಭರವಸೆ ಇಧೆ.

ನಾನು ನಮ್ಮ ಮೈಸೂರು ತರುಣರಿಗೆ ಹೇಳುವುದೊಂದು ಮಾತು. ಸಹೋದರರೆ? ನೀವು ಯಾವುದಾದರೊಂದು ಕೆಲ್ಸವನ್ನು ಮಾಡಿತೋರಿಸಿರಿ. ಈ ಪ್ರಪಂಚವು ನಿಮ್ಮ ಒಂದು ಸಾಹಸ ಕಾರ್ಯವನ್ನು ನೋಡಲಿ. ಆಗ, ನಾವು-ನಮ್ಮ ಬೊಂಬಾಯಿನ, ಕಲಿಕತ್ತೆಯ ಪಂಜಾಬದ ತರುಣರಿಗೆ ಸಮಾನರೆಂದು ಕೊಳ್ಳಬಹುದು. ಇದೇ ನಾನು ಹೇಳುವ ಮಾತು.

ಮೈಸೂರಿನ ಹೊಸ ಯುಗವನ್ನು; ಹೊಸ ಮೈಸೂರನ್ನು ನಿರ್ಮಾಣಮಾಡುವುದು ತರುಣರಾದ ನಮ್ಮ ಕರ್ತವ್ಯ. ತರುಣರು ಸ್ವಾರ್ಥದಲ್ಲಿ, ಆಶಾಪಾಶಗಳಲ್ಲಿ ಸುಖಸಂಪತ್ತುಗಳಲ್ಲಿ ಮುಳುಗಿದರೆ ಅವರು ಪಶು ಸಮಾನರಾಗುತ್ತಾರೆ. ಆ ತರುಣರೇ ಸ್ವಾರ್ಥತ್ಯಾಗದಿಂದ ದೇಶ ಸೇವೆಗೆ ಆರಂಭ ಮಾಡಿದರೆ ಅವರೇ ನರಸಿಂಹಗಳಾಗಿ ವೀರರಾಗಿ ಮೆರೆಯುತ್ತಾರೆ.

ತರುಣರೆ, ನಿಮಗೆ ಶಕ್ತಿ ಇದೆ, ಸಾಹಸವಿಧೆ, ಧೈರ್ಯೋತ್ಸಾಹಗಳಿವೆ. ಆದರ ಜೊತೆಗೆ ದೇಶಭಕ್ತಿಯೊಂದನ್ನು ಸಂಪಾದಿ

ಟಿದರೆ ದೇಶಸೇವೆಗೆ ಟೊಂಕ ಕಟ್ಟಿ ಮುಂದೆ ಬಂದರೆ ನೀವು ಈ ವೈಸೂರನ್ನು ಉದ್ಧಾರ ಮಾಡಬಲ್ಲಿರಿ. ಕಷ್ಟದಲ್ಲಿರುವ ನಿಮ್ಮ ಸಹೋದರರಿಗೆ ಸಹಾಯ ಮಾಡಬಲ್ಲಿರಿ. ಅಜ್ಞಾನದಲ್ಲಿರುವ ನಿಮ್ಮ ಸಹೋದರರನ್ನು ಎಚ್ಚರಗೊಳಿಸಬಲ್ಲಿರಿ ಪತಿತರಾದ ನಿಮ್ಮ ಸಹೋದರರನ್ನು ಉದ್ಧಾರ ಮಾಡಬಲ್ಲಿರಿ. ನಿಮಗೆ ಭಗವಂತನು ವೀರ್ಯವಿನಯ ಧೈರ್ಯೋತ್ಸಾಹಗಳನ್ನು ಕರುಣಿಸಲಿ! ನಿಮ್ಮಿಂದ ನಮ್ಮ ದೇಶದ ಕಲ್ಯಾಣವಾಗಲಿ.

॥ ಧಿಯೋಯೋನಃ ಪ್ರಚೋದಯಾತ್ ॥



# ಹೊಟ್ಟೆ ಬಟ್ಟೆಗೆ ಗತಿಯಿಲ್ಲ!

---

ಬಡತನವು ನಮ್ಮ ದೇಶದಲ್ಲಿ ಬೇರೂರಿಬಿಟ್ಟದೆ. ಅದರ ಕಠೋರ ರೂಪವನ್ನು ನಾವು ನೋಡಿಲ್ಲ ಅದನ್ನು ನೋಡುವ ಧೈರ್ಯವು ನಿಜವಾಗಿಯೂ ನಮಗಿಲ್ಲ. ಅದನ್ನು ನೋಡಿಬಿಟ್ಟರೆ ನಮ್ಮ ಕಣ್ಣುಗಳಲ್ಲಿ ಅಂಧಕಾರವು ತುಂಬಿಹೋಗುತ್ತದೆ. ಹೃದಯವು ವಡದು ಚೂರುಚೂರಾಗಿ ಹೋಗುತ್ತದೆ. ಆದ್ದರಿಂದ ಅದನ್ನು ನಾವು ನೋಡುತ್ತಿಲ್ಲ; ನೋಡುವ ಸಾಹಸವನ್ನೂ ಮಾಡಿಲ್ಲ! ನಾಗರಿಕತೆಯ–ಪಾಶ್ಚಾತ್ಯ ನಾಗರಿಕತೆಯ ಮುಸುಗನ್ನು ಹಾಕಿಕೊಂಡು, ಒಳಗೊಳಗೇ ಸುಖಶಾಂತಿಗಳನ್ನು ಹುಡುಕಾಡುತ್ತಿದ್ದೇವೆ. ಆ ಸುಖಶಾಂತಿಗಳು ನಮಗೆ ದೊರೆಯುವುದಿಲ್ಲ, ಅದು ವಾಸ್ತವವಾಗಿಯೂ ನಮ್ಮ ದೇಶದಲ್ಲಿಲ್ಲ. ನಮ್ಮ ದೇಶದಲ್ಲಿಲ್ಲದ್ದು ನಮಗೆ ದೊರೆಯುವುದೆಂತು ?

ನಮ್ಮನ್ನು ಆವರಿಸಿರುವುದು–ನಮ್ಮ ಸುತ್ತಮುತ್ತಲೂ, ಕವಿದಿರುವುದು--ಬಡತನ, ಕಡುಬಡತನ! ನಾವು ಸುಖವನ್ನು ಹುಡುಕುವುದಕ್ಕೆ ಹೊರಟರೆ, ನಮ್ಮ ಕೈಗೆ ಚುಚ್ಚುವುದು ಅದೇ ವಿಷದ ಮುಳ್ಳು! ನಮ್ಮ ಸಹೋದರರ–ಕಡುಕಷ್ಟದಲ್ಲಿ ಕೊರಗುತ್ತಿರುವ ಆ ಸಹೋದರರ--ಹಸಿದ ಹೊಟ್ಟೆಯ ಉರಿ! ಆ ಜ್ವಾಲೆಯಿಂದ ಹುಟ್ಟಿದ ತಾಪ! ಅದು ನಮ್ಮನ್ನು ಬಳಲಿಸುತ್ತಿರುವುದು. ಅವರ ಆರ್ತ

ನಾದವು ನಮ್ಮ ಕಿವಿಗಳನ್ನು ಹೊಕ್ಕು, ನಮ್ಮ ಅಂತಃಕರಣ
ವನ್ನು ಕುಕ್ಕಿ, ಕಳವಳವನ್ನುಂಟುಮಾಡಿರುವುದು ನಮ್ಮ ನಾಗ
ರಿಕರು—ವಿದ್ಯಾವಂತರೆಂದು ಜಂಭದಿಂದ ಮೆರೆಯುತ್ತಿರುವ
ಬುದ್ಧಿವಂತರು; ಹಣದ ರಾಶಿಗಳ ಮೇಲೆ ಮಲಗಿಕೊಂಡು
ಸುಖದ ಸ್ವಪ್ನಗಳನ್ನು ಬಯಸುತ್ತಿರುವ ಶ್ರೀಮಂತರು;
ಅಧಿಕಾರ ಸೂತ್ರಗಳನ್ನು ಕೈಯಲ್ಲಿ ಹಿಡಿದುಕೊಂಡು,
ಪ್ರಜಾಪಾಲನೆ ಮಾಡುತ್ತಿದ್ದೇವೆಂದು ವಿಜೃಂಭಿಸುತ್ತಿರುವ
ರಾಜಾಧಿರಾಜರುಗಳು; ಆ ಆರ್ತನಾದವನ್ನು ಅರ್ಥ ಮಾಡಿ
ಕೊಳ್ಳುವುದಾದರೆ-ನಮಗೆ ಸಹಾಯ ಮಾಡಿರಿ ನಮ್ಮ
ಹಸಿದ ಹೊಟ್ಟೆಗೆ ಗಂಜಿಯನ್ನು ಕೊಡಿರಿ, ನಮ್ಮನ್ನು ಉದ್ಧಾ
ರಮಾಡಿರಿ; ಇಲ್ಲವೇ—ನಮ್ಮ ಜೊತೆಯಲ್ಲಿ ನೀವೂ ಬೆಂದು
ಬೂದಿಯಾಗಿ ಹೋಗುವಿರಿ. ಈ ನಾಡು ಮರುಭೂಮಿ
ಯಾಗುವುದು. ಮೂವತ್ತುಮೂರುಕೋಟಿ ಹೆಣಗಳ ಭಯಂ
ಕರ ಸ್ಮಶಾನವಾಗುವುದು.—ಎಂದು ಎಚ್ಚರಿಸುತ್ತಿದೆ.
ಸಹೋದರರೇ? ಅದಕ್ಕೆ ನೀವೇನು ಉತ್ತರ ಹೇಳುವಿರಿ?
ಏನುಮಾಡುವಿರಿ?

ಪ್ರಪಂಚದಲ್ಲಿ ಎಲ್ಲಾ ದೇಶಗಳಲ್ಲಿಯೂ ಬಡವರುಂಟು.
ಬಡತನವುಂಟು. ಅದಕ್ಕೂ ಒಂದು ಮೇರೆಯುಂಟು.
ನಮ್ಮ ದೇಶದಲ್ಲಿ ಬಡತನಕ್ಕೆ ಎಲ್ಲೆಯೇ ಇಲ್ಲ. ಹಿಂದೂ
ಸ್ಥಾನದಲ್ಲಿ ಬಹು ಮಂದಿ ಒಪ್ಪತ್ತಿಗೂ ಅನ್ನಕ್ಕೆ ಗತಿಯಿ
ಲ್ಲದೆ ಅಲೆಯುತ್ತಿದ್ಧಾರೆ! ಎರಡು ದಿನಕ್ಕೊಮ್ಮೆ ಉಂಡು
ಪ್ರಾಣವನ್ನುಳಿಸಿಕೊಂಡಿರುವವರೆಷ್ಟೋ ಜನ! ಅರಹೊಟ್ಟೆಗೆ
ಗಂಜಿಗೂ ಗತಿಯಿಲ್ಲದೇ ಕೊರಗುತ್ತಿರುವವರು ಬಹು ಜನ!

ಅನ್ನವೇ ಇಲ್ಲದೆ, ತಳವಳಿಸಿ ನೊಂದು, ನರಳಿ ಸಾಯುತ್ತಿರುವವರು ಕೋಟ್ಯಂತರ ಜನ! ನಮ್ಮ ದೇಶದ ಹೊಟ್ಟೆಯ ಪಾಡು ಇಷ್ಟು ಕಷ್ಟಕ್ಕೆ ಬಂದಿದೆ!!

ಇನ್ನು ಬಟ್ಟೆಯ ಮಾತನ್ನು ಕೇಳಬೇಕೇ? ಬಡವರಿಗೆ ತಮ್ಮ ಮಕ್ಕಳನ್ನು ಚಳಿಮಳೆಗಳ ಬಾಧೆಯಿಂದ ಕಾಪಾಡಿ, ಬೆಚ್ಚಗಿಡುವಷ್ಟು ಬಟ್ಟೆಗಳಿಲ್ಲ. ಮಾನವನ್ನು ಮುಚ್ಚಿಕೊಳ್ಳುವುದಕ್ಕೆ ಲಂಗೋಟಿಬಟ್ಟೆಯೋ, ಚಿಂದಿಬಟ್ಟೆಯೋ ಕೆಲವರಿಗೆ ಉಂಟು; ಅನೇಕರಿಗೆ ಅದಕ್ಕೂ ಮಾರ್ಗವಿಲ್ಲ. ಬಿಸಿಲು, ಚಳಿ, ಗಾಳಿ, ಮಳೆಗಳ ಬಾಧೆಯನ್ನು ತಪ್ಪಿಸಿಕೊಂಡು ವಾಸಮಾಡಲು ಕೋಟ್ಯಂತರ ಜನರಿಗೆ ಮನೆಬಾಗಿಲುಗಳಿಲ್ಲ ಗುಡಿಸಲುಗಳಲ್ಲಿ—ಹರಕು ಗುಡಿಸಲುಗಳಲ್ಲಿ—ಬಹು ಜನರು ಕಾಲ ಕಳೆಯುತ್ತಿದ್ದಾರೆ. ಅದೂ ಇಲ್ಲದೆ, ಬಯಲಲ್ಲಿ ಬೀಡುಬಿಟ್ಟುಕೊಂಡಿರುವ ಲಕ್ಷಾಂತರ ಸಂಸಾರಗಳು ನಮ್ಮ ದೇಶದಲ್ಲಿವೆ. ಹಸಿದ ಹೊಟ್ಟೆಗೆ ಅನ್ನವಿಲ್ಲದೇ-ಮಾನ ಮುಚ್ಚಿಕೊಳ್ಳುವುದಕ್ಕೆ ಬಟ್ಟೆಯಿಲ್ಲದೇ-ಮಳೆಬಿಸಿಲುಗಳನ್ನು ತಪ್ಪಿಸಿಕೊಳ್ಳಲು ಮನೆಯಿಲ್ಲದೇ-ಇರುವ ಈ ಬಡಜನರನ್ನು ರೋಗರುಜಿನಗಳು ಕಿತ್ತುತಿನ್ನುತ್ತವೆ. ಈ ಘೋರ ರೋಗಗಳಿಂದ ಬಡಜನರು ಸಾಯುತ್ತಿದ್ದಾರೆ. ಆ ಬಡವರ ಪ್ರೀತಿಯ ಮಕ್ಕಳು ಮರಿಗಳು ಸಾಯುತ್ತಿವೆ. ಹೀಗೆ ಮಕ್ಕಳ ಮರಣ, ರೋಗಿಗಳ ಸಾವು, ವಾಸಕ್ಕೆ ಮನೆಯಿಲ್ಲದ ಬಾಳು, ಹೊಟ್ಟೆಬಟ್ಟೆಗಳಿಗೆ ಗತಿಯಿಲ್ಲದ ಗೋಳು. ಇವುಗಳಿಂದ ನಮ್ಮ ದೇಶವು ಸ್ಮಶಾನದಂತಾಗಿ ಸುಖಮಯವಾಗಿದ್ದ ನಮ್ಮ ನಾಡಿನ ಜೀವನವು ಘೋರನರಕದಂತಾಗಿದೆ.

# ಈ ಸುಖವೆಲ್ಲಿಯದು ?

ನಮ್ಮ ನಗರವಾಸಿಗಳಿಗೆ, ಪಟ್ಟಣದ ಸುಖಜೀವಿಗಳಿಗೆ, ಈ ದೃಶ್ಯವು ಕಾಣುತ್ತಿಲ್ಲ; ಕಂಡವರು ಹೇಳಿದರೆ ಅವರಿಗೆ ಅದನ್ನು ನಂಬಲು ಇಷ್ಟವಿಲ್ಲ. ನಮ್ಮ ಪಟ್ಟಣಗಳ ಸೊಬಗು ಹಾಗಿದೆ. ಆ ನಗರ ಜೀವನದ ಸೌಖ್ಯದಲ್ಲಿ ನಾವು ಮೈಮರತಿಧೇವೆ. ನಮ್ಮ ಪಟ್ಟಣಗಳಲ್ಲಿ ತುಂಬಿರುವ ಭೋಗಸಾಮಗ್ರಿಗಳು ಪರದೇಶದ ವಸ್ತ್ರ ಭಂಡಾರಗಳು, ಇಂದ್ರ ಭವನಗಳಂತಹ ಅಂದಚಂದದ ಮನೆಗಳು, ಹಗಲಿರುಳ ವ್ಯತ್ಯಾಸವನ್ನು ತೋರಗೊಡದ ದೀಪಮಾಲೆಗಳು, ಸುಖಿಗಳಿಗೂ ಕೂಡ ಬಯಕೆಯುನ್ನುಂಟುಮಾಡುವ ಆಸ್ಪತ್ರೆಗಳು, ಇದೆಲ್ಲವನ್ನೂ ಸ್ವಾಧೀನಪಡಿಸಿಕೊಳ್ಳುವುದಕ್ಕೆ ಬೇಕಾದಷ್ಟು ಹಣ. ಇವೇ ಈಗಲ ನಾಗರಿಕತೆಯ ಮೂಲಾಧಾರಗಳು ನಾಗರಿಕರು ಈ ಬೆಡಗಿನಲ್ಲಿ-ಈ ಭ್ರಾಂತಿಯಲ್ಲಿ ಈ ಸುಖದಲ್ಲಿ ಮುಳುಗಿಧಾರೆ. ಇದೇ ನಗರ ಜೀವನದ ಸಿಹಿ! ನಗರಗಳಿಗೆ ಇಷ್ಟೊಂದು ವೈಭವವು ಎಲ್ಲಿಂದ ಬಂತು? ಪಟ್ಟಣಿಗರು, ವಿದ್ಯಾವಂತರು, ಭಾಗ್ಯವಂತರು, ಪಡುತ್ತಿರುವ ಸೌಖ್ಯವೆಲ್ಲವೂ ಯಾರ ಸುಖ?

ಈ ಸುಖದ ಸಾಧನೆಗಳನ್ನು ಪಟ್ಟಣಿಗರು ಎಲ್ಲಿಂದ ಸಂಪಾದಿಸಿ ತಂದಿದಾರೆ? ಇವೆಲ್ಲವೂ ಪಟ್ಟಣಗಳಲ್ಲಿ ಬೆಳದದ್ದೋ ? ಪಟ್ಟಣಗಳಲ್ಲಿ ತಯಾರಾದದ್ದೋ ? ಇವೆಲ್ಲವನ್ನೂ ನಾವು ಕಷ್ಟಪಟ್ಟು ಸಂಪಾದಿಸಿಧೇವೆಯೋ ? ಇಲ್ಲ. ಬಡವರ ಕಷ್ಟವನ್ನು ನಾವು ಉಂಡು ಮೆರೆಯುತ್ತಿಧೇವೆ. ಈ ಕಾಲದ ನಾಗರಿಕತೆಯ ಪ್ರಭಾವವು ಅಂಥಾದ್ದು. ಅದು

ಹಳ್ಳಿಯ ಜೀವಾಳವನ್ನು ಎಳೆಯುತ್ತಿದೆ, ಬಡ ರೈತರನ್ನು ಹಿಂಡಿ ಹೀರುತ್ತಿದೆ. ಹಳ್ಳಿಗಾಡಿನವರು ಕಷ್ಟಪಟ್ಟು ನಾಲ್ಕು ಕಾಳು ಬೆಳೆದರೂ ಅದನ್ನು ಅವರು ಉಣ್ಣುವ ಹಾಗಿಲ್ಲ. ಯಾವುದೋ ಒಂದು ನಾಗರಿಕತೆಯ ಶಳತದಿಂದ ಅದು ಪಟ್ಟಣಗಳಿಗೆ ಬಂದು ತುಂಬುತ್ತಿದೆ. ಹಳ್ಳಿಗರು ಕುರೀಮಂದೆಯನ್ನು ಸಾಕಿ ತುಪಟವನ್ನು ಬೆಳೆದರೆ, ಅದರಿಂದ ನೈಬೆಚ್ಚಗಾಗುವುದು ಪಟ್ಟಣಿಗರಿಗೆ, ಅವರು ದನಕರುಗಳನ್ನು ಸಾಕಿ ಹಾಲು, ಮೊಸರು, ತುಪ್ಪಗಳನ್ನು ತಯಾರುಮಾಡಿದರೆ ಅದನ್ನು ತಿಂದು ತೇಗುವವರು ಪಟ್ಟಣಿಗರು. ಅವರು ಕಷ್ಟಾರ್ಜಿತವಾದ ದ್ರವ್ಯದಿಂದ ಹೊಟ್ಟೆಬಟ್ಟೆಗಳನ್ನು ಕಟ್ಟಿ, ಭಯದಿಂದ ಸರ್ಕಾರದ ಕಂದಾಯ-ಕೌಳಿಗೆಗಳನ್ನು ಕಟ್ಟಿದರೆ, ಅದರ ತಿರುಳೆಲ್ಲ ಪಟ್ಟಣಿಗರ ಸೌಭಾಗ್ಯಕ್ಕಾಗಿಯೇ ಸೂರೆಯಾಗುತ್ತದೆ ಇಷ್ಟಾಗಿ ಹಳ್ಳಿಯವರ ಕೈಲಿ ಎರಡು ಕಾಸು ಉಳಿಯುವುದೇ ತಡ. ಅದನ್ನು ಕೋರ್ಟು ಕಛೇರಿಗಳಿಗೋ, ಅಥವಾ ಕೋರ್ಟು ಕಛೇರಿಗಳ ದಳ್ಳಾಳಿಗಳಾದ ಲಾಯರುಮಹಾಶಯರಿಗೊ ದಂಡ ತೆತ್ತು ಬಿಡಬೇಕಾಗುತ್ತದೆ. ಹಳ್ಳಿಯವರ ಜೇಬಿನಲ್ಲಿ ಕುರುಡು ಕಾಸು ಇದ್ದರೆ, ಅದನ್ನು ಪರದೇಶದ ಸಿಗರೇಟು, ಬೆಂಕಿಪಟ್ಟಣ, ಬಿಸ್ಕತ್ತು, ಪೇಪರಮೆಂಟು, ಸಕ್ಕರೆ, ಸೀಮೆ ಯಣ್ಣೆ, ಈ ಪರದೇಶೀ ವಸ್ತುಗಳು ನುಂಗಿಬಿಡುತ್ತವೆ. ಇದೆಲ್ಲವೂ ಒಂದು ತೂಕ, ಹೆಂಡವೇ ಒಂದು ತೂಕ. ಹಳ್ಳಿಗಾಡಿನ ಸರ್ವಸ್ವವನ್ನೂ ಸೂರೆಮಾಡುವುದು ಹೆಂಡ! ಆರೋಗ್ಯವನ್ನು ಹಾಳುಮಾಡುವುದು ಹೆಂಡ, ನೀತಿಯನ್ನು ನಾಶಮಾಡುವುದೂ ಹೆಂಡ, ಹೆಂಡದಿಂದ ಕಳ್ಳತನ; ಅದರಿಂದ ಹಾದರ. ಖೂನಿ.

ದರೋಡೆ. ಈ ಘೋರಕೃತ್ಯಗಳಗೆಲ್ಲವೂ ಹೆಂಡವೇ ಮೂಲ! ನಾಲ್ಕು ಹರಕು ಗುಡಿಸಲುಗಳುಳ್ಳ ಹಳ್ಳಿಯಲ್ಲಿಯೂ ಒಂದು ದೊಡ್ಡ ಹೆಂಡದಂಗಡಿಯಿದೆ.

## ಪ್ರಳಯವಾಗುವುದೋ ?

ದೇಶಸೇವಕನಿಗೆ ಹಳ್ಳಿಯಲ್ಲಿ ಕಾಣುವುದೇನು ? ಹಳ್ಳಿಗಾಡಿನ ಕಠೋರವಾದ ಬಡತನ-ಪಟ್ಟಣಗಳು ಹಳ್ಳಿಗಳನು ಕಿತ್ತು ತಿನ್ನುವ ದೃಶ್ಯ. ಇದೇ ಹಳ್ಳಿಗಾಡಿನವರಿಗೂ ಪಟ್ಟಣಿಗರಿಗೂ ಇರುವ ಈಗಿನ ಬಾಂಧವ್ಯ. ಇದು ದೇಶಕ್ಕೆ ಒಳ್ಳೆಯದಲ್ಲ, ಮನುಷ್ಯರನ್ನು ಮನುಷ್ಯರು ಕಿತ್ತುತಿನ್ನುವ ಈ ವ್ಯಾಪಾರದಿಂದ ದೇಶಕ್ಕೆ ಸುಖವಿಲ್ಲ. ಇದನ್ನು ಪಟ್ಟಣದವರು ಎಳ್ಳಷ್ಟೂ ಗಮನಿಸುತ್ತಿಲ್ಲ. ಅವರ ಭಾವನೆಯಲ್ಲಿ ಹಳ್ಳಿಗಳಲ್ಲಿ ಬಡತನವಿದ್ದರೆ ಇರಲಿ, ಅದರಿಂದಹಳ್ಳಿಗಾಡಿನವರು ಪರಿತಪಿಸುತ್ತಿದ್ದರೆ ಇರಲಿ; ರೋಗಾದಿಗಳಿಂದ ಅವರು ಸಾಯುತ್ತಿದ್ದರೆ ಸಾಯಲಿ; ಮನೆಮಾರುಗಳಿಲ್ಲದಿದ್ದರೆ ಬಯಲಿನಲ್ಲಿಯೇ ಬಿದ್ದಿರಲಿ; ಹೊಟ್ಟೆಗಿಲ್ಲದಿದ್ದರೆ-ಉಪವಾಸವಿರಲಿ! ಬಟ್ಟೆಗಿಲ್ಲದಿದ್ದರೆ; ಬೆತ್ತಲೆಯಿರಲಿ! ಅವರ ಕರ್ಮ ಅವರದು, ನಮ್ಮ ಪುಣ್ಯ ನಮ್ಮದು. ಇದೇ ಐಶ್ವರ್ಯವಂತರ ಕಲ್ಪನೆಗಳು. ಇದು ನಿಜವಲ್ಲ, ಇದರಲ್ಲಿ ನಿಜವಿದ್ದರೆ, ಬಡವರು ಕಷ್ಟದಲ್ಲಿ ನರಳುತ್ತಲೇ ಇದ್ದರೂ ಐಶ್ವರ್ಯವಂತರು ಸುಖಭೋಗಗಳಲ್ಲಿಯೇ ಮಗ್ನರಾಗಿರಬಹುದಾಗಿತ್ತು. ಬಡವರು ಕಷ್ಟಪಡುತ್ತಿರುವುದು ಬಡವರ ಕರ್ಮದಿಂದಲ್ಲ. ಅದು ಭಾಗ್ಯವಂತರ ಕರ್ಮದಿಂದಲೇ. ಅದಕ್ಕೆ ಭಾಗ್ಯವಂತರೇ

ಕಾರಣಕರ್ತರು. ಭಾಗ್ಯವಂತರು—ಇದನ್ನು ಸ್ವಲ್ಪವೂ ಗಮನಕ್ಕೆ ತಾರದೆ, ಬಡವರನ್ನು ಹಿಂಡಿ ಹೀರುತ್ತಿದ್ದರೆ, ಬಡವರು ಹೀಗೆಯೇ ಕಷ್ಟಪಟ್ಟು ನರಳಿ ತಮ್ಮಷ್ಟಕ್ಕೆ ತಾವೇ ನಾಶ ಹೊಂದುತ್ತಾರೆಂಬ ಭಾವನಾತರಂಗಗಳಲ್ಲಿ ಮುಳುಗಿ ತೇಲುತ್ತಿದ್ದರೆ; ಅದು ಶುದ್ಧ ತಪ್ಪು. ಅದರ ಪರಿಣಾಮವು ಅಷ್ಟು ಸುಲಭವಾದುದಲ್ಲ. ಪರಿಣಾಮದಲ್ಲಿ ಅದು ಉಗ್ರರೂಪವನ್ನು ಧರಿಸುತ್ತದೆ! ಆ ಬಡಜನರ ಹೊಟ್ಟೆಯುರಿಯು ಬ್ರಹ್ಮಾಂಡವನ್ನೇ ಸುಡುತ್ತದೆ! ಆ ಆರ್ತನಾದವು ಜಗತ್ತನ್ನು ತಲ್ಲಣಗೊಳಿಸುತ್ತದೆ! ಅವರ ರೋಗ ರುಜಿನಗಳು ಲೋಕವೆಲ್ಲವನ್ನೂ ಕಬಳಿಸುತ್ತವೆ! ಅವರ ಸಾವು ಪ್ರಪಂಚವನ್ನೇ ಸ್ಮಶಾನವಾಗಿ ಮಾಡುತ್ತದೆ! ಆ ದರಿದ್ರ ನಾರಾಯಣನ ಪ್ರೈರವನರ್ತನದಲ್ಲಿ—ಮಾನವ ಜಗತ್ತು ಧೂಳೀಪಟವಾಗಿ ಹೋಗುತ್ತದೆ.

## ತಡೆಯ ಬಲ್ಲವರಾರು ?

ಇಂತಹ ಪ್ರಳಯವನ್ನು ಯಾರು ನಿಲ್ಲಿಸಬಲ್ಲರು? ಗುಡಿಗೋಪುರಗಳನ್ನು ಕಟ್ಟಿ ಈ ಪ್ರಳಯವನ್ನು ತಡೆಯಲಾಗುವುದಿಲ್ಲ. ಛತ್ರಗಳನ್ನಿಟ್ಟು ಅನ್ನದ ರಾಶಿಗಳಿಂದ ಇದನ್ನು ಇಂಗಿಸುವುದಕ್ಕಾಗುವುದಿಲ್ಲ. ಅರಮನೆಗಳ ರಾಜವೈಭವದಿಂದ ಇದನ್ನು ಮರೆಸುವುದು ಸಾಧ್ಯವಲ್ಲ. ಗುರುಮನೆಗಳ ಜ್ಞಾನ ನೈಪುಣ್ಯದಿಂದ ಇದನ್ನು ಶಾಂತಗೊಳಿಸುವುದು ಶಕ್ಯವಿಲ್ಲ. ವಿದ್ಯಾಲಯಗಳ ವಿದ್ವನ್ಮೈಖರಿಯ ಪ್ರಭಾವದಿಂದ ಇದನ್ನು ಎದರಿಸುವುದು ಸುಲಭವಲ್ಲ. ಹಣಗಾರರಲ್ಲಿರುವ ಗಂಟನ್ನು

ಸಡಿಲಿಸಿ ಅದರಿಂದ ಬಡವರ ಕೈಗೆ ದುಡ್ಡು ದೊರೆಯುವಂತೆ ಮಾಡಬೇಕು. ಪಟ್ಟಣಗಳಿಂದ ಹಳ್ಳಿಗಳಿಗೆ ಹಣವು ಹರಿಯಬೇಕು. ಪರದೇಶಕ್ಕೆ ಹರಿಯುತ್ತಿರುವ ಹೊನ್ನಿನ ಹೊಳೆಯನ್ನು ಅಡ್ಡಗಟ್ಟಿ ನಿಲ್ಲಿಸಬೇಕು. ಈ ಮಹತ್ಕಾರ್ಯವನ್ನು ಮಾಡುವುದಕ್ಕಾಗಿ-ಹಿಂದೂಸ್ಥಾನದಲ್ಲಿ ಬಡವರ ಸಂಕಟದ ಉರಿ ಎದ್ದು ಪ್ರಳಯವಾಗದಂತೆ ತಡೆಯುವುದಕ್ಕಾಗಿ-ಇಂದಿನ ಶಕಾಪುರುಷನಾದ ಗಾಂಧಿಯು ಜನ್ಮವೆತ್ತಿದಾನೆ. ಅದಕ್ಕಾಗಿಯೇ ಎಲ್ಲರೂ ಆತನನ್ನು ಮಹಾತ್ಮನೆಂದು ಕರೆಯುತ್ತಾರೆ. ಆ ಮಹಾತ್ಮನು ನಮ್ಮ ದೇಶದಲ್ಲಿ ಪ್ರಳಯವಾಗದಂತೆಮಾಡುವುದಕ್ಕಾಗಿ-ದೇಶದಲ್ಲೆಲ್ಲಾ ಅಲ್ಲಕಲ್ಲೋಲವಾಗಿ ಸರ್ವನಾಶವಾಗದಂತೆ ಕಾಪಾಡುವುದಕ್ಕಾಗಿ-ಸದಾ ಸರ್ವಕಾಲದಲ್ಲಿಯೂ, ಖಾದೀ! ಖಾದೀ!! ಖಾದೀ!!! ಎಂದು ಮಂತ್ರಪಠನ ಮಾಡುತ್ತಿದಾನೆ. ಆ ಮಹಾತ್ಮನು ಕಂಡುಹಿಡಿದಿರುವ ಮಂತ್ರವು-**ಖಾದೀ!** ಅವನು ಉಪದೇಶ ಮಾಡುವ ಮಂತ್ರವು ಖಾದೀ! ಅವನ ಶಿಷ್ಯರು ಹಿಡಿಯಬೇಕಾದ ವ್ರತವು-**ಖಾದಿ** ಖಾದಿಯೇ ಹಿಂದೂಸ್ಥಾನದ ಬಡತನಕ್ಕೆ ಮದ್ದು. ಖಾದಿಯೇ ಸ್ವಾತಂತ್ರ್ಯದ ಹಾದಿ. ಖಾದಿಯೇ ಆತ್ಮೋನ್ನತಿಯ ದಾರಿ!

## ಖಾದಿಯೇ ಸೇವಾಮಾರ್ಗ

ಖಾದಿಯನ್ನು ಧರಿಸಬೇಕೇ ಇಲ್ಲವೇ? ಎಂಬ ವಿಷಯವನ್ನು ಈಗ ಚರ್ಚೆಮಾಡುತ್ತಾ ಕಾಲಹರಣ ಮಾಡುವುದಕ್ಕೆ ಇದು ಸಮಯವಲ್ಲ. ಇಂದು ಭಾರತ ಭೂಮಿಯಲ್ಲಿ ಘೋರ ಯುದ್ಧವು ನಡೆಯುತ್ತಿರುವ ಸಮಯ ಇದು ಭಾರತೀಯರ

ಶಕ್ತಿ ಪರೀಕ್ಷೆಯ ಸಮಯ. ಇದು ನಮ್ಮ ಮನಃಪರೀಕ್ಷೆಯ ಕಾಲ. ಈ ಕಾಲದಲ್ಲಿ ಪ್ರತಿಯೊಬ್ಬರೂ ತರ್ಕ ಮಾಡಕೂಡದು. ದೇಶಮಾತೆಯ ಆಜ್ಞೆಯನ್ನು ಪರಿಪಾಲನೆ ಮಾಡುವುದೊಂದೇ ಈಗ ಪ್ರತಿಯೊಬ್ಬ ಭಾರತೀಯನ ಕರ್ತವ್ಯ. ದೇಶ ಸೇವೆಯ ಮಾರ್ಗಗಳಲ್ಲಿ ಬಹು ಸುಲಭವಾಗಿ, ಯಾವ ತೊಂದರೆಯೂ ಇಲ್ಲದೇ ಅನುಸರಿಸಬಹುದಾದ ಸೇವಾ ಮಾರ್ಗವು ಖಾದಿಯೇ! ಅತಿ ಕಠಿನವಾದ ಕಠೋರವಾದ ದುರ್ಗಮವಾದ ಮಾರ್ಗವು ಸತ್ಯಾಗ್ರಹ!! ಮಹಾತ್ಮಾಜಿಯವರು ಇವೆರಡು ಮಾರ್ಗಗಳನ್ನು ಭಾರತ ಮಾತೆಯ ಬಂಧ ವಿಮೋಚನೆಗಾಗಿ ಉಪದೇಶ ಮಾಡಿದ್ದಾರೆ.

## ಖಾದಿಯ ವಿರೋಧಿಗಳು.

ಈಗ ನಾವು ಎತ್ತಿರುವುದು ಖಾದಿಯ ಮಾತು. ಕೆಲವರು ಸೊಗಸುಗಾರರಿಗೆ ಖಾದಿಯು ಒಪ್ಪುವುದಿಲ್ಲ. ಅವರ ವೇಷಕ್ಕೆ, ಅವರ ನಾಗರಿಕತೆಯ ಮೋಹಕ್ಕೆ ಖಾದಿಯು ಬಹು ವಿರೋಧವಾಗಿರುವಂತೆ ಅವರ ಭಾವನೆ. ಇದರಿಂದ ನಮ್ಮ ನಾಗರೀಕರೆಂದುಕೊಳ್ಳುವ ಸೊಗಸುಗಾರರಿಗೆ ಖಾದಿಯ ಮೇಲೆ ಮನಸ್ಸು ವಲಿಯುವಂತಿಲ್ಲ. ಇವರ ವೇಷದ ನಾಗರಿಕತೆಯು-ಪಾಶ್ಚಾತ್ಯರ ವೇಷದ ಅನುಕರಣವೇ; ಹಿಂದೂಸ್ಥಾನದಲ್ಲಿ ಪಾಶ್ಚಾತ್ಯ ನಾಗರಿಕತೆಯಾಗಲಿ, ಆ ನಾಗರಿಕತೆಗೆ ಮರುಳಾಗಿರುವ ಪರದಾಸ್ಯ ಬುದ್ಧಿಯಾಗಲಿ, ಇನ್ನು ಮೇಲೆ ನಮ್ಮ ದೇಶದಲ್ಲಿ ವ್ಯಾಪಿಸುವುದು ಸಾಧ್ಯವಿಲ್ಲ. ನಮ್ಮ ರಾಷ್ಟ್ರವು ಈಗ ಎಚ್ಚತ್ತಿದೆ. ಹಿಂದೂಸ್ಥಾನ

ದಲ್ಲಿ ಹುಟ್ಟಿದ ಪ್ರತಿಯೊಬ್ಬ ಮನುಷ್ಯನೂ ವೇಷಭೂಷಣಗ
ಳಲ್ಲಿಯೂ, ಆಹಾರ ವಿಹಾರಗಳಲ್ಲಿಯೂ, ವಿದ್ಯಾವಿನಯ
ಗಳಲ್ಲಿಯೂ, ನಡೆನುಡಿಗಳಲ್ಲಿಯೂ; ನಿಜವಾದ ಭಾರತೀ
ಯನಾಗಿ ಬದುಕಬೇಕು ಇಲ್ಲವೇ ದೇಶದ್ರೋಹಿಯಾಗಿ
ಅಧೋಗತಿಯನ್ನು ಹೊಂದಬೇಕು. ಇಂಥಾ ಸಮಯದಲ್ಲಿ
ಪರಾನುಕರಣದ ಹೀನಾಯಜೀವನವನ್ನು ಏನೆನ್ನಬೇಕು?
ನಮ್ಮ ಸರ್ಕಾರದ ದೊಡ್ಡ ದೊಡ್ಡ ಉದ್ಯೋಗಸ್ಥರಲ್ಲಿ ಬಹು
ಮಂದಿ ತಮ್ಮ ಅಧಿಕಾರ ಗೌರವಕ್ಕೆ ಖಾದಿಯು ತಕ್ಕದ್ದಲ್ಲ
ವೆಂದುಕೊಂಡಿದ್ಧಾರೆ. ಖಾದಿಯ ವೇಷದಲ್ಲಿಯೇ ಸರ್ಕಾ
ರದ ವಿರೋಧಭಾವವು ಅಡಗಿಧೆಯೆಂದು ಕೆಲವರ ಭ್ರಾಂತಿ.
ಈ ಅಧಿಕಾರ ಪ್ರತಿಷ್ಠೆ, ವಿರೋಧ ಭ್ರಾಂತಿಗಳಿಂದ ದೊಡ್ಡ
ಅಧಿಕಾರಿಗಳು ಖಾದಿಯನ್ನು ತಿರಸ್ಕರಿಸುತ್ತಾರೆ. ಇವರ ಕೈ
ಕೆಳಗಿನ ನೌಕರರು ಮೇಲಧಿಕಾರಿಗಳ ಭಯದಿಂದಲೋ,
ಅಥವಾ ಯಾವುದೋ ಅಲ್ಲಸಲ್ಲದ ಸಂದೇಹಗಳಿಂದಲೋ,
ಖಾದಿಯ ಕಡೆಗೆ ತಿರುಗುವುದಿಲ್ಲ. ಹೀಗೆ ಸರ್ಕಾರದ ಅಧಿ
ಕಾರಿಗಳೂ ನೌಕರರೂ ಖಾದಿಯನ್ನು ಬೇಡವೆನ್ನುತ್ತಾರೆ
ಇವರು ಊಟಮಾಡುವ ಅನ್ನವು ಹೇಗೋ ಇವರು ಧರಿ
ಸುವ ಬಟ್ಟೆಯೂ ಹಾಗೆಯೇ; ಇವರು ಕುಡಿಯುವ ಹಾಲಿ
ನಲ್ಲಿ ಎಷ್ಟು ಸರ್ಕಾರದ ವಿರೋಧವಿದೆಯೋ ಈ ಖಾದಿಯ
ಲ್ಲಿಯೂ ಅಷ್ಟೇ-ಸರ್ಕಾರದ ವಿದ್ವೇಷವಿದೆ. ಇದೆಲ್ಲಾ
ಭ್ರಾಂತಿ! ಅಧಿಕಾರಿಗಳು-ತಾವು ಜನಸಾಮಾನ್ಯರಿಗಿಂತಲೂ
ಹೆಚ್ಚಿನವರೆಂದು, ಆಕಾಶದಿಂದ ಇಳಿದುಬಂದವರೆಂದು; ಹಚ್ಚಿ
ಕೊಂಡಿರುವ ಪ್ರತಿಷ್ಠೆಯಿಂದ ಹೀಗೆ ಭ್ರಾಂತರಾಗಿ ಹೋಗಿ
ಧ್ಧಾರೆ. ಈ ಸರ್ಕಾರವು ನಮ್ಮ ಸರ್ಕಾರ. ಈ ಅಧಿಕಾರಿ

ಗಳೂ ನಮ್ಮವರು. ನಮ್ಮ ಸಹೋದರರು. ನಮ್ಮೊಡನೆ, ಹುಟ್ಟಿಬೆಳೆದವರು ನಮ್ಮ ದೇಶಕ್ಕೆ ಪ್ರಾಪ್ತವಾದ ಕಷ್ಟ ಸುಖಗಳನ್ನು ಇವರು ಬೇಕೆನ್ನಲಿ-ಬೇಡವೆನ್ನಲಿ, ಅನುಭವಿಸಿಯೇತೀರಬೇಕು. ನಾವೆಲ್ಲರೂ ಒಟ್ಟಿಗೆ ಬದುಕಬೇಕು. ಒಂದಾಗಿ ಉಳಿಯಬೇಕು ಅಳಿದರೂ ಒಟ್ಟಿಗೆ ಅಳಿಯಬೇಕು. ಇವರು ತಿನ್ನುವ ಸಂಬಳವು ನಮ್ಮ ದೇಶದ ಪ್ರಜೆಗಳ ಕಷ್ಟಾರ್ಜಿತವಾದ ದ್ರವ್ಯ. ಅದನ್ನು ಪುನಃ ಹೊಂದುವುದಕ್ಕೆ ನಮ್ಮ ದೇಶದ ಪ್ರಜೆಗಳಿಗೆ ಅಧಿಕಾರವಿದೆ. ಅದನ್ನು ನಮ್ಮ ಅಧಿಕಾರಿ ಸಹೋದರರು ತಿಳಿದುಕೊಂಡು, ನಮ್ಮ ಬಡಸಹೋದರರ ಈ ಕೈಗಾರಿಕೆಗೆ ಪ್ರೋತ್ಸಾಹಿಸಿದರೆ, ಸರ್ವರಿಗೂ ಸುಖವಿದೆ. ಇಲ್ಲದಿದ್ದರೆ, ಕಷ್ಟವು ಎಲ್ಲರಿಗೂ ಸಿದ್ಧ ! ಯಾರೂ ತಪ್ಪಿಸಿಕೊಳ್ಳಲಾರರು ನಮ್ಮ ಮೈಸೂರು ದೇಶದಲ್ಲಿ ಮಾತ್ರ ನಮ್ಮ ಶ್ರೀಮನ್ಮಹಾರಾಜರವರೇ ಖಾದಿಗೆ ವಿಶೇಷ ಪ್ರೋತ್ಸಾಹವನ್ನು ಕೊಡುತ್ತಿರುವಾಗ; ಇನ್ನೂ ಅತಿಶಯವಾದ ಸಹಾಯವನ್ನು ಮಾಡಲು ಸಿದ್ಧರಾಗಿರುವಾಗ; ನಮ್ಮ ಹುದ್ದೇದಾರರ ಭಯಭ್ರಾಂತಿಗಳಿಗೆ-ಎಳ್ಳಷ್ಟೂ ಕಾರಣವಿಲ್ಲ.

ಈ ಬಡವರ ಕೈಗಾರಿಕೆಗೆ ಮತ್ತೊಂದು ಬಲವಾದ ಶತ್ರು ಸೈನ್ಯವೆಂದರೆ—ನಮ್ಮ ದೇಶದ ಪರದೇಶೀ ವಸ್ತ್ರ ವ್ಯಾಪಾರಿಗಳು ಮತ್ತು ವರ್ತಕರು ಐಶ್ವರ್ಯವನ್ನು ಗಂಟು ಹಾಕುವ ದುರಾಶೆಯಿಂದ ಪರದೇಶದವರ ದಳ್ಳಾಳಿಗಳಾಗಿ ನಮ್ಮ ದೇಶಕ್ಕೆ ಅಪಾರವಾದ ದ್ರೋಹವನ್ನು ಮಾಡುತ್ತಿದ್ದಾರೆ. ನಮ್ಮ ದೇಶದಲ್ಲಿ ಅಜ್ಞಾನಿಗಳಾದ ಲಕ್ಷಾಂತರ ಜನರಿದ್ದಾರೆ. ಅವ

ರಿಗೆ ತಮ್ಮ ಹಿತಾಹಿತಗಳೇ ಗೊತ್ತಿಲ್ಲ; ಹೀಗಿರುವಲ್ಲಿ ಅವ
ರಿಗೆ ದೇಶದ ಹಿತಾಹಿತಗಳು ಹೇಗೆ ಗೊತ್ತಾಗಬೇಕು. ಅವರು
ಧರಿಸುತ್ತಿರುವ ಪರದೇಶೀ ವಸ್ತ್ರಗಳನ್ನು ಅವರ ಮೇಲೆ
ಹೊದ್ದಿಸಿದವರಾರು? ಈ ಪರದೇಶೀ ವಸ್ತ್ರ ವ್ಯಾಪಾರಿಗಳೇ.
ಇವರು ಪರದೇಶೀ ವಸ್ತ್ರಗಳನ್ನು ತರಿಸಿ, ಅಂಗಡಿಗಳಲ್ಲಿ
ಇಟ್ಟು; ಆ ಬಟ್ಟೆಗಳ ತಳಕು ಬಣ್ಣಗಳಿಂದ ಅಜ್ಞಾನಿಗಳಾದ
ತಮ್ಮ ಸಹೋದರರನ್ನು ವಂಚಿಸಿ, ದುಡ್ಡು ಸಂಪಾದಿಸುತ್ತಿ
ದ್ದಾರೆ. ಇವರಿಗೆ ದೇಶದ ಮೇಲೆ ಭಕ್ತಿ ಇಲ್ಲ; ಸ್ವಾತಂ
ತ್ರ್ಯದ ಆಶೆಯಿಲ್ಲ. ಈ ವ್ಯಾಪಾರಿಗಳಿಗೆ ಯಾವುದೂ ಬೇಡ.
ಅವರಿಗೆ ಬೇಕಾದದ್ದು ದುಡ್ಡು! ಆ ದುಡ್ಡು ಸಂಪಾದಿಸುವು
ದಕ್ಕೆ ಧರ್ಮಾಧರ್ಮಗಳ ಪ್ರಭೇಧವು ಅವರಿಗೆ ಇಲ್ಲವೇ ಇಲ್ಲ

ಆದರೆ ಈಗ ನಮ್ಮ ದೇಶದಲ್ಲಿ ಉಜ್ವಲ ದೇಶಭಕ್ತಿಯ
ಪ್ರವಾಹವು ಹರಿಯುತ್ತಲಿದೆ. ಸ್ವಾತಂತ್ರ್ಯದ ದೇವತೆಯ
ವಿಶ್ವರೂಪವು ಭರತ ವರ್ಷದಲ್ಲಿ ಅವಿರ್ಭವಿಸಿದೆ. ಈ
ಸ್ವಾತಂತ್ರ್ಯದೇವತೆಯ ಆರಾಧಕರೂ ದೇಶಭಕ್ತರೂ ಭಾರತ
ವರ್ಷದ ಬಂಧವಿಮೋಚನೆಗಾಗಿ ತಮ್ಮ ತನುಮನಧನಗಳ
ನ್ನೆಲ್ಲಾ ತ್ಯಾಗಮಾಡಿ ನಿಂತುಬಿಟ್ಟಿದ್ದಾರೆ. ಇವರು ಪರದೇ
ಶೀ ವಸ್ತ್ರ ಬಹಿಷ್ಕಾರದ ಬ್ರಹ್ಮಾಸ್ತ್ರವನ್ನು ಹೂಡಿಬಿಟ್ಟಿ
ದ್ದಾರೆ. ಇದರ ಮುಂದೆ ಪರದೇಶೀ ವಸ್ತ್ರ ವ್ಯಾಪಾರಿಗಳ
ದುಡ್ಡಿನಾಶೆಗೆ ಜಯವೆಲ್ಲಿ?

## ಪರದೇಶೀ ವಸ್ತ್ರ ಬಹಿಷ್ಕಾರ

ಸಮುದ್ರ ಮಥನದಲ್ಲಿ ಅಮೃತದ ಜೊತೆಯಲ್ಲಿಯೇ,
ಹಾಲಾಹಲವೆದ್ದಂತೆ-ಶ್ರೀ ಕೃಷ್ಣ ಪರಮಾತ್ಮನ ಜೊತೆಯಲ್ಲಿ

ದುರ್ಗಾದೇವಿಯು ಆವಿರ್ಭವಿಸಿದಂತೆ-ಖಾದಿಯ ಜೊತೆಯಲ್ಲಿ ಬಹಿಷ್ಕಾರದ ಬ್ರಹ್ಮಾಸ್ತ್ರವು ಎದ್ದಿದೆ. ಈ ದುರ್ಗೆಯ ಆರಾಧನೆಗೆ ಬಹಳ ಶಕ್ತಿ ಸಾಮರ್ಥ್ಯಗಳು ಬೇಕು. ಆ ದೇವಿಯ ಆರಾಧನೆಯು ಬೊಂಬಾಯಿನಲ್ಲಿ ನಡೆಯುತ್ತಿದೆ. ಆ ಬ್ರಂಹ್ಮಾಸ್ತ್ರವು ಕಲಿಕತ್ತೆಯಲ್ಲಿ ಜಾಜ್ವಲ್ಯಮಾನವಾಗಿ ಉರಿಯುತ್ತಿದೆ. ಪ್ರಪಂಚದ ದೃಷ್ಟಿ ಎಲ್ಲವೂ ಅತ್ತಕಡೆಗೆ ಗಾಬರಿಯಿಂದ ತಿರುಗಿದೆ. ಆ ಜ್ವಾಲೆಯ ಧೂಮವು ಇಂಗ್ಲೆಂಡಿನ ಮೇಲೆ ಮುಸುಕಿದೆ. ಆ ಜ್ವಾಲೆಯು ಲಾಂಕಾಷೇರಿನ ಐಶ್ವರ್ಯವನ್ನು ಹೀರುತ್ತಿದೆ. ಬಹಿಷ್ಕಾರದ ಪ್ರಭಾವವು ಇಷ್ಟೊಂದು ಮಹತ್ತರವಾಗಿರುವಾಗ ನಮ್ಮ ದೇಶದ ಸೊಗಸುಗಾರರು, ನಮ್ಮ ಅಧಿಕಾರಿ ಸಹೋದರರು. ಪರದೇಶೀ ವಸ್ತ್ರಮೋಹವನ್ನು ಬಿಡದಿದ್ದರೆ; ನಮ್ಮ ಪರದೇಶೀ ವಸ್ತ್ರವ್ಯಾಪಾರಿಗಳು ತಮ್ಮ ಹಣದ ದಾಹದಿಂದ ಬೀಸಿರುವ ಬಲೆಯನ್ನು ತೆಗೆದೊಗೆಯದಿದ್ದರೆ; ಆದರ ಪರಿಣಾಮವೇನಾಗುವುದೋ ಅವರು ಒಂದು ಕ್ಷಣ ಯೋಚಿಸಿ ನೋಡಲಿ. ಪರದೇಶೀ ವಸ್ತ್ರಗಳು ಪ್ರವೇಶ ಮಾಡುವ ಮಹಾದ್ವಾರಗಳಾದ ಬೊಂಬಾಯಿ-ಕಲಕತ್ತೆಗಳಲ್ಲಿ ಬಹಿಷ್ಕಾರದ ಮಹಾಜ್ವಾಲೆಯು ಎದ್ದಿದೆ ಅದು ಒಂದು ಗೇಣುದ್ದ ಬಟ್ಟೆಯನ್ನೂ ಒಳಗೆ ಬಿಡುವುದಿಲ್ಲವೆಂಬುದು ನಿಶ್ಚಯ. ಆಗ ನಮ್ಮ ದೇಶಕ್ಕೆ ಪರದೇಶೀ ವಸ್ತ್ರಗಳು ಎಲ್ಲಿಂದ ಬರಬೇಕು. ಪರದೇಶೀ ವಸ್ತ್ರದ ಮೋಹದಲ್ಲಿ ತೊಳಲುತ್ತಿರುವವರಿಗೆ ಆಗ ಗತಿಯೇನು? ಆಗ ಅವರು ಇಷ್ಟಪಡಲಿ; ಇಷ್ಟಪಡದಿರಲಿ, ಅವರಿಗೆ ಖಾದಿಯೇ ಗತಿ. ಆಗಲಾದರೂ ನಮ್ಮ ಸಹೋದರರು ಖಾದಿಯನ್ನು ಧರಿಸಲೊಪ್ಪುವರೋ? ಅಥವಾ ಹಠದಿಂದ ಬೆತ್ತಲೆ ತಿರುಗುವರೊ?

## ಖಾದಿಯ ನಿರ್ಮಾಣ

ಈಗ ಖಾದಿಯ ಭಕ್ತಿಯು ದಿನದಿನಕ್ಕೆ ಹೆಚ್ಚಾಗುತ್ತಿದೆ. ಆದರೆ ಖಾದಿಯು ಇಲ್ಲ. ಖಾದಿಯ ಭಕ್ತರಿಗೆ ಈಗಲೇ ಖಾದಿಯು ಬೇಕು. ನಾವು ಹಿಂದಿನ ಲೇಖನದಲ್ಲಿ ಹೇಳಿದಂತೆ ಈಗ ಖಾದಿಯನ್ನು ತಿರಸ್ಕರಿಸುತ್ತಿರುವವರಿಗೂ ಕ್ಷಿಪ್ರದಲ್ಲಿಯೇ ಖಾದಿಗೆ ಶರಣು ಹೋಗುವ ಗತಿಯು ಬರುತ್ತದೆ. ನಮ್ಮ ದೇಶಕ್ಕೆಲ್ಲಾ ಖಾದಿಯು ಸರಬರಾಜಾಗುವುದಕ್ಕೆ ಈಗಲೇ ನಾವು ಪ್ರಯತ್ನಮಾಡಬೇಕು. ಖಾದಿಯ ನಿರ್ಮಾಣಕ್ಕೆ ಹಣವು ಬೇಕು. ಮತ್ತು ಖಾದಿಯ ಉತ್ಪತ್ತಿಗೂ ಪ್ರಚಾರಕ್ಕೂ ಕೆಲಸ ಮಾಡುವ ಕೆಲಸಗಾರರು ಬೇಕು.

ದೇಶಸೇವಕರಲ್ಲಿ ಈಗ ಹತ್ತುವರ್ಷಗಳಿಂದಲೂ ಬಹು ಮಂದಿ ಖಾದಿಯ ಕೆಲಸವನ್ನು ಮಾಡುತ್ತಾ ಆ ಕೆಲಸದಲ್ಲಿ ಚೆನ್ನಾಗಿ ನುರುಗಿದ್ದರು. ಈಗ ಸತ್ಯಾಗ್ರಹವು ಆರಂಭವಾದ ಮೇಲೆ ಅವರೆಲ್ಲರೂ ಆ ರಣಕ್ಷೇತ್ರದಲ್ಲಿ ಹೋಗಿ ಜೈಲುಗಳೊಳಗೆ ಸೇರಿಹೋಗಿದಾರೆ. ಈಗ ಖಾದಿಗೆ ಕೆಲಸಮಾಡುವವರು ಸಿಕ್ಕುವುದೇ ಕಷ್ಟ. ಯಾರು ಸತ್ಯಾಗ್ರಹಕ್ಕೆ ಸಿದ್ಧರಾಗಿಲ್ಲವೋ ಅವರೆಲ್ಲರೂ ಖಾದಿಯ ಉತ್ಪತ್ತಿಗೆ ಕೆಲಸ ಮಾಡಲು ಹೊರಡಬೇಕು. ಇಲ್ಲದಿದ್ದರೆ ಬಲು ಬಿಕ್ಕಟ್ಟಿಗೆ ಬರುತ್ತದೆ. ಬಹಿಷ್ಕಾರದ ಅಗ್ನಿಜ್ವಾಲೆಯಲ್ಲಿ ಪರದೇಶೀ ವಸ್ತ್ರಗಳು ನಿರ್ನಾಮವಾಗಿ ಹೋಗುತ್ತವೆ. ದೇಶದಲ್ಲಿ ಬಟ್ಟೆಗಾಗಿ ಹಾಹಾಕಾರ. ಆಗ ಖಾದಿ ಇಲ್ಲದಿದ್ದರೆ, ನಮ್ಮ ಗತಿಯೇನು? ಆ ಕಾಲವು ಬರುತ್ತಿದೆ. ಬಹು ಬೇಗ ಬಂದುಬಿಡುತ್ತದೆ; ಆದ್ದರಿಂದ ಖಾದಿಯ ನಿರ್ಮಾಣಕ್ಕೆ ದೇಶಸೇವಕರು ಈಗಲೇ ಸಜ್ಜಾಗಿ ಮುಂದಕ್ಕೆ ಹೊರಡಬೇಕು.

ದೇಶದ ಹಣವಂತರು ಬಂಡವಾಳವನ್ನು ಒದಗಿಸಿಕೊಡಬೇಕು. ಹಣವಂತರಿಂದ ದುಡ್ಡು ತೆಗೆಯುವ ಕೆಲಸವು ಬಲು ಕಷ್ಟ. ನಮ್ಮ ದೇಶದಲ್ಲಿ (ಮೈಸೂರು ದೇಶ) ಹಣವಂತರಿಗೆ ಮುಂದಾಳುಗಳಾಗಲು ಬಲು ಆಶೆ. ದುಡ್ಡು ಕೊಡುವುದೆಂದರೆ, ಬಲು ಗೋಳು! ಈಗ ದೇಶದ ಕೆಲಸಗಳಲ್ಲಿ ಖಾದಿಯು ಮೊದಲನೆಯದು. ಖಾದಿಗೆ ಸಹಾಯ ಮಾಡುವವರು ಸರ್ಕಾರದ ಆಗ್ರಹಕ್ಕೆ ಪಾತ್ರರಾಗಬೇಕಾದ ಭಯವಿಲ್ಲ. ಜೈಲುಗಳಿಗೆ ಹೋಗಬೇಕಾದ ಕಷ್ಟವಿಲ್ಲ. ಖಾದಿಯು ಅಪಾಯವಿಲ್ಲದ ದೇಶ ಸೇವೆ. ಮುಂದಾಳುಗಳು ಈ ದೇಶಸೇವೆಗೆ ಸಿದ್ಧರಾಗದಿದ್ದರೆ, ಅವರು ಕರ್ತವ್ಯವಿಮುಖರಾದ ಪ್ರಜಾದ್ರೋಹಿಗಳು. ಅವರುಗಳು ಖಾದಿಯ ಸೇವೆಗೆ ಮುಂದೆ ಬಾರದಿದ್ದರೆ, ಅವರು ಮುಖಂಡರಾಗಲು ಅರ್ಹರಲ್ಲ. ಮುಖಂಡತನವನ್ನು ಅವರಿಗೆ ಜಹಗೀರಿಯಾಗಿ ಬಿಟ್ಟು, ಸುಖವಾಗಿ ಸ್ಥಾನಮಾನಗಳನ್ನು ಅನುಭವಿಸಲು ಅವಕಾಶ ಕೊಟ್ಟು, ನಾವು ಸುಮ್ಮನೆ ಕೂಡುವ ಹಾಗೆಯೂ ಇಲ್ಲ. ಅವರನ್ನು ಪ್ರಾರ್ಥಿಸುತ್ತೇವೆ. ಕರೆಯುತ್ತೇವೆ. ಬಲಾತ್ಕಾರ ಮಾಡಿ ನೋಡುತ್ತೇವೆ. ಬಾರದಿದ್ದರೆ ಬಗ್ಗದಿದ್ದರೆ ಅವರ ಬಣ್ಣವು ಬಯಲಾಗುತ್ತದೆ. ಅರ್ಹತೆಯಿಲ್ಲದೇ ಇನ್ನು ಮೇಲೆ ಮುಖಂಡತನವಿಲ್ಲ. ಸ್ಥಾನ ಮಾನಗಳ ಅಟ್ಟಹಾಸವಿಲ್ಲ. ಅವರು ಅವರೇ! ನಾವು ನಾವೇ! ನಮ್ಮ ಭರವಸೆಯು ಪ್ರಜಾಸಾಮಾನ್ಯದ ಮೇಲೆ. ನಾವು ಭಗವಂತನಲ್ಲಿ ಭರವಸೆಯಿಟ್ಟು ಖಾದಿಯ ಸೇವೆಯಲ್ಲಿ ಮುಂದುವರಿಯುತ್ತೇವೆ.

**ತತ್ರಶ್ರೀಃ ವಿಜಯೋಭೂತಿಃ ಧ್ರುವಾನೀತಿರ್ಮತಿರ್ಮಮ!**

**ಸೀತಾರಾಮ ಶಾಸ್ತ್ರಿ**

# ಮೀರಾಬಾಯಿಯವರು

ಮೀರಾಬಾಯಿಯವರು ಮಹಾತ್ಮಾ ಗಾಂಧಿಯವರ ಪರಮ ಭಕ್ತರು. ಇವರ ಪೂರ್ವದ ಹೆಸರು ಮಿಸ್ ಸ್ಲೇಡ ರೆಂದು. ಇವರು ಅಮೇರಿಕಾ ದೇಶದ ಕೋಟ್ಯಾಧೀಶರ ಮಗಳು. ಇಂದು ಭಾರತೀಯರಾಗಿ ಬಿಟ್ಟಿಧಾರೆ. ಮಹಾತ್ಮಾ ಗಾಂಧಿಯವರು ಸತ್ಯಾಗ್ರಹಕ್ಕೆ ಹೊರಡುವಾಗ ಅವರ ಆಶ್ರಮಕ್ಕೆ ಈಕೆಯನ್ನು ಅಧಿಷ್ಟಾತ್ರಿಯಾಗಿ ನೇಮಿಸಿ, ಸಮರ ಯಾತ್ರೆ ಮಾಡಿದರು. ಮೀರಾಬಾಯಿಯವರು ಉಜ್ವಲ ಖಾದೀ ಭಕ್ತರು. ಖಾದಿಯ ನಿರ್ಮಾಣಕ್ಕಾಗಿ ಬಹಳ ಶ್ರಮ ಪಡುತ್ತಿಧಾರೆ. ಅವರು "ಆತ್ಮಾವಲಂಬನೆ" ಎಂಬ ಒಂದು ಚಿಕ್ಕ ಪುಸ್ತಕವನ್ನು ಬರೆದಿದಾರೆ. ಅವೆಲ್ಲಾ ಖಾದಿಯ ಮೇಲಿನ ಲೇಖನಗಳು. ಅವುಗಳಲ್ಲಿ ಕೆಲವನ್ನು ಕನ್ನಡಕ್ಕೆ ಪರಿವರ್ತನೆಮಾಡಿ ಇಲ್ಲಿ ಕೊಟ್ಟಿದೆ.



## I ಖಾದಿಯ ತತ್ವವೇನು.

ಬಡತನದಲ್ಲಿ ಮುಳುಗಿ ಹೋಗಿರುವ ಹಿಂದೂಸ್ಥಾನಕ್ಕೆ ಸಂಪಾದನೆಯ ಮಾರ್ಗವನ್ನು ತೋರುವ ಬಲವಾದ ತಳ ಹದಿಯು ಖಾದಿಯೇ; ಈ ಖಾದಿಯು ಅರಹೊಟ್ಟೆಗೂ ಗತಿಯಿಲ್ಲದೆ, ಪರಿತಪಿಸುತ್ತಿರುವ ಹಳ್ಳಿಗಾಡಿನ ಬಡರೈತರಿಗೆ ನಾಲ್ಕು ಕಾಸು ದೊರೆಯುವಂತೆ ಮಾಡುತ್ತದೆ. ಈ ಖಾದಿಯ ಕಸಬು ಆರಂಭಗಾರರ ಶಕ್ತಿಗೆ ಅನುಗುಣವಾಗಿದೆ. ನಮ್ಮ ದೇಶದ ಜನರಿಗೆ ಅತ್ಯವಶ್ಯಕವಾಗಿ ಬೇಕಾದ ಹೊಟ್ಟೆ ಬಟ್ಟೆಗಳಲ್ಲಿ ಒಂದನ್ನು ಈ ಕಸಬು ಸಂಪಾದಿಸಿಕೊಡುತ್ತದೆ. ಆಹಾರವೂ ಉಡಿಗೆ ತೊಡಿಗೆಗಳೂ ಇಲ್ಲದೇ ಮನುಷ್ಯನು ಬದುಕಲಾರನು. ಖಾದಿಯ ತಯಾರಿಯು ಅವನಿಗೆ ಎರಡನೆಯದನ್ನು ಸರಪರಾಜುಮಾಡುತ್ತದೆ. ಮೊದಲನೆಯದಕ್ಕೂ ಸ್ವಲ್ಪ ದುಡ್ಡು ಸಂಪಾದನೆ ಮಾಡಿಕೊಡುತ್ತದೆ ನಮ್ಮ ಬೇಸಾಯಗಾರರಿಗೆ ವರ್ಷದಲ್ಲಿ ನಾಲ್ಕು ತಿಂಗಳು ಕೆಲಸವಿಲ್ಲ. ಕೆಲವು ಕಡೆ ಆರು ತಿಂಗಳು ಕೆಲಸವಿಲ್ಲ (ಇನ್ನು ಕೆಲವು ಕಡೆ ಎಂಟು ತಿಂಗಳುಗಳು ಕೆಲಸವಿಲ್ಲ.)

## II ಖಾದಿಯೂ ಸ್ವದೇಶೀ ಮಿಲ್ ಬಟ್ಟೆಗಳೂ

ಹಿಂದೂಸ್ಥಾನವು ಕಡು ಬಡಶೀಮೆ-ನಮ್ಮ ದೇಶದ ಪ್ರಜಾಕೋಟಿಯಲ್ಲವೂ ಹಳ್ಳಿಗಳಲ್ಲಿ ಜೀವಿಸುವ ಬೇಸಾಯಗಾರರು. ಈ ಪ್ರಜಾಕೋಟಿಯು ಉದ್ಯೋಗವಿಲ್ಲದೇ ಕಡುಕಷ್ಟಪಡುತ್ತಿದೆ. ಆದ್ದರಿಂದ ಹಿಂದೂಸ್ಥಾನದ ಸಂಪತ್ತನ್ನು ಭದ್ರಪಡಿಸಬೇಕಾದರೆ-ಕಷ್ಟದಲ್ಲಿ ಮುಳುಗಿರುವ ಪ್ರಜಾಕೋಟಿಗೆ ಸುಖ

ವನ್ನುಂಟುಮಾಡಬೇಕಾದರೆ-ಆ ಹಳ್ಳಿಗಾಡಿನವರ ಮನೆಗಳಲ್ಲಿ ಯೇ ಅವರಿಗೊಂದು ಕಸಬನ್ನು ಕಲ್ಪಿಸಿಕೊಡಬೇಕು. ಹೀಗೆ ಖಾದಿಯೊಂದೇ ಹಿಂದೂಸ್ಥಾನವನ್ನು ಉದ್ಧಾರಮಾಡಬಲ್ಲದು. ಈ ಕಾರ್ಯವು ಎಷ್ಟೇ ಮಿಲ್ಲುಗಳನ್ನು ಇಟ್ಟರೂ ಸಾಧ್ಯವಾಗುವುದಿಲ್ಲ. ಮಿಲ್ಲುಗಳ ಕೆಲಸವಾಗಬೇಕಾದರೆ ಹಳ್ಳಿಗಾಡಿನ ಜನರು ತಮ್ಮ ಮನೆಗಳನ್ನು ಬಿಟ್ಟು ಪಟ್ಟಣಗಳಿಗೆ ಹೋಗಿ ನೆಲಸಬೇಕು. ಬೇಸಾಯಗಾರರು ಹೀಗೆ ಮನೆಮಾರುಗಳನ್ನು ಬಿಟ್ಟು ಹೋಗುವುದಕ್ಕಾಗುವುದಿಲ್ಲ. ಅವರಿಗೆ ತಮ್ಮ ಆರಂಬದ ಜೊತೆಗೆ ಅವರ ಮನೆಯಲ್ಲಿಯೇ ಮಾಡಬಹುದಾದ ಒಂದು ಕೈ ಕಸಬು ಬೇಕಾಗಿದೆ. ಖಾದಿಯು ಅದನ್ನು ಕೊಡುತ್ತದೆ.

ಹಿಂದೂಸ್ಥಾನದ ಕಷ್ಟ ಪರಿಹಾರವು ಖಾದಿಯಿಂದಲೇ ಆಗುತ್ತದೆಯೇ ಹೊರತು ಮಿಲ್ಲುಗಳಿಂದ ಆಗುವುದೇ ಇಲ್ಲ. ಈಗ ಹಿಂದೂಸ್ಥಾನವನ್ನು ಖಾದಿಯೇ ಬದುಕಿಸಬಲ್ಲದು. ಖಾದಿಯು ಬಲು ಹೆಚ್ಚಾಗಿ ತಯಾರಾಗುವಂತೆ ಅತಿ ಶೀಘ್ರವಾಗಿ ವ್ಯವಸ್ಥೆಮಾಡಬಹುದು. ಕಡಮೇ ಖರ್ಚಿನಲ್ಲಿ ಹೆಚ್ಚು ಕೆಲಸವನ್ನು ನಡೆಸಬಹುದು. ಹಿಂದೂಸ್ಥಾನದಲ್ಲಿ ಮಿಲ್ಲುಗಳನ್ನು ಸ್ಥಾಪಿಸಿ, ಸ್ವದೇಶೀ ಬಟ್ಟೆಗಳನ್ನು ತಯಾರು ಮಾಡಬೇಕಾದರೆ—ಬಹಳ ಖರ್ಚು ತಗಲುತ್ತದೆ. ಮತ್ತು ಬಹಳ ಸಾವಕಾಶವಾಗುತ್ತದೆ. ಅದೂ ಅಲ್ಲದೆ ಮಿಲ್ಲುಗಳನ್ನು ಸ್ಥಾಪಿಸಬೇಕಾದರೆ, ಪರದೇಶದ ಯಂತ್ರ ಸಾಮಗ್ರಿಗಳಿಗೂ ಪರದೇಶೀ ಕಾರೇಗಾರರ ಕುಶಲತೆಗೂ, ನಾವು ಅಡಿಯಾಳಾಗಿ ಕಾದಿರಬೇಕಾಗುತ್ತದೆಂಬುದನ್ನು ಯಾವಾಗಲೂ ನೆನಪಿನಲ್ಲಿಟ್ಟಿರಬೇಕು. ಈ ಕಾಲದಲ್ಲಿ 20,000 ಕದರುಗಳುಳ್ಳ ಗಿರಣಿ

ಯೊಂದನ್ನು ಸ್ಥಾಪಿಸಬೇಕಾದರೆ, ಸರಿಸುಮಾರು 16,60,917 ರೂಪಾಯಿಗಳು ಬೇಕಾಗುತ್ತವೆ. ಅಷ್ಟೇ ಹಣವನ್ನು ಖರ್ಚು ಮಾಡಿದರೆ-8, 30 458 ಕೈ ಕದರುಗಳನ್ನು ನಡೆಯುವಂತೆ ಮಾಡಬಹುದು. ಮಿಲ್ಲಿನಲ್ಲಿ ಒಂದು ಕದರಿನಲ್ಲಿ ಗಂಟೆಗೆ 600 ಗಜ ದಾರವಾಗುತ್ತದೆ. ಚರಕದಲ್ಲಿ ಗಂಟೆಗೆ 250 ಗಜ ದಾರವಾಗುತ್ತದೆ. ಮಿಲ್ಲಿನಲ್ಲಿ ದಿವಸಕ್ಕೆ 10 ಘಂಟೆಗಳು ಕೆಲಸಮಾಡಬೇಕು. ಚರಕದಲ್ಲಿ ದಿವಸಕ್ಕೆ 4 ಗಂಟೆ ಕೆಲಸ ಮಾಡಿದರೆ, ಸಾಕು. ಇಷ್ಟು ತಾರತಮ್ಯವಿದ್ದರೂ ಮಿಲ್ಲು ಸ್ಥಾಪಿಸಲು ಎಷ್ಟು ಬಂಡವಾಳವು ಬೇಕೋ ಅಷ್ಟೇ ಬಂಡವಾಳವನ್ನು ಚರಕಗಳ ಮೇಲೆ ಉಪಯೋಗಿಸುವುದರಿಂದ ಮಿಲ್ಲಿಗಿಂತಲೂ 6—7 ಪಾಲು ಹೆಚ್ಚು ಮಾಲನ್ನು ತಯಾರ್ಮಾಡಬಹುದು.

## III ಖಾದಿಯ ಚರಿತ್ರೆ.

ಕ್ರಿ ॥ ಪೂ | 569 ಕ್ಕೆ ಹಿಂದೆಯೇ ಹಿಂದೂಸ್ಥಾನವು ಹೊರದೇಶಗಳಿಗೆ ಖಾದಿ ವ್ಯಾಪಾರವನ್ನು ಮಾಡುತ್ತಿದ್ದಿತು. ಸುಮಾರು 2500 ವರ್ಷಗಳಿಂದಲೂ, ಹತ್ತಿಯ ವ್ಯಾಪಾರವು ಬಲು ಜೋರಿನಿಂದ ನಡೆಯುತ್ತಿತ್ತು. ಕ್ರಿಸ್ತಶಕ 1800 ರ ವರೆಗೆ ಹಿಂದೂಸ್ಥಾನದ ಹಳ್ಳಿಗಳಲ್ಲಿ ಪ್ರತಿ ಮನೆಯಲ್ಲಿಯೂ ಖಾದಿಯು ಯಥೇಚ್ಛವಾಗಿ ದೊರೆಯುತ್ತಿತ್ತು. ಆ ಬಟ್ಟೆಗಳು ನಯದಲ್ಲಿಯೂ, ಅಲಂಕಾರದಲ್ಲಿಯೂ ಜಗತ್ಪ್ರಸಿದ್ಧವಾಗಿದ್ದವು. ಹಿಂದೂಸ್ಥಾನಕ್ಕೆ ಬೇಕಾಗುವ ಬಟ್ಟೆಗಳೆಲ್ಲವೂ ಇಲ್ಲಿಯೇ ತಯಾರಾಗುತ್ತಿದ್ದವು. ಅಷ್ಟು ಮಾತ್ರವಲ್ಲ. ಕೋಟ್ಯಾಂತರ ರೂಪಾಯಿಗಳ ಬಟ್ಟೆಗಳು ಯೂರೋಪುದೇಶಕ್ಕೂ ರಫ್ತು ಆಗುತ್ತಿತ್ತು.

ಈ ಆಶ್ಚರ್ಯಕರವಾದ ಬಟ್ಟೆಯ ಕೈಗಾರಿಕೆಯು-ಹಿಂದೂಸ್ಥಾನವು ಹೆಮ್ಮೆಯಿಂದ ಮೆರೆಯುತ್ತಿದ್ದ ಈ ಕೈಗಾರಿಕೆಯು ಹಿಂದೂಸ್ಥಾನದ ಸಂಪತ್ತಿಗೆ ಆಧಾರಭೂತವಾದ ಈ ಕೈಗಾರಿಕೆಯು-ಮಿಲ್ಲುಗಳ ಪೈಪೋಟಿಯಿಂದ ಮಾತ್ರವೇ ನಶಿಸಿ ಹೋಗಲಿಲ್ಲ. ಬ್ರಿಟಿಷ್ ಸರಕಾರವು ತನ್ನ ಸರ್ವ ಪ್ರಯತ್ನದಿಂದಲೂ, ಈ ಕೈಗಾರಿಕೆಯನ್ನು ನಾಶಮಾಡಿಬಿಟ್ಟಿತು. ಬ್ರಿಟಿಷ್ ದೇಶದಲ್ಲಿ ಹಿಂದೂಸ್ಥಾನದ ಬಟ್ಟೆಯನ್ನು ಉಪಯೋಗಿಸುವವರನ್ನು ಶಿಕ್ಷೆ ಮಾಡಿದರು. ಬ್ರಿಟಿಷರು ತಮ್ಮ ಪದಾರ್ಥಗಳನ್ನು ಹಿಂದೂಸ್ಥಾನದ ಮೇಲೆ-ಬಲಾತ್ಕಾರವಾಗಿ ಹೊರಿಸಿದರು. ಅವರ ಸಾಮಾನುಗಳಿಗೆ ತೆರಿಗೆ ಸುಂಕಗಳಿಲ್ಲದೇ ನಮ್ಮ ದೇಶದಲ್ಲಿ ವ್ಯಾಪಾರ ನಡೆಯುವಂತೆ ಮಾಡಿಕೊಂಡರು. ನಮ್ಮ ದೇಶದ ವಳ ವ್ಯಾಪಾರದ ಮೇಲೆ ಬಲವಾದ ತೆರಿಗೆ ಸುಂಕಗಳನ್ನು ಹಾಕಿದರು. ಇದರಿಂದ ಹಿಂದೂಸ್ಥಾನದ ಈ ಪುರಾತನ ವ್ಯಾಪಾರವು ನಾಮಾವಶೇಷವಾಗಿ ಹೋಯಿತು!

ಹಿಂದೂಸ್ಥಾನದಿಂದ ಇಂಗ್ಲಂಡಿಗೆ ಮೊಟ್ಟ ಮೊದಲು ಹತ್ತೀ ಬಟ್ಟೆಗಳು 1631 ರಲ್ಲಿ ರವಾನೆ ಮಾಡಲ್ಪಟ್ಟವು. ಕೆಲವು ವರ್ಷಗಳಲ್ಲಿಯೇ ಇಂಗ್ಲಿಷ್ ವರ್ತಕ ಪ್ರಪಂಚವು ಹಿಂದೂಸ್ಥಾನದ ಬಟ್ಟೆಗಳು ಬರುವುದನ್ನು ನೋಡಿ, ಬೊಬ್ಬೆ ಹೊಡೆಯಲಾರಂಬಿಸಿತು. ಇಂಗ್ಲಂಡು ದೇಶವು ಸ್ವತಂತ್ರ ರಾಷ್ಟ್ರವಾದುದರಿಂದ; ಈ ವ್ಯಾಪಾರವನ್ನು ತಡೆಗಟ್ಟಲು ಯಾವ ಆರ್ಡಿನೆನ್ಸ್‌ಗಳನ್ನೂ ಜಾರಿಯಲ್ಲಿ ತರಲಿಲ್ಲ. ಆದರೆ ತಮ್ಮ ದೇಶದ ಕೈಗಾರಿಕೆಗಳಿಗೆ-ಪಾರ್ಲಿಮೆಂಟು ವಿಶೇಷ ಗಮನಕೊಟ್ಟು ಸಹಾಯ ಮಾಡಿತು.

ರ್ಷ 1666 ನೇ ವರ್ಷದಲ್ಲಿ-ಇಂಗ್ಲಂಡಿನಲ್ಲಿ ಸತ್ತ ಹೆಣ
ಗಳ ಮೇಲೆ-ಇಂಗ್ಲಂಡಿನಲ್ಲಿಯೇ ತಯಾರಾದ ಉಣ್ಣೆಯ
ಬಟ್ಟೆಯನ್ನು ಹೊಚ್ಚಿ; ಹೆಣವನ್ನು ಹೂಳಬೇಕೆಂದೂ ತಪ್ಪಿ
ದಲ್ಲಿ 5 ಪೌಂಡುಗಳ (75 ರೂಪಾಯಿ) ಗಳ ದಂಡವು
ಕೊಡಬೇಕೆಂದೂ ಒಂದು ಕಾನೂನು ಜಾರಿಗೆ ಬಂತು. 1700
ನೆಯ ಇಸವಿಯಲ್ಲಿ ಮತ್ತೊಂದು ಕಾನೂನು ಪಾರ್ಲಿಮೆಂಟ
ನಲ್ಲಿ-ಮಂಜೂರಾಯಿತು. ಹಿಂದೂಸ್ಥಾನದ ರೇಷ್ಮೆಯನ್ನಾ
ಗಲಿ, ಬಣ್ಣದ ಬಟ್ಟೆಗಳನ್ನಾಗಲಿ, ಇಂಗ್ಲಂಡಿನಲ್ಲಿ ಗೃಹಾ
ಲಂಕಾರಾರ್ಥವಾಗಿಯಾದರೂ ಉಪಯೋಗಿಸಿದರೆ, 300
ಪೌಂಡುಗಳ (3,000 ರೂಗಳು) ದಂಡ ವಿಧಾನವಾಯಿತು.

ಇಂಗ್ಲಂಡಿನಲ್ಲಿ ಈ ವಿಧವಾದ ತೊಂದರೆಗಳನ್ನು ತಂದೊ
ಡ್ಡುವುದರಿಂದಲೂ; ಹಿಂದೂಸ್ಥಾನದಲ್ಲಿ ಈ ಕೈಗಾರಿಕೆಯ
ಮೇಲೆ ಅನ್ಯಾಯವಾದ ಮತ್ತು ಘಾತಕವಾದ ಪ್ರಹಾರಗ
ಳನ್ನೂ ಕಲ್ಪಿಸುವುದರಿಂದಲೂ; ಒಂದಾನೊಂದು ಕಾಲದಲ್ಲಿ
ಅತ್ಯುನ್ನತ ದೆಸೆಯಲ್ಲಿದ್ದ ಈ ವ್ಯಾಪಾರವನ್ನು ನಾಶಮಾಡಿ
ಬಿಟ್ಟರು. ನಮ್ಮನ್ನು ಗುಲಾಮಗಿರಿಗೆ ತಂದು ಇಳಿಸಿಬಿಟ್ಟರು.

ನಮ್ಮ ಖಾದೀ ವ್ಯಾಪಾರವನ್ನು ಕಳದುಕೊಂಡದ್ದರಿಂ
ದಲೇ ನಾವು ನಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡೆವು
ಪುನಃ ನಾವು ಆ ಹಳ್ಳಿಯ ಕೈಗಾರಿಕೆಯನ್ನು ಉದ್ಧಾರಮಾ
ಡುವುದರಿಂದಲೇ ನಮ್ಮ ಪೂರ್ಣ ಸ್ವಾತಂತ್ರ್ಯವನ್ನು ಸಂಪಾ
ದಿಸಬಹುದು.

I ದೇಶದಲ್ಲೆಲ್ಲಾ ಖಾದಿಯ ಉತ್ಪತ್ತಿಯು ಹೇರಳವಾಗಿ
ಬೆಳೆಯುವಂತೆ ಜೋರಿನಿಂದ ಕೆಲಸಮಾಡಬೇಕು.

II ಖಾದಿಯ ವಿಚಾರಗಳೆಲ್ಲಾ ಜನಸಾಮಾನ್ಯದಲ್ಲಿ ತಿಳಿಯುವಂತೆ ಮಾಡಿ, ಪರದೇಶೀ ವಸ್ತ್ರಗಳನ್ನೆಲ್ಲಾ ಪರಿತ್ಯಜಿಸುವಂತೆ ಜನರನ್ನು ಪ್ರೇರೇಪಿಸಬೇಕು.

III ಈ ಸಮಯದಲ್ಲಿ, ಈ ಕಷ್ಟಕಾಲದಲ್ಲಿ, ನಮ್ಮ ಕೆಲಸಗಳನ್ನೆಲ್ಲಾ ನಾವೇ ಮಾಡಿಕೊಳ್ಳುವಂತೆ; ನಮಗೆ ಬೇಕಾದ ಸಾಮಾನುಗಳನ್ನೆಲ್ಲಾ ನಾವೇ ಉತ್ಪತ್ತಿ ಮಾಡಿಕೊಳ್ಳಬೇಕೆಂದು ಜನರಿಗೆ ವಿವರಿಸಿ ಹೇಳಬೇಕು.

ಪರದೇಶೀ ಬಟ್ಟೆಗಳನ್ನೆಲ್ಲಾ ಅಂಗಡಿಗಳಿಂದ ತೆಗೆದುಹಾಕಿಬಿಟ್ಟರೂ ತಕ್ಷಣದಲ್ಲಿಯೇ-ನಮಗೆ ಎಷ್ಟು ಬೇಕೋ ಅಷ್ಟು ಉಡಿಗೆ ತೊಡಿಗೆಗಳನ್ನು ಖಾದಿಯಿಂದಲೇ ಸರಪಂಾಜು ಮಾಡುವುದು ಸಾಧ್ಯವಾಗುವುದಿಲ್ಲ. ಖಾದಿಯ ಉತ್ಪತ್ತಿಗೆ ಬಹಳ ಏರ್ಪಾಡು ಮಾಡಬೇಕಾಗುತ್ತದೆ ಈ ಖಾದಿಯ ಬೆಳೆಬರುವುದಕ್ಕೆ ಸಾವಕಾಶವಾಗುತ್ತದೆ. ಆದುವರೆಗೂ ನಾವು ಹೊಸ ಬಟ್ಟೆಗಳಿಗೆ ಆಶೆಪಡಬಾರದು. ಹಳೆಯ ಬಟೆಗಳನ್ನೇ ಉಪಯೋಗಿಸುತ್ತಾ ಇರಬೇಕು. ನಾವೇ ತಯಾರುಮಾಡಿದ ಖಾದಿಯು ಬರುವವರೆಗೂ ನಮ್ಮಲ್ಲಿರುವ ಹಳೇ ಬಟ್ಟೆಗಳಿಗೆ ತ್ಯಾಪೆ ಹಾಕಿ ಉಪಯೋಗಿಸಬೇಕು. ಈ ವಿಷಯದಲ್ಲಿ ಅಮೇರಿಕದವರು ಸ್ವಾತಂತ್ರ್ಯವನ್ನು ಸಂಪಾದಿಸುವುದಕ್ಕ ಹೋರಾಡುತ್ತಿದ್ದಾಗ ಅವರ ಮನೋಭಾವವು ಹೇಗಿತ್ತೆಂಬುದನ್ನು ನೋಡಿದರೆ-ಅದು ಈಗ ನಮಗೆ ಮೇಲುಪಂಗ್ತಿಯಂತಿದೆ. 1766 ರಲ್ಲಿ-ಕಾಮನ್ಸ್ ಸಭೆಯಿಂದ ನೇಮಿಸಲ್ಪಟ್ಟ ಒಂದು ಸಮಿತಿಯವರಿಗೂ ಬೆಂಜಿಮರ್ನರವರೆಗೂ ಈ ಕೆಳಗೆ ಕಂಡ ಪ್ರಶ್ನೋತ್ತರಗಳು ನಡೆದುವು.

ಪ್ರ :—ಅಮೇರಿಕದವರ ಹೆಮ್ಮೆಯು ಯಾವುದರಲ್ಲಿತ್ತು?

ಉ:—ಗ್ರೇಟು ಬ್ರಿಟನ್ನಿನ ಪದಾರ್ಥಗಳಲ್ಲಿಯೂ, ಅಲ್ಲಿನ ಸೊಗಸುಗಾರತನದ, ವೇಷಭೂಷಣಗಳಲ್ಲಿಯೂ, ಮುಳುಗಿ ತೇಲಾಡುವುದರಲ್ಲಿತ್ತು.

ಪ್ರ :—ಈಗ ಅವರು ಯಾವುದಕ್ಕೆ ಹೆಮ್ಮೆ ಪಡುತ್ತಾರೆ?

ಉ :—ಅವರು ತಮ್ಮ ಬಟ್ಟೆಗಳನ್ನು ತಾವೇ ತಯಾರು ಮಾಡಿ ಕೊಳ್ಳುವವರೆಗೂ-ಹಳೆಯ ಬಟ್ಟೆಗಳನ್ನೇ-ಧರಿಸು ವುದರಲ್ಲಿ ಹೆಮ್ಮೆ ಪಡುತ್ತಾರೆ!

## IV ಮಿಲ್ಲುಗಳೋ? ಖಾದಿಯೋ

ಪರದೇಶೀ ವಸ್ತ್ರಗಳನ್ನೇ ಏಕೆ ಬಹಿಷ್ಕರಿಸುತ್ತೀವೆ?

ಅದು ಹಿಂದೂಸ್ಥಾನದ ಬಡಬೇಸಾಯುಗಾರರನ್ನು ನಾಶ ಮಾಡಿಬಿಟ್ಟಿದೆಯೆಂದು.

ಅದು ನಾಶ ಮಾಡಿದ್ದು ಹೇಗೆ?

ಪರದೇಶೀ ವಸ್ತ್ರವು-ಅವರ ಕೈ ಕಸಬನ್ನು ಹಾಳುಮಾಡಿ ಬಿಟ್ಟಿತು. ಆದರಿಂದ ಈ ದೇಶದ ಹಳ್ಳಿಗಾಡಿನ ರೈತರು ವರ್ಷಕ್ಕೆ 4–6 ತಿಂಗಳು ಕೆಲಸವಿಲ್ಲದೇ ಕೂಡಬೇಕಾಯಿತು.

ಪರದೇಶೀ ವಸ್ತ್ರ ಬಹಿಷ್ಕಾರವು-ಅವರ ಕೈ ಕಸಬನ್ನು ಪುನಃ ಅವರಿಗೆ ಸಂಪಾದಿಸಿ ಕೊಡುತ್ತದೋ?—

ಹೌದು! ಖಾದಿಯ ಮೇಲೆಯೇ, ನಮ್ಮ ಸರ್ವ ಶಕ್ತಿ ಯನ್ನೂ ಉಪಯೋಗಿಸಿದರೆ; ಅವರಿಗೆ ಕಸಬು ಶಿಕ್ಕುತ್ತೆ.

ನಮ್ಮ ದೇಶದ ಮಿಲ್ಲು ಬಟ್ಟೆಗಳ ಮೇಲೆಯೇ-ನಾವು ಪ್ರಯತ್ನ ಮಾಡಿದರೆ, ಒಳ್ಳೆಯದಲ್ಲವೆ? ಮಿಲ್ಲು ಬಟ್ಟೆಗಳನ್ನು ಜಾಗ್ರತೆಯಾಗಿ ತಯಾರುಮಾಡಬಹುದಲ್ಲವೇ?

ಎಂಥಾ ತಪ್ಪು ಭಾವನೆ! ಹಿಂದೂಸ್ಥಾನಕ್ಕೆಲ್ಲಾ ಬೇಕಾಗು ವಷ್ಟು ಬಟ್ಟೆಯನ್ನು ತಯಾರುಮಾಡಲು ಎಷ್ಟು ಮಿಲ್ಲುಗಳು ಬೇಕೋ ಅಷ್ಟನ್ನು ಸ್ಥಾಪಿಸಲು ಬಹಳ ಸಾವಕಾಶವಾಗು ತ್ತದೆ ಮತ್ತು ಪರದೇಶೀ ಯಂತ್ರ ಸಾಮಗ್ರಿಗಳಿಗೆ-ಹೇರಳ ವಾಗಿ ಹಣ ಸುರಿಯಬೇಕಾಗುತ್ತದೆ. ಒಂದು ಪಕ್ಷ ಹಿಂದೂ ಸ್ಥಾನಕ್ಕೆ-ಸಾಕಾಗುವಷ್ಟು ಬಟ್ಟೇ ಮಿಲ್ಲುಗಳನ್ನು ಸ್ಥಾಪಿಸಿದಾ ಗ್ಯೂ-ಹಳ್ಳಿಗಾಡುಗಳಲ್ಲಿರುವ ಕೋಟಿ, ಕೋಟಿ ಬಡಜನರು ಅರಹೊಟ್ಟೆಗೂ ಗಂಜಿಗಿಲ್ಲದೆ, ಈಗ ಇರುವಂತೆಯೇ, ಸಂಕಟ ಪಡುತ್ತಿರಬೇಕಾಗುತ್ತದೆ. ಅವರ ಸ್ಥಿತಿಯು ಸ್ವಲ್ಪವೂ ಬದ ಲಾಯಿಸುವುದಿಲ್ಲ!

ಹಾಗಾದರೆ ಖಾದಿಯೇ ಆಗಬೇಕೋ? ಹೌದು! ಖಾದಯೇ ಆಗಬೇಕು. ಖಾದಿಯೇ ನಮ್ಮ ದೇಶದ ಅಸಂಖ್ಯ ಬಡಜನರನ್ನು ಕಾಪಾಡುತ್ತದೆ. ಉದ್ಯೋಗವಿಲ್ಲದೇ ಕಷ್ಟ ಪಡುತ್ತಿರುವವರಿಗೆ ಖಾದಿಯೊಂದೇ-ಮನೆಯ ಕೈ ಕಸಬು.

ಖಾದಿಯೇ-ಸಂಪತ್ತು-ಆರೋಗ್ಯ-ಅದೇ ಹಿಂದೂಸ್ಥಾನದ ಸುಖ ಸಂತೋಷ.

## V ಸ್ವಾತಂತ್ರ್ಯದ ಹಾದಿ.

ಪರರು ನಮ್ಮನ್ನು ಸೂರೆಮಾಡುವುದನ್ನು ನಿಲ್ಲಿಸುವುದಕ್ಕೆ ಒಂದು ನಿಶ್ಚಯವಾದ ಉಪಾಯವೇಂದರೆ-ನಮ್ಮ ಉಪ

ಯೋಗ ಸಾಮಗ್ರಿಗಳನ್ನೆಲ್ಲಾ ನಮ್ಮ ಮನೆಯಲ್ಲಿ ನಾವೇ ತಯಾರುಮಾಡಿಕೊಳ್ಳುವುದು.

ನಾವು ಬದುಕಬೇಕಾದರೆ, ಹೊಟ್ಟೆಗೆ ಅನ್ನ, ಮೈಗೆ ಬಟ್ಟೆ, ಇವೆರಡು ಅತ್ಯವಶ್ಯಕವಾದವು. ಇವೆರಡನ್ನೂ ತನ್ನ ಮನೆಯಲ್ಲಿಯೇ ತಯಾರುಮಾಡಿಕೊಳ್ಳುವುದಕ್ಕೆ ಹಿಂದೂಸ್ಥಾನಕ್ಕೆ ಶಕ್ತಿ ಇದೆ. ಆದ್ದರಿಂದ ಪರರ ಮೋಸದ ಬಲೆಯ ಒಳಗೆ ಹಿಂದೂಸ್ಥಾನವು ಬದುಕಿ ಬಾಳಬೇಕಾದ್ದಿಲ್ಲ. ಒಂದು ಬಾರಿ-ಒಂದೇ ಬಾರಿ-"ನಾವು ಕೈಲಾಗದವರು, ನಮ್ಮ ಹೊಟ್ಟೆ ಬಟ್ಟೆಗಳಿಗೆ ಬೇಕಾದ್ದನ್ನು ನಾವೇ ಉಂಟುಮಾಡಿಕೊಳ್ಳಲಾರದವರು" ಎಂಬ ಭ್ರಾಂತಿಯನ್ನು ಕಿತ್ತು ಹಾಕಿಬಿಟ್ಟರೆ-ತಕ್ಷಣದಲ್ಲಿಯೇ ನಾವು ಆತ್ಮಾವಲಂಬಿಗಳಾಗುತ್ತೇವೆ; ನಮ್ಮ ಜನಾಂಗವು ಸ್ವತಂತ್ರ ಜನಾಂಗವಾಗುತ್ತದೆ.

## VI ಮಾಯಾಜಾಲ

ಮಹಾತ್ಮಾಜಿಯವರ ದಸ್ತಗಿರಿಯಾಗುವುದಕ್ಕೆ ಹದಿನೈದ ದಿನ ಮುಂಚೆ-ಅವರು ನನಗೆ (ಮೀರಾಬಾಯಿ) ಒಂದು ಕಾಗದದಲ್ಲಿ ಹೀಗೆ ಬರದಿರುತ್ತಾರೆ:—

"ನಾನು ಊರಿಂದ ಊರಿಗೆ ಓಡಾಡುತ್ತಿದ್ದೇನೆ ನೂಲತೆಗೆಯುವ ವಿಚಾರದಲ್ಲಿಯೇ ಹೆಚ್ಚು ಮುತುವರ್ಜಿ ಮಾಡುತ್ತಿದ್ದೇನೆ. ಎಲ್ಲರೂ ಸರ್ವಸಾಧಾರಣವಾಗಿ ನೂಲುವಂತೆ ಮಾಡುವುದಕ್ಕೆ ತಕಲಿ ಯೊಂದು ಮುಖ್ಯ ಸಾಧನ. ಖಾದಿಯನ್ನು ತಯಾರುಮಾಡಲು ನಿಮ್ಮಿಂದ ಏನು ಸಾಧ್ಯವೋ ಅದನ್ನೆಲ್ಲಾ ಮಾಡಿರಿ."

ಈ ಮಾತುಗಳ ನೆನಪು ಹಗಲೂ, ರಾತ್ರಿಯೂ ನನ್ನನ್ನು ಬಿಟ್ಟಿಲ್ಲ. ಇಲ್ಲಿ ಗುಜರಾತಿನಲ್ಲಿ ಖಾದಿಯ ಉತ್ಪತ್ತಿಯನ್ನು ಭದ್ರವಾದ ಅಸ್ತಿಭಾರದ ಮೇಲೆ ನೆಲೆಗೊಳಿಸಲು ನಮ್ಮಿಂದ ಸಾಧ್ಯವಾದಷ್ಟು ಕೆಲಸಮಾಡುತ್ತಿದ್ದೇವೆ. ಈ ಕೆಲಸದಲ್ಲಿ ನಮ್ಮ ದೇಶದಲ್ಲಿ ಯಾರು ಯಾರು ಮುಂದಾಳುಗಳಾಗಿ ದೇಶ ಸೇವೆ ಮಾಡುತ್ತಿದ್ದಾರೆಯೋ, ಅವರ ಪೈಕಿ ಅನೇಕರಲ್ಲಿ ಪರಸ್ಪರ ಮನೋಭಿಪ್ರಾಯವನ್ನು ಅರ್ಥಮಾಡಿಕೊಳ್ಳುವುದರಲ್ಲಿಯೂ, ಆಸಕ್ತಿಯಲ್ಲಿಯೂ, ಸ್ವಲ್ಪ ಕೊರತೆಯಾಗಿದೆಯೆಂದು ನನಗೆ ಕಾಣುತ್ತದೆ. ಬಹಿಷ್ಕಾರ ಚಳವಳಿ. ಅಥವಾ ಇದೋ ಅದೋ ಯಾವುದೋ ಒಂದು! ಅಂತೂ, ಖಾದಿಯ ಉತ್ಪತ್ತಿಯನ್ನು ಉಳಿದ-ಅನೇಕ ಚಳವಳಿಗಳಲ್ಲಿ-ವಿಶೇಷ ಗಮನವು ಹೋಗುತ್ತಿರುವುದನ್ನು ನೋಡಿ ನನ್ನ ಮನಸ್ಸಿಗೆ ಅತ್ಯಂತ ವ್ಯಥೆಯಾಗುತ್ತಿದೆ. ಗಾಂಧಿಯವರ ಶಬ್ದಗಳು ಬಲ-ಬಲವಾಗಿ-ನನ್ನ ಹೃದಯದಲ್ಲಿ ಪ್ರತಿ ಧ್ವನಿ ಮಾಡುತ್ತಿವೆ.

“ ನೂಲು. ನೂಲು. ನೂಲು. ಖಾದಿಯನ್ನು ಉತ್ಪತ್ತಿ ಮಾಡು ಇಲ್ಲದಿದ್ದರೆ ಮಾಯಾಜಾಲದಲ್ಲಿ ಬೀಳುತ್ತೀ

ಈಗ ವಾಸ್ತವವಾಗಿಯೂ ಜನತೆಯು ಬಲು ಮುಂದುವರಿದಿದೆ. ಎಲ್ಲಾ ದಿಕ್ಕುಗಳಿಂದಲೂ ತಕಲಿಗಳನ್ನೂ ಚರಕಗಳನ್ನೂ ಕೇಳುತ್ತಿದ್ದಾರೆ. ಮುಂದಾಳುಗಳು ಮಾಡುತ್ತಿರುವ ಖಾದೀ ಉತ್ಪತ್ತಿಯ-ಕಾರ್ಯಗಳಲ್ಲಿ ವಿಶೇಷ ಸಹಾಯ ಮಾಡುತ್ತಿದ್ದಾರೆ. ಈಗ ನಮಗೆ ಮಾರ್ಗವು-ಎಷ್ಟೊಂದು ಸುಲಭವಾಗಿದೆ!

ನಾವು ಉಳಿದ ಎಲ್ಲಾ ಚರ್ಚೆಗಳನ್ನೂ ತಕರಾರುಗಳನ್ನೂ ಮರೆತುಬಿಟ್ಟು ಎಡಬಲಗಳಿಗೆ ತಿರುಗಿ ನೋಡದೆ ಶುದ್ಧ ಖಾದೀ ಉತ್ಪತ್ತಿಯ ರಾಜ ಮಾರ್ಗದಲ್ಲಿಯೇ ನೇರವಾಗಿ ಮುಂದುವರಿಯೋಣ!

## VII ಹಳ್ಳಿಯ ಸಮಸ್ಯೆ

ಆದರೆ ನಾನು ಇದನ್ನು ಬರೆಯುತ್ತಾ ಇರುವಾಗಲೂ, "ನಿನ್ನ ಕಾರ್ಯಕ್ರಮದಲ್ಲಿ ದೇಶೀ ಮಿಲ್ಲುಗಳ ಬಟ್ಟೆಗಳನ್ನು ಯಾಕೆ ಸೇರಿಸುವುದಿಲ್ಲ?" ಎಂಬ ಪ್ರಶ್ನೆಯು ಬಲವಾಗಿ ಕೇಳಿಬರುತ್ತಿದೆ.

ನಮ್ಮ ಕಾರ್ಯಕ್ರಮದಿಂದ ದೇಶೀ ಮಿಲ್ಲುಗಳನ್ನು ಬಹಿಷ್ಕರಿಸಿಲ್ಲ. ಅವುಗಳು ಸೇರಿವೆ. ಸಂದೇಹವಿಲ್ಲ. ಅವುಗಳು ತಮ್ಮ ನ್ಯಾಯವಾದ ಸಹಾಯವನ್ನು ಮಾಡಿಯೇ ಮಾಡುತ್ತವೆ. ಆದರೆ ನಮ್ಮ ಲಕ್ಷ್ಯವು ಖಾದಿಯಲ್ಲಿಯೇ ಇದೆ.

ನಾವು ಪರದೇಶೀ ವಸ್ತ್ರಗಳನ್ನು ಬಹಿಷ್ಕರಿಸುವ ಮುಖ್ಯೋದ್ದೇಶವು-ಶೇಕಡಾ 90 ರಂತೆ ಇರುವ ನಮ್ಮ ಹಳ್ಳಿಗಾಡಿನ ಜನರಿಗೆ ಹಳ್ಳಿಯ ಜೀವನವನ್ನು ಕಲ್ಪಿಸಿಕೊಡುವುದೇ ಅಲ್ಲವೋ? ಭದ್ರವಾದ ಅಸ್ತಿವಾರದ ಮೇಲೆ ಭಾರತೀಯರ ಜೀವನವನ್ನು ಕಟ್ಟುವುದೇ ಅಲ್ಲವೋ? ದಾರಿದ್ರ್ಯ ದುಃಖದಲ್ಲಿ ಮುಳುಗಿರುವ ಈ ದೇಶದಲ್ಲಿ ಹೊಟ್ಟೆಗಿಲ್ಲದೆ ನರಳುತ್ತಿರುವ ಕೋಟ್ಯಾಂತರ ಜನರಿಗೆ ಅವರ ಮನೆ ಕಸಬನ್ನು ಮಾಡಿಸಿ ಕೊಡುವುದೇ ಅಲ್ಲವೋ? ಅದಿಲ್ಲದಿದ್ದರೆ ಅವರು ಕ್ಷೀಣಿಸಿ, ಸಾಯಬೇಕಾಗುವುದಲ್ಲವೋ? ಮಿಲ್ಲುಗಳಿಂದ ಈ ಕಾರ್ಯವು

ಸಾಧ್ಯವಾಗುವುದಿಲ್ಲ. ಬೇಸಾಯಗಾರರು ಅವರ ಹೊಲಗದ್ದೆಗಳನ್ನು ಬಿಟ್ಟು ಬರಕೂಡದು. ಇದೂ ಅಲ್ಲದೆ ಬೇಸಾಯದ ವಿಚಾರವನ್ನು ಒಂದು ಕಡೆಗೆ ತಳ್ಳಿಬಿಟ್ಟರೂ-ಹಿಂದೂಸ್ಥಾನಕ್ಕೆ ಸಾಕಾಗುವಷ್ಟು ಬಟ್ಟೆಬರೆಗಳನ್ನು ತಯಾರುಮಾಡಲು ಬೇಕಾಗುವಷ್ಟು ಮಿಲ್ಲುಗಳನ್ನು ಸ್ಥಾಪಿಸುವುದೂ ಸಾಧ್ಯವೆಂದೂ ಭಾವಿಸಿಕೊಂಡರೂ-ಆದರಿಂದ ಅನುದ್ಯೋಗ ಸಮಸ್ಯೆಯು ಬಗೆ ಹರಿಯುವುದಿಲ್ಲ. ಕೋಟ್ಯಾಂತರ ಬಡಬೇಸಾಯಗಾರರು ಮಾಡುವುದಕ್ಕೆ ಕೆಲಸವಿಲ್ಲದೆ, ತಿನ್ನುವುದಕ್ಕೆ ಅನ್ನವಿಲ್ಲದೆ, ಕಷ್ಟದಲ್ಲಿಯೇ ಇರಬೇಕಾಗುವುದು.

ಅಲ್ಲ-ಪರದೇಶೀ ವಸ್ತ್ರ ಬಹಿಷ್ಕಾರದ ಚಳವಳಿಯು, ನಮ್ಮ ದೇಶದಲ್ಲಿ ಹರಿದು ಹಾಳಾಗಿಹೋಗಿರುವ ಬಟ್ಟೆಯ ಕೈಗಾರಿಕೆಯನ್ನು ಹಿಂದೂಸ್ಥಾನದಲ್ಲೆಲ್ಲಾ ಮತ್ತೊಮ್ಮೆ ಪುನರುದ್ಧಾರ ಮಾಡಿ ಹಿಂದೂಸ್ಥಾನವನ್ನು ಸುಖವಾಗಿಡುವುದಕ್ಕಾಗಿಯೇ ನಡೆಯುತ್ತಿದೆಯೆನ್ನುತ್ತೀರಾ?

ನಾವು ಇನ್ನೂ ಸ್ವಲ್ಪ ಮುಂದೆ ನೋಡೋಣ. ಈಗ ನಡೆಯುತ್ತಿರುವ ಸ್ವರಾಜ್ಯದ ಚಳವಳಿಯ ಉದ್ದೇಶ್ಯವೆಲ್ಲವೂ-ನಮ್ಮ ದೇಶದ ಜನಸಾಮಾನ್ಯದ ಲಾಭಕ್ಕಾಗಿಯೇ ಎಂಬುದನ್ನು ನಾವು ಗಮನವಿಟ್ಟು ನೋಡಬೇಕು. ಉಪ್ಪಿನ ಸತ್ಯಾಗ್ರಹ, ಮಧ್ಯಪಾನ ನಿರೋಧ, ಕಂದಾಯನಿರಾಕರಣ, ಇವುಗಳಲ್ಲೆಲ್ಲಾ ಕಷ್ಟಪಡುತ್ತಿರುವ ಜನಸಾಮಾನ್ಯವನ್ನುದ್ಧಾರಮಾಡಬೇಕೆಂಬುದೇ ನಮ್ಮ ಪರಮಧ್ಯೇಯವಾಗಿದೆ. ಆದ್ದರಿಂದ ನಮ್ಮ ಬಹಿಷ್ಕಾರ ಚಳವಳಿಯನ್ನೆಲ್ಲಾ ಖಾದಿಯ ಉದ್ಧಾರಕ್ಕೋಸ್ಕರವೇ ಸಾರ್ಥಕ ಪಡಿಸೋಣ. ಹಿಂದೂಸ್ಥಾನದ ಬಡಜನರಿಗೆ ಸಹಾಯವಾಗುವ ಕೆಲಸವು ಖಾದಿಯೇ.

# VIII ಅಪಾಯು ! ನಿಲ್ಲು ನಿಲ್ಲು !!

ಖಾದೀಪ್ರೇಮಿಗಳೇ! ಬಹಿಷ್ಕಾರ ಚಳವಳಿಯ ಪ್ರೋತ್ಸಾಹಕರೇ! ನಿಮ್ಮನ್ನು ಎಲ್ಲ ಕಡೆಯಿಂದಲೂ ಸುತ್ತುವರಿಯುತ್ತಿರುವ ಭಯಂಕರವಾದ ಅಪಾಯದಲ್ಲಿ ಎಚ್ಚರರಾಗಿರಿ!

ನೀವೆಲ್ಲರೂ ಖಾದಿಯನ್ನು ಬಯಸುತ್ತೀರಿ. ನೀವು ಖಾದಿಯನ್ನು ಕೊಳ್ಳುವುದಕ್ಕಾಗಿ ಪೇಟೆಗೆ ನುಗ್ಗುತ್ತಿದ್ದೀರಿ. ವ್ಯಾಪಾರಸ್ತನು " ಶುದ್ಧ ಖಾದೀ, ಸೊಗಸಾದ ಖಾದೀ " ಎಂದು ಹೇಳಿ ನಿಮಗೆ ಬಟ್ಟೆಗಳನ್ನು ಕೊಡುತ್ತಾನೆ. ಆದರೆ ಇದು ಅಂಥಾ ಪದಾರ್ಥವಲ್ಲ. ಅದು ಮಿಲ್ಲಿನಿಂದ ನೂತ, ಮಿಲ್ಲಿನಿಂದ ನೇದ, ಖಾದಿಯಂತೆ ಕಾಣುವ ಬಟ್ಟೆ. ಅಥವಾ ಮಿಲ್‌ದಾರದಿಂದ ಕೈಮಗ್ಗದಲ್ಲಿ ನೇದ ಖಾದಿಯಂತಹ ಬಟ್ಟೆ! ಇವೆಲ್ಲವೂ ಬಹು ಮಟ್ಟಿಗೆ ಪರದೇಶೀ ಮಾಲುಗಳೇ. ಖಾದಿಯ ಗಿರಾಕಿಯು ಹೆಚ್ಚಾಗುತ್ತಿದೆ. ಈ ಕೃತ್ರಿಮ ಪದಾರ್ಥಗಳು ಬಹಳ ಹೆಚ್ಚಾಗಿ ಹೋಗಿವೆ. ನೋಡಿ! ಈ ಬಟ್ಟೆಯನ್ನು ಕೊಳ್ಳುವುದರಿಂದ ನೀವು ಏನುಮಾಡುತ್ತಿದ್ದೀರಿ. ಪರದೇಶದ ಮೋಸಗಾರನಿಗೆ ಸಹಾಯಮಾಡುತ್ತಾ; ಹಿಂದೂಸ್ಥಾನದಲ್ಲಿರುವ ಬಡವನಾದ ನೂಲುವವನಿಗೆ ನಷ್ಟವನ್ನುಂಟುಮಾಡುತ್ತಿದ್ದೀರಿ. ಇದರಿಂದ ಇನ್ನೂ ಅತಿಶಯವಾದ ಅನಾಹುತ ಒಂದು ನಡೆಯುತ್ತಿದೆ. ಮೋಸಗಾರರಾದ ವರ್ತಕರು, ದೇಶದಲ್ಲಿರುವ ನೂಲುವವರನ್ನೂ, ನೇಯುವವರನ್ನೂ, ತಮ್ಮ ಹತ್ತಿರಕ್ಕೆ ಟಗೆ ತೆಗೆದುಕೊಳ್ಳುತ್ತಿದ್ದಾರೆ. ಹೆಚ್ಚು ಹೆಚ್ಚು ಕೂಲಿಯ ಆಶೆಯನ್ನು ತೋರಿಸಿ, ಮೋಸಕರವಾದ ಖೋಟಾ ಖಾದಿಯನ್ನು ತಯಾರುಮಾಡಿಸಿ, ಮಾರಾಟಮಾಡುತ್ತಿದ್ದಾರೆ. ನಿಮ್ಮ

ಉತ್ಸಾಹದಲ್ಲಿ-ನಿಮ್ಮ ಖಾದಿಯ ಹುಚ್ಚಿನಲ್ಲಿ-ಕೇಳಿದಷ್ಟು ಹಣ ಕೊಟ್ಟು, ಈ ಖೋಟಾ ಖಾದಿಯನ್ನು ಕೊಂಡುಕೊಳ್ಳಲು ತಯಾರಾಗಿದ್ದೀರಿ. ಇದರಿಂದ ಕೃತ್ರಿಮ ಖಾದಿಯು ಹಬ್ಬುವುದು ಮಾತ್ರವೇ ಅಲ್ಲ; ಖಾದಿಯ ವ್ಯಾಪಾರಕ್ಕೇ ಒಂದು ಗೊತ್ತುಗುರಿಯಿಲ್ಲದೆ ಹೋಗಿ-ಶುದ್ಧ ಖಾದಿಯ ವುತ್ಪತ್ತಿಗೆ ಬಲವಾದ ಅಡಚಣೆಯನ್ನುಂಟುಮಾಡಿದಂತಾಗುತ್ತದೆ.

## IX ಹಾಗಾದರೆ ಏನುಮಾಡಬೇಕು

ನಿಮಗೆ ಖಾದಿಯು ಬೇಕಾದರೆ, ಅಖಿಲಭಾರತ ನೂಲುವ ಸಂಘದವರಿಂದ ಸ್ಥಾಪಿತವಾದ ಖಾದೀ ಭಂಡಾರದಲ್ಲಿಯೇ ಖಾದಿಯನ್ನು ಕೊಂಡುಕೊಳ್ಳಬೇಕು. ಈಗ ಖಾದಿಯ ಗಿರಾಕಿಯು ಬಲವಾಗಿರುವುದರಿಂದ ಅಲ್ಲಿ ಖಾದಿಯು ದೊರೆಯದಿದ್ದರೆ ಅತುರಪಟ್ಟು ಅಂಗಡೀ ಬೀದಿಯಲ್ಲಿ ಹೋಗಿ ಖೋಟಾಖಾದಿಯನ್ನು ಕೊಳ್ಳಬಾರದು. ಶುದ್ಧಖಾದಿಯು ದೊರೆಯದಿದ್ದರೆ, ಕೆಲವು ದಿನ ಖಾದಿಯನ್ನೇ ಧರಿಸದಿದ್ದರೂ ಬಾಧಕವಿಲ್ಲ. ಆದರೆ ಮಾತ್ರ, ಖಾದಿಯ ಪ್ರಚಾರಕ್ಕೂ-ಬಹಿಷ್ಕಾರ ಚಳವಳಿಗೂ, ವಿದ್ರೋಹಕಾರಿಯಾದಂಥಾ ಖೋಟಾ ಖಾದಿಯನ್ನು ಮಾತ್ರ ಎಂದೆಂದಿಗೂ ಕೊಳ್ಳಲೇಬಾರದು. ಮಹಾತ್ಮಾ ಗಾಂಧಿಯವರ ವುಪದೇಶವನ್ನು ನೆನಪಿಟ್ಟುಕೊಂಡು-ಪ್ರತಿಯೊಬ್ಬರೂ ಅದರಂತೆ ಅನುಷ್ಠಾನಮಾಡುವುದಾದರೆ,—ಬಹಳ ಕಾಲ ಖಾದಿಯಿಲ್ಲದೇ ಇರಬೇಕಾಗುವುದಿಲ್ಲ. ಗಾಂಧಿಯವರು ಜೈಲಿಗೆ ಹೋಗುವಾಗಲೂ ಕೂಡ ಗಂಡಸರು, ಹೆಂಗಸರು, ಹುಡುಗರು, ಎಲ್ಲರೂ ಚರಕದಿಂದ ನೂಲು ತೆಗೆಯಿರಿ. ಚರಕವನ್ನು ಯಾರು ಸಂಪಾದಿಸಲಾ

ರರೋ ಅವರು ತಕಲಿಯಿಂದಲಾದರೂ ನೂಲು ತೆಗೆಯ ಬೇಕು. ಆದರಿಂದ ಬೇಕಾದಷ್ಟು ನೂಲು ಸರಪರಾಜಾಗ್ತು ತ್ತದೆ. ಎಂದು ಹೇಳಿದ್ದಾರೆ ಈ ಕಠಿನ ಸಮಯದಲಿ ಇದೊಂದೇ ಸಿದ್ಧೌಷಧ.

ಮನೆ ಮನೆಯಲ್ಲಿಯೂ ನೂಲು ತೆಗೆಯಿರಿ. ತೆಗೆದ ನೂಲನ್ನು ಜಾಗರೂಕತೆಯಿಂದ ಶೇಖರಿಸಿರಿ. ಅದನ್ನು ನೇಯಿಸಿ, ಬಟ್ಟೆಗಳನ್ನು ಮಾಡಿಸಿಕೊಳ್ಳಿರಿ. ಇದರಿಂದ ನಿಮಗೆ ಶುದ್ಧ ಖಾದಿಯು ದೊರೆತಂತಾಗುತ್ತದೆ. ಇಷ್ಟೇ-ಅಲ್ಲ. ತಾವೇ ನೂಲು ತೆಗೆದು ಆ ನೂಲಿನಿಂದಲೇ ತಯಾರಾದ ಬಟೆ ಗಳನ್ನು ಧರಿಸುವ ಆನಂದವನ್ನು ಅನುಭವಜ್ಞರು ಮಾತ್ರವೇ ಅರಿಯ ಬಲ್ಲರು! ಅದನ್ನು ಹೇಳಿ ತಿಳಿಸುವುದು ಶಕ್ಯವಲ್ಲ. ಇದನ್ನು ಪರೀಕ್ಷೆ ಮಾಡಿ ನೋಡಿರಿ. ನೀವೇ ತೆಗೆದ ನೂಲಿನಿಂದ ಬಟ್ಟೆ ಯನ್ನು ತಯಾರ್ಮಾಡಿಸಿ ಅದನ್ನು ಧರಿಸಿದರೆ ನಿಮಗಾಗುವ ಆನಂದವು ಎಣೆಯಿಲ್ಲದ್ದು! ಪ್ರತಿ ಮನೆಯಲ್ಲಿಯೂ, ಆ ಸಂಸಾರಕ್ಕೆ ಬೇಕಾದಷ್ಟು ನೂಲು ತಯಾರಾದರೆ ನಾವು ಬಲಿ ಷ್ಠರಾಗುತ್ತೇವೆ. ಬ್ರಿಟನ್ನು ಹಿಂದೂಸ್ಥಾನದಿಂದ ಮಂಜು ಗಡ್ಡೆಯಂತೆ ಕರಗಿ ಮಾಯವಾಗಿ ಹೋಗುತ್ತದೆ. ಆಗ ನಾವು ಪ್ರಪಂಚದ ಮೋಸಗಾರರನ್ನೆಲ್ಲಾ ಮೋಡಿಸುವಷ್ಟು ಸಾಮರ್ಥ್ಯಶಾಲಿಗಳಾಗುತ್ತೇವೆ. ಇದು ಹಗಲು ಕನಸಲ್ಲ, ಇದು ಶಾಶ್ವತವಾದ ಆರ್ಥಿಕ ಸತ್ಯ! (ಈ ಮೊಂಬತ್ತು ಲೇಖ ನಗಳು ಮೀರಾಬಾಯಿಯವರದು)

## X ತಗಡೂರು ಖಾದಿ ಸಂಸ್ಥೆ.

ತಗಡೂರು ಖಾದೀ ಸಂಸ್ಥೆಯು ಮಹಾಜನರ ಆಶ್ರಯ ಪ್ರೋತ್ಸಾಹದಿಂದಲೇ, ನಡೆಯುತ್ತಿದೆ. ಇದು ಆರಂಭವಾಗಿ 4—5 ತಿಂಗಳು ಮಾತ್ರವಾಯಿತು. ಈಗ ಈ ಸಂಸ್ಥೆಯಿಂದ

ತಿಂಗಳೊಂದಕ್ಕೆ 2500, ಗಜ ಬಟ್ಟೆಯು ತಯಾರಾಗಿ ಬರು ತ್ತಿದೆ. ಇದಕ್ಕೆ ಇದುವರೆಗೆ ಬಿದ್ದಿರುವ ಬಂಡವಾಳವು ಒಂದು ಸಾವಿರ ರೂಪಾಯಿಗಳು ಮಾತ್ರ ಇದನ್ನು ಪೋದಿ ವಾಚ ಕರು ಆಶ್ಚರ್ಯಪಡಬಹುದು. ಆದರೆ ಹಿಂದಿರುವ ಮಹತ್ತರ ವಾದ ಕ್ರಿಯಾಶಕ್ತಿಯನ್ನು ಬಲ್ಲವರಿಗೆ ಆಶ್ಚರ್ಯವೇನೂ ಆಗುವುದಿಲ್ಲ. ಆತ್ಯಾನಂದವಾಗುತ್ತದೆ. ಆ ಸಂಸ್ಥೆಯ ಸ್ಥಾಪ ಕರೂ, ಚಾಲಕರೂ, ಸೇವಕರೂ, ಎಲ್ಲಾ ಶ್ರೀಯುತ ತಗ ಡೂರು ರಾಮಚಂದ್ರರಾಯರವರೇ. ಆ ಸಂಸ್ಥೆಗೆ ಐದುಸಾವಿರ ರೂಪಾಯಿಗಳು ಬಂಡವಾಳ ಬೇಕೆಂದು-ಮಹಾಜನರಲ್ಲಿ ಪ್ರಾರ್ಥನೆ ಮಾಡಿದ್ದಾರೆ. ಕೇಳಿದ ಕೂಡಲೇ ಬಡವರ್ರು ಯಥಾಶಕ್ತಿ 500 ರೂಪಾಯಿಗಳನ್ನು ಕೊಟ್ಟರು. ಅವರು ಐಶ್ವರ್ಯವಂತರಲ್ಲಿ ಪ್ರಾರ್ಥನೆ ಮಾಡಲು ಆರಂಭ ಮಾಡಿ ಧಾರೆ. ಐಶ್ವರ್ಯವಂತರಿಗೆ ದಯಬರುವಂತೆ ಮಾಡುವುದು ಸುಲಭವಲ್ಲ. ಅವರ ಪ್ರಾರ್ಥನೆಯೇನಂದರೆ:—

50 ರೂಪಾಯಿಗಳಂತೆ ಕೊಟ್ಟು ನೂರು ಜನರು ಪ್ರೋ ತ್ಸಾಹಕರಾಗಬೇಕೆಂದು! ನಮ್ಮ ದೇಶದ ದೊಡ್ಡ ಮನು ಷ್ಯರುಗಳು—ಈ ವಿಷಯದಲ್ಲಿ ಹಿಂದಿರುಗುವುದಾಗಲೀ, ಆ ತ್ತಿತ್ತ ನೋಡುತ್ತಾ ಕೂಡುವುದಾಗಲೀ, ತರವಲ್ಲ. ನಮ್ಮ ಹಣಗಾರರು-ಈ ಸಂಸ್ಥೆಗೆ ಉದಾರ ಸಹಾಯ ಮಾಡಿ-ಪ್ರಜೆ ಗಳಿಂದಲೇ ಸ್ಥಾಪಿತವಾಗಿ-ಪ್ರಜೆಗಳಿಂದಲೇ ಆಳಲ್ಪಟ್ಟು-ಪ್ರಜಾಹಿತಕರವಾದ ಒಂದು ಕಾರ್ಯವನ್ನು ಮೈಸೂರಿನವರು ಮಾಡಿದರು-ಎಂಬ ಕೀರ್ತಿಯನ್ನು ನಮ್ಮ ದೇಶಕ್ಕೆ ತರುವ ರೆಂದು ನನ್ನ ನಂಬಿಕೆ.

**ಸೀತಾರಾಮ ಶಾಸ್ತ್ರಿ**

# ಅಂತರಂಗ

ಮೊದಲನೆಯ ಭಾಗ

ದೇವುಡು.

ಪ್ರಕಾಶಕರು

ಕೃಷ್ಣ ಕಂಪೆನಿ—ಬೆಂಗಳೂರು

೧೯೩೧] [ಬೆಲೆ ೬ ಆಣೆ

# ಮುನ್ನುಡಿ

---

ಗಂಡಹೆಂಡಿರ ಸಂಬಂಧವನ್ನು ಪವಿತ್ರಪ್ರೇಮವೆಂದು ಕರೆಯುವುದು ವಾಡಿಕೆ. ಹುಡುಕಿ ನೋಡಿ, ದಿಟವಾಡುವುದಾದರೆ ಅದೂ ಒಂದು ಮೋಹವೇ. ಅದರಲ್ಲಿ ಸಂದೇಹವಿಲ್ಲ.

ಈ ಮೋಹವು ಭದ್ರವಾಗಿರುವವರೆಗೂ ಸಂಸಾರದಲ್ಲಿ ಸುಖವುಂಟು. ಆದರೆ, ಎಲ್ಲ ಪ್ರಪಂಚದಂತೆ, ಇದೂ ಕಾಲಕ್ರಮೇಣ ಶಿಥಿಲವಾಗುವುದು. ಬುದ್ಧಿವಂತರು ಇದನ್ನರಿತು ಆಗಾಗ ಅದನ್ನು "ರಿಪೇರಿ" ಮಾಡುತ್ತಿರಬೇಕು. ಇಲ್ಲವಾದರೆ ಗೃಹಚ್ಛಿದ್ರಗಳು ಹುಟ್ಟಿಯೇ ಹುಟ್ಟುವುವು.

ಈ ತತ್ತ್ವವು ದಂಪತಿಗಳ ಮನಸ್ಸಿಗೆ ಹಿಡಿದು, ಸಂಸಾರ ಸೌಖ್ಯದ ಹಾದಿಯ ಕಡೆಗೆ ಅವರ ಮನಸ್ಸು ತಿರುಗಲು ಅನುಕೂಲಿಸಲಿ ಎಂದು ಈ ಕಥೆಯನ್ನು ಬರೆದಿದ್ದೇನೆ.

ಇತಿ

**ದೇವುಡು**

# ಅಂತರಂಗ.



## ಒಂದನೆಯ ಪರಿಚ್ಛೇದ.

ಮಧ್ಯಾಹ್ನ ಮೂರುಘಂಟೆ ಇರಬಹುದು. ಭಟ್ಟರು ಆಗತಾನೇ ಎದ್ದು ಹಾಸಿಗೆಯಮೇಲೆ ಕುಳಿತಿದ್ದರು. ನಿದ್ರೆಮಾಡಿ ಎದ್ದಮುಖ. ಗಂಭೀರವಾಗಿ, ಏನೋ ಯೋಚನೆಯಲ್ಲಿ ಮಗ್ನವಾದಂತೆ ತೋರುತ್ತಿತ್ತು. ಹಾಗೆಯೇ ನಡುವೆ ಹಠಾತ್ತಾಗಿ ನಕ್ಕು "ಆಗಬೇಕಾಗಿದ್ದರೆ ಆಗಿ ಹೋಗಲಿ" ಎಂದುಕೊಂಡರು.

ಅವರೆಂದು ಕೊಂಡಿದ್ದಂತೆ, ಮನಸ್ಸಿನ ಯೋಚನೆ ಮನಸ್ಸಿನಲ್ಲಿಯೇ ಇದ್ದಿದ್ದರೆ ಚೆನ್ನಾಗಿತ್ತು. ಆದರೆ ಹಾಗಾಗದೆ ಬಾಯಲ್ಲಿ ಬಂದು ಬಿಟ್ಟಿತು. ಆ ವೇಳೆಗೆ ಸರಿಯಾಗಿ ಅತ್ತ ಕಡೆ ಬಂದ ಭಟ್ಟರ ಕುಟುಂಬ ಪಾತಮ್ಮನವರು ಅದನ್ನು ಕೇಳಿಬಿಟ್ಟರು. ಅವರು ತಮ್ಮನ್ನು ಕುರಿತು ಏನಾದರೂ ಹೇಳಿದರೇನೋ ಎಂದು ಕೊಂಡು "ಏನೆಂದಿರಿ?" ಎಂದರು.

ಭಟ್ಟರಿಗೆ ತಾವು ಏನೆಂದಹಾಗೂ ನೆನಪಿಲ್ಲ. ತಟ್ಟನೆ ಹೆಂಡತಿ ಕಡೆಗೆ ತಿರುಗಿ "ಆ" ಎಂದರು.

ಪಾತಮ್ಮನವರು ಹೋಗುತ್ತಿದ್ದವರು ಹಾಗೆಯೇ ನಿಂತುಕೊಂಡು "ನೀವೇ ಏನೋ ಎಂದಿರಿ. ಏನು ಎಂದು ಕೇಳಿದರೆ, ಹಿಂತಿರುಗಿಕೊಂಡು ನೀವೇ "ಆ" ಎಂದರೆ, ನಾನು ಏನು ಹೇಳಲಿ?" ಎಂದರು.

ಭಟ್ಟರಿಗೆ ಕಷ್ಟಕ್ಕೆ ಬಂತು: ಸಭೆಯಲ್ಲಿ ಕುಳಿತಾಗ ಬೇಕಾದರೆ ಹತ್ತು ಜನ ವಿದ್ವಾಂಸರಿಗೆ ಬಾಯಿಕೊಟ್ಟು ಅವರ ಬಾಯಿ ಕಟ್ಟಿಸುತ್ತಿದ್ದ ಪುಣ್ಯಾತ್ಮ

ನಿಗೆ, ಪಾತಮ್ಮನವರ ಶಬ್ದ ಕೇಳಿದರೆ ಗಂಟಲು ಒಣಗಿಹೋಗುತ್ತಿತ್ತು. ನಾಲಗೆಯಲ್ಲಿ ದ್ರವವೇ ಬತ್ತಿಹೋಗುತ್ತಿತ್ತು. ಮತ್ತೊಮ್ಮೆ ಗಣಪತಿ ಶಾರದಾಗುರುಭ್ಯೋನಮಃ ಎಂದು ಆರಂಭಿಸಿಯೇ ಹೆಂಡತಿಯ ಕೈಯಲ್ಲಿ ಮಾತನಾಡಬೇಕು. ಇಷ್ಟಾದರೂ, ಅವರು ಮೂವರಲ್ಲಿ ಯಾರೂ ಭಟ್ಟರ ಸಹಾಯಕ್ಕೆ ಒದಗುತ್ತಿರಲಿಲ್ಲ. ಭಟ್ಟರಿಗೆ ತಬ್ಬಿಬ್ಬಾಗಿ ಹೋಗುತ್ತಿತ್ತು. ಒಂದೆರಡು ವೇಳೆಯಾದರೆ ಏನೋ ಕಾರಣವೆನ್ನಬಹುದು. ಕಂಡಾಗಲೆಲ್ಲ ಹೀಗೆಯೇ ಆಗುತ್ತಿತ್ತು. ಅದನ್ನು ಚೆನ್ನಾಗಿ ತಿಳಿದ ಭಟ್ಟರು "ಮದುವೆಯಲ್ಲಿ ಎಲ್ಲೋ ಅವಳೇ ಜೀರಿಗೆ ಬೆಲ್ಲ ಮೊದಲು ಹಾಕಿರಬೇಕು." ಎಂದು ನಿರ್ಧರಿಸಿಬಿಟ್ಟಿದ್ದರು. "ಅವರ ಮರದುಪ್ಪದ ಮಾವಯ್ಯನವರು ಇದ್ದರಲ್ಲ, ಅವರು ಅವಳನ್ನು ಎತ್ತಿದರು. ತಾವು ಕೈಯೆತ್ತುವುದಕ್ಕೆ ಮೊದಲೇ ಅವಳು ತಮ್ಮ ತಲೆಯ ಮೇಲೆ ಜೀರಿಗೆ ಬೆಲ್ಲ ಹಾಕಿಬಿಟ್ಟಿದ್ದಳು" ಎಂದು ಅವರ ನಂಬಿಕೆ. ಆಕೆಯು ಮನೆಗೆ ಬಂದಾಗ ಹೊಸಹುಡುಗಿಯ ಸೊಬಗಿಗೆ ಸೋತ ಭಟ್ಟರ ರಸಿಕಮನಸ್ಸು ಸೋತು ಸೋತು, ಕೊನೆಕೊನೆಗೆ ಅಂಜುವುದಕ್ಕೂ ಆರಂಭಿಸಿತ್ತು, ಎಂಬುದು ಅವರ ಬಗೆಗೆ ಬಂದಿರಲಿಲ್ಲ. ಹೆದರುವ ಹೆಂಗುಸು ಹೆದರಿಸುವಳೆಂಬುದು, ಸೋತ ಹೆಣ್ಣು ಸೋಲುವಳೆಂಬುದು ಭಟ್ಟರ ಶಾಸ್ತ್ರಗಳಲ್ಲಿ ಎಲ್ಲಿಯೂ ಬಂದಿರಲಿಲ್ಲ. ಅದರಿಂದ, ತಾವು ತಮ್ಮ ಕುಟುಂಬದ ವಿಚಾರದಲ್ಲಿಟ್ಟುಕೊಂಡಿರುವ ಭಾವನೆಗೆ ಜೀರಿಗೆಬೆಲ್ಲವೇ ಕಾರಣವಾಯಿತು. ಎಷ್ಟೋ ಸರ್ತಿ ಇರಬೇಕು ಇರಬೇಕು ಎಂದುಕೊಂಡು, ಎಂದುಕೊಂಡು, ಅದು ಹೌದೇ ಹೌದು ಆಗಿಹೋಗಿತ್ತು.

ಭಟ್ಟರು ಎಂದಿನಂತೆ ಹೆಂಡತಿಯ ಮುಖವನ್ನು ನೋಡಿದರು. ಹೇಳಬೇಕೆಂದು ಹೊರಟಿದ್ದ ಎರಡು ಮಾತೂ ಮರೆತುಹೋಯಿತು. ಅವರು ಏನು ಮಾಡಬೇಕು? ಹೆಚ್ಚು ಕಡಿಮೆ ದುಂಡಾಗಿ ಬಟ್ಟನಾಗಿ, ಕೆಂದಾವರೆಯಂತಿರುವ ಮುಖವನ್ನು ಕಂಡಾಗಲೆಲ್ಲ ಭಟ್ಟರಿಗೆ ಮನಸ್ಸು ಅಸ್ತವ್ಯಸ್ತವಾಗಿ ಹೋಗುವುದು. ಕಾಲದೇಶವರ್ತಮಾನಗಳೆಲ್ಲವೂ ಮರೆತುಹೋಗಿ, ನಿರ್ಜನವಾದ ಆಶ್ರಮದಲ್ಲಿ ಲತಾಕುಂಜದಲ್ಲಿ ಶಕುಂತಳೆಯನ್ನು ಒಬ್ಬಂಟಿಗಳನ್ನಾಗಿ,—ಪತ್ರಲೇಖನದ ಆಮೇಲೆ ಕಂಡ ದುಷ್ಯಂತನಂತೆ ಆಗಿ ಹೋಗುವವರು ಭಟ್ಟರು. ಅದು ಸಿರಿಸಿರಿಯಾಗಿ ಮೆರೆಯುತ್ತಿದ್ದ ಆ ಸುಂದರ

ಮುಖದ ಪ್ರಭಾವವೋ ಅಥವಾ ಅದೂ ಜೀರಿಗೆ ಬೆಲ್ಲದ ಪ್ರಭಾವವೋ ದೇವರು ಬಲ್ಲ.

ಇಂದೂ ಹಾಗೆಯೇ ಆಯಿತು. ಮೊಂಕಾದರೂ ಭಟ್ಟರ ಬುದ್ಧಿಯು ಮೋಸಹೋಗಲಿಲ್ಲ. ಹೆಂಡತಿಯ ಮುಖವನ್ನು ಕಂಡು ಪರವಶರಾದಂತೆ ಒಂದು ಗಳಿಗೆ ದುರದುರನೆ ನೋಡಿ, ಮತ್ತೆ ಹಾಗೆಯೇ ನೋಟವನ್ನು ಅತ್ತ ಕಡೆಗೆ ತಿರುಗಿಸಿಕೊಂಡು "ಅಷ್ಟಲ್ಲದೆ ಹೇಳಿದ್ದಾರೆಯೇ ದಾರೇಷಣವೆಂದು" ಎಂದುಕೊಂಡರು ದಾರೇಷಣ, ಪುತ್ರೇಷಣ, ಧನೇಷಣವೆಂದು ಮೂರು ಹಾರೈಕೆಗಳು ಮೋಕ್ಷಮಾರ್ಗದಲ್ಲಿ ಇವು ಕೆಡಕುಗಳಂತೆ

ಪಾತಮ್ಮನವರಿಗೆ ಆಶ್ಚರ್ಯವಾಯಿತು. ಅಥವಾ ಮನಸ್ಸಿಗೆ ಸರಿ ಹೋಗಿಲ್ಲ; ನಿಂತವರು ಇನ್ನು ಒಂದು ಹೆಜ್ಜೆ ಹಾಸಿಗೆಯ ಕಡೆಗೆ ಬಂದು, "ಅದೇನಂದರೆ ನೀವು ಅಂದುಕೊಂಡದ್ದು ?" ಎಂದರು.

ಭಟ್ಟರು "ಅದೇ !" ಎಂದು, ಒಂದು ಸಣ್ಣ ನಗೆಯನ್ನು ನಕ್ಕು "ಇರಲಿ ! ಹೇಳುತ್ತೇನೆ. ಹೋಗಿ ಒಂದಿಷ್ಟು ಅಡಕೆಲೆ ತೆಗೆದುಕೊಂಡು ಬಾ" ಎಂದು, ಹೆಂಡತಿಯನ್ನು ಕಳುಹಿಸಿಕೊಟ್ಟರು.

ಪಾತಮ್ಮನವರಿಗೆ ಸುಮಾರು ೨೫ ವಯಸ್ಸು. ಗಂಡನಿಗಿಂತ ಒಂದು ಎಂಟುವರುಷ ಚಿಕ್ಕವರು ಅಷ್ಟೆ ! ಮೂರು ಮಕ್ಕಳಾಗಿದ್ದರೂ, ತಲೆಯಲ್ಲಿ ಒಂದೊಂದು ನೆರೆಗೂದಲು ಕಂಡಿದ್ದರೂ, ಅವರ ಮನಸ್ಸಿನ ಉತ್ಸಾಹದಿಂದ ಅವರ ವಯಸ್ಸನ್ನು ಅಳೆಯುವುದಾದರೆ, ಅವರಿಗೆ ಇನ್ನೂ ಹತ್ತು ತಪ್ಪಿದರೆ, ಹನ್ನೆರಡುವರುಷ ಎನ್ನಬಹುದು. ಅಥವಾ ನೀವು ಯಾರಾದರೂ ಗಾಡಿಗೆ ಕಟ್ಟಿರುವ ಎತ್ತಿನ ಹಾಗೆ ಹಾಗೂ ಹೀಗೂ ತಲೆಯನ್ನು ಅಲ್ಲಾಡಿಸಿ ಉಂಟೇ ಎಂದು ತೆಗೆದರೆ, ನಾವು "ಹೋಗಲಿ ಹದಿನಾಲ್ಕು ತಪ್ಪಿದರೆ ಹದಿನೈದಿದ್ದು ಇದ್ದೀತು. ಹದಿನಾರಂತೂ ಇಲ್ಲವೇ ಇಲ್ಲ" ಎನ್ನುವೆವು. ಆಕೆಯ ದೇಹ ವನ್ನು ಕಂಡವರು ಇನ್ನೂ ಇಪ್ಪತ್ತು ಇರಲಾರದು ಎನ್ನುವರು. ಕುರುಡರಿಗೂ ಕಾಣುವುದು ಸಾಧ್ಯವಾಗಿದ್ದಾದರೆ ಅವರೂ ಹೌದು ಹೌದು ಎಂದಾರು.

ಬಹುಶಃ ನಮ್ಮ "ಸ್ಟೇಟ್‌ಮೆಂಟ" ಗೆ ಅದೂ "ಎವಿಡೆನ್ಸೋ"
ಏನೋ? ಅಂತೂ ಭಟ್ಟರು ಅಡಕೆಲೆಯನ್ನು ಕೇಳಿದಾಗೆಲ್ಲ ಒಳ್ಳೆಯೆಲೆಯೇ
ಬರುತ್ತಿತ್ತು. ಬಣ್ಣಕಟ್ಟಿದ ಗನ್ನೆಮನ್ನುವ ಉಜ್ಜಡಿಕೆಯೇ ಬರುತ್ತಿತು. ದಿವ
ಸಕ್ಕೆ ಮೂರುಸಲವಂತೂ ಖಂಡಿತ; ಇನ್ನೂ ನಾಲ್ಕುಸಲ ಕೇಳಲಿ. ಎಲ್ಲವು
ಬೆಳ್ಳಿಯ ತಟ್ಟೆಯಲ್ಲಿಯೇ ಬರಬೇಕು. ಪಾತಮ್ಮನವರು ತಾವೇ ತರಬೇಕು,
ಜೊತೆಯಲ್ಲಿ ತಂದಿಟ್ಟ ಅಷ್ಟುದ್ದದ ಪನ್ನರುಕಡ್ಡಿ ಉರಿದುಹೋಗುವವರೆಗೂ,
ಕೈಯಬಳೆಗಳ ಸಣ್ಣ ಸದ್ದಿನ ಸಂಗೀತದಿಂದ ಕಿರುಮನೆಯನ್ನೆಲ್ಲ ತುಂಬುತ್ತ
ಆ ಯೆಲೆಯನ್ನೆಲ್ಲ ತಾವೇ ಮಡಿಸಿ ಮಡಿಸಿ ಕೊಡಬೇಕು. ಇನ್ನೂ, ಆ
ಭಟ್ಟರ ಕಿರುಮನೆಯ ಗೋಡೆಯಮೇಲೆ ಕಟ್ಟಿದ್ದ ಸರಸ್ವತಿಯ ಪಟದಲ್ಲಿ
ಕುಳಿತಿದ್ದ ನವಿಲನ್ನು ಕೇಳಿದ್ದರೆ, ಅದೂ ಇನ್ನೂ ಅಷ್ಟು ದೂರಹೋಗಿ,
"ಪಾತಮ್ಮನವರ ಬಾಯತಂಬುಲವು ಅಷ್ಟು ಕೆಂಪಾಗಿರುವುದಕ್ಕೆ ಅರೆಯಗಿದ
ತಂಬುಲವು ಮತ್ತೆಲ್ಲಿಂದಲೋ ಬಂದು ಸೇರುವುದೇ ಕಾರಣ. ಉತ್ತರದೇಶ
ದವರ ಸಂಗೀತ ನೋಡಿ, ರಾಗ ಕೊಂಚ "ದರ್ೞ" ಮಾಡಿಬಿಡುತ್ತಾರೆ.
ಎಷ್ಟುಸೊಗಸಾಗಿ ಬಿಡುತ್ತದೆ. ಹಾಗೆ" ಎನ್ನುವುದು. ನಾವು ಅದನ್ನು
ನಂಬುವುದಿಲ್ಲ. ದೇವೀ ಸರಸ್ವತಿಯ ಬಳಿಯಿದ್ದರೆ ತಾನೇ ಏನು? ಹಕ್ಕಿಯ್ತು
ಹಕ್ಕಿಯೇ? ಅದಕ್ಕೆ ಭಟ್ಟರು ಧರ್ಮಶಾಸ್ತ್ರಜ್ಞರು. ಪಾತಮ್ಮನವರು
ಸಂಪ್ರದಾಯ ಶೀಲರು ಎಂದೇನು ಗೊತ್ತು? ಅವರು ಉಚ್ಛಿಷ್ಟದೋಷ
ವನ್ನು ಅಷ್ಟಾಗಿ ಗಣಿಸುವುದಿಲ್ಲವೆಂದರೆ ಹೇಗೆ ನಂಬುವುದು? ಹಕ್ಕಿಯ
ಮಾತು ನಂಬಿ ಹೆಬ್ಬಾರುವರಲ್ಲಿ ಅನುಮಾನಪಡುವುದೇ?

## ಎರಡನೆಯ ಪರಿಚ್ಛೇದ

ಅಂತೂ ಭಟ್ಟರು ಹೋಗಿ ಕೈಕಾಲು ತೊಳೆದುಕೊಂಡು ಬರುವವೇಳೆಗೆ
ಅಡಕೆಲೆಯು ಸಿದ್ಧವಾಗಿತ್ತು. ಭಟ್ಟರು ಅಡಕೆಲೆಯನ್ನು ಹಾಕಿಕೊಳ್ಳುತ್ತಾ
"ಒಂದು ಕನಸಾಯಿತು." ಎಂದರು. ಪಾತಮ್ಮನವರು ತಲೆಯನ್ನು ಸೊಟ್ಟ
ಗಿಟ್ಟು "ಸರಿ! ಮಧ್ಯಾಹ್ನದ ಕನಸು ಅರ್ಥವಿಲ್ಲ ಪರ್ಥವಿಲ್ಲ" ಎಂದರು.

ಭಟ್ಟರು "ಉಂಟೆ? ನಮಗೆ ಗೊತ್ತಿಲ್ಲದ ಮಾತ್ರಕ್ಕೆ ಅದಕ್ಕರ್ಥವಿಲ್ಲವೆಂದ ರೇನು? ಅದಿರಲಿ ಕೇಳು" ಎಂದು ಅಡಕಲೆಯನ್ನು ಅಗಿಯುತ್ತ ಅಗಿಯುತ್ತ ಕನಸನ್ನು ಹೇಳಿದರು

"ಒಂದು ದೊಡ್ಡಕಾಡು, ನಾನೊಬ್ಬನೇ ಹೋಗುತ್ತಿದ್ದೇನೆ. ಎಲ್ಲಿಗೆ ಎನ್ನುವುದು ಅಷ್ಟು ವಿಶದವಾಗಿ ಮನಸ್ಸಿಗೆ ತಿಳಿದ ಹಾಗಿರಲಿಲ್ಲ. ಅಂತೂ ಎದುರಿಗಿದ್ದ ಬೆಟ್ಟವನ್ನು ಹತ್ತಿ ಹೋಗಬೇಕು ಎಂಬುದು ಮಾತ್ರ ಮನಸ್ಸಿಗೆ ತಿಳಿದಿತ್ತು. ಅಷ್ಟರಲ್ಲಿ ಅದೇನೇನೋ ಆಗಿ ಕೊನೆಗೆ ಸುಬ್ರಹ್ಮಣ್ಯಕ್ಕೆ ಹೋಗಿದ್ದೇನೆ. ಅಲ್ಲಿ ಒಂದು "ಘಟಸರ್ಪ"

ಸಾತಮ್ಮನವರು ಗಾಬರಿಯಿಂದ ಬಾಯಿ ನೀರನ್ನು ಅವಸರವಾಗಿ ನುಂಗುತ್ತಾ "ಅದು ಹೆಡೆತೋರಿಸಿತೋ ಇಲ್ಲವೋ ಮೊದಲು ಹೇಳಿ" ಎಂದರು

ಭಟ್ಟರು ಸಾವಧಾನವಾಗಿ ಈಸಲ ಮಾತುನೆನಪಿಗೆ ಬಂತು "ಅಯ್ಯೋ ಅವಸರವೇ? ಸ್ವಲ್ಪ ಕೇಳು" ಎಂದು ಮುಂದಕ್ಕೆ ಹೇಳಿದರು.

"ದೇವರು ಸಾವಿರಹೆಡೆಗಳನ್ನು ತೋರಿಸಿಕೊಂಡು ದರ್ಶನಕೊಟ್ಟಿದ್ದಾನೆ ಆಗ ನಾನು ಭಕ್ತಿಯಿಂದ ನಮಸ್ಕಾರಮಾಡಿ ಸ್ತೋತ್ರಮಾಡುತ್ತೇನೆ. ದೇವರು "ಇದು ಕನಸು ಎಂದು ಸುಮ್ಮನಾಗಬೇಡ. ನೀನು ಒಂದುಸಲ ಬಂದು ದಿಟವಾಗಿಯೂ ದರ್ಶನಮಾಡಿಕೊಂಡು ಹೋಗು" ಎಂದು ಆಜ್ಞಾಪಿಸಿದ್ದಾನೆ. ನಾನೂ "ಆಗಲಿ! ಅಪ್ಪಣೆ" ಎಂದು ಕೈಮುಗಿದೆ. ತಟ್ಟನೆ ಎಚ್ಚರವಾಯಿತು. ಕೂಡಲೆ ಎದ್ದು, ಹಾಗೆಯೇ ಕುಳಿತುಕೊಂಡು "ಇದೇನೀ ಕನಸು" ಎಂದು ಭಾವಿಸಿಕೊಳ್ಳುತ್ತಿದ್ದು "ಆಗಬೇಕಾಗಿದ್ದರೆ ಅದೂ ಆಗಲಿ" ಎಂದೆ. ಆ ವೇಳೆಗೆ ನೀನೂ ಬಂದೆ" ಎಂದರು.

ಸಾತಮ್ಮನವರಿಗೆ ಎಜಮಾನರ ವಿಷಯದಲ್ಲಿ ಎಳ್ಳಷ್ಟು ಸಂದೇಹವಿರ ಲಿಲ್ಲ. ಆದರೂ ಅವರು ಏನೂ ಹೇಳದೆ ಅಷ್ಟಕ್ಕೇ ಕನಸನ್ನು ಮೊಟಕು ಮಾಡಿರುವರು ಎನ್ನಿಸಿತು. ಅದಕ್ಕೆ ಕಾರಣವನ್ನು ಮಾತ್ರ ಹೇಳಲಾರರು. ಆಕೆ "ಬಹುಶಃ ಮನಸ್ಸಿನ ಜೊತೆಯಲ್ಲಿ ಮರಿಮನಸ್ಸು ಒಂದಿರಬೇಕು. ಅನೇಕ ವೇಳೆ ಅದು ಕಾರಣಗಳನ್ನೆಲ್ಲ ವಿಚಾರಿಸಿ, ಹೀಗೇ ಸರಿಯೆಂದು

ಗೊತ್ತುಮಾಡಿ, ನಿರ್ಧಾರವನ್ನು ಮಾತ್ರ ನಮ್ಮ ಮನಸ್ಸಿಗೆ ಹೇಳುತ್ತದೆ. ಈ ಮನಸ್ಸು ಆ ಮರಿಯಲ್ಲಿಟ್ಟಿರುವ ಮಮತೆಯಿಂದ ಅದನ್ನು ನಂಬಿಬಿಡುತ್ತದೆ" ಎಂದು ಕಾಣುತ್ತದೆ. ಇಲ್ಲವಾದರೆ ಪಾತಮ್ಮನವರಿಗೆ ಆ ಸಂದೇಹ ಬರುತ್ತಲೂ ಇರಲಿಲ್ಲ. ಬಂದಿದ್ದರೂ ಅವರು ಅದಕ್ಕಷ್ಟು ಮಹತ್ವವನ್ನು ಕಲ್ಪಿಸುತ್ತಲೂ ಇರಲಿಲ್ಲ

ಪಾತಮ್ಮನವರು "ಇನ್ನೂ ಏನೋ ಇದೆ ಎನ್ನುವ ಹಾಗಿದೆ" ಎಂದರು.

ಭಟ್ಟರು ಹಾಗೇ ಆಕೆಯ ಮುಖವನ್ನು ನೋಡಿ, "ಹೌದು, ಇದೆ. ನೀನು ಒತ್ತಿ ಕೇಳಬೇಡ. ಅದರಿಂದ ನಿನ್ನ ಮನಸ್ಸಿಗೆ ಕೊಂಚ ವ್ಯಸನ ವಾಗುತ್ತದೆ. ಇದ್ದುದರಲ್ಲಿ ನಗುನಗುತ್ತಿರುವುದು ಬಿಟ್ಟು ಹಗಲು ಕನಸುಕೇಳಿ ಕರೆಕರೆ ಪಡಬೇಡ" ಎಂದರು.

ಪಾತಮ್ಮನವರೂ "ಸರಿ" ಎಂದು ಒತ್ತಲಿಲ್ಲ. ಆದರೆ ಒಂದುಸಲ ಮನಸ್ಸು ಅಯ್ಯೋ ಎಂದು ಆಗದ ನಷ್ಟವನ್ನು ಭಾವಿಸಿಕೊಂಡು ಕೊರಗಿತು. ಬಾರದ ದುಃಖದಿಂದ ಬಾಡಿ, ಆಡದಮಾತಿಗಾಗಿ ನೊಂದು, ಕಾರಣವಿಲ್ಲದೆ ಕುಗ್ಗಿತು ಮುಖದಕಾಂತಿಯ ಏರಿಳಿತಗಳಿಂದ ಹೃದಯಾಂತರಾಳದ ಸುಷ್ಟಿಗೆ ಜಾತಕಬರೆದ ಭಟ್ಟರು, ತಾವೂ ಕೊಂಚ ಖೇದಪಟ್ಟುಕೊಂಡು, "ಏನೂ ಯಿಲ್ಲಕಣೆ! ಹುಚ್ಚಿ!" ಎಂದು ಮಡದಿಯ ಕೆನ್ನೆಯನ್ನೊಮ್ಮೆ ಮುಟ್ಟಿದರು. ಪಾತಮ್ಮನವರು ಆಕ್ರಮಿಸುತ್ತಿದ್ದ, ಅರಿವಿಗೆ ಸಿಕ್ಕದ, ಆಲೋಚನಾತರಂಗದಲ್ಲಿ ತೇಲಿಹೋಗಲು ಸಿದ್ಧವಾಗಿದ್ದ ಮನಸ್ಸನ್ನು ಹಾಗೆಯೇ ನಿರೋಧಿಸಿದರು. ತೋರಿದಹಾಗೆ ಕುಣಿದು ಕುಪ್ಪಳಿಸಿ ಅಭ್ಯಾಸ ವಿಲ್ಲದ ಆಕೆಯ ಮನಸ್ಸೂ ಜಾಗ್ರತೆಯಾಗಿಯೇ ಹಿಡಿತಕ್ಕೆ ಸಿಕ್ಕಿತು. ಕೂಡಲೆ ವಿಷಣ್ಣಭಾವವು ದೂರವಾಗಿ, ಮತ್ತೆ ಸೊಬಗಿನ ಸುಗ್ಗಿಯಂತಹ ಎಳೆನಗೆಯು ಮುಖವನ್ನು ಬೆಳಗುತ್ತಿರಲು, ಅವರು "ಹಾಗಾದರೆ ಮುಂದಕ್ಕೇನು?" ಎಂದರು.

ಭಟ್ಟರು "ಅದಕ್ಕೇ ನಾನೂ ಹೇಳಿದುದು. ಸುಬ್ರಹ್ಮಣ್ಯದ ಯಾತ್ರೆಯು ಹಣೆಯಲ್ಲಿ ಬರದಿದ್ದರೆ, ಆಗಬೇಕಾಗಿದ್ದರೆ ಆಗಿಹೋಗಲಿ ಎಂದುದು"

"ಹಾಗಾದರೆ ಹೊರಡುವುದು ಅಂತಲೇನು ?"

ಆ ಮಾತನ್ನು ಕೇಳಿ ಭಟ್ಟರು ಕೊಂಚ ಅವಾಕ್ಕಾದರು. ಮೊದಲಿನ ಮೂಕಭಾವವು ಮತ್ತೆ ತಲೆದೋರಿಬಿಟ್ಟಿತು. ಒಂದುಗಳಿಗೆ ಸುಮ್ಮನಿದ್ದು "ಕಣ್ಣಲ್ಲಿ ನೀರುಬಂತೋ" ಎಂದರು.

ಆವೇಳೆಗೆ ಬಂದಿರಲಿಲ್ಲ! ಆ ಮಾತುಕೇಳಿ ಬಂತು. ಭಟ್ಟರೂ ಸುಖದ ನಿಟ್ಟುಸಿರುಬಿಟ್ಟು "ಅತಿಸರ್ವತ್ರವರ್ಜಯೇತ್"* ಎಂದು ಶಾಸ್ತ್ರವಾಕ್ಯ. ಪಾತು! ಗಂಡನಮೇಲಿನ ಅಭಿಮಾನ ಧರ್ಮ ಕಾಮನಾದರೂ ಇಷ್ಟು ಮಿತಿಮೀರಿದರೆ ಹೇಗೆ? ಇಂಥಾ ಭಾವವು ಸ್ವಾಮಿಯೊಬ್ಬನಲ್ಲಿ ಬಿಟ್ಟು ಅನ್ಯತ್ರ ಕೂಡಲೇಕೂಡದು" ಎಂದರು. ಪಾತಮ್ಮನವರು "ಸ್ವಾಮಿಯೇ ಎದುರಿಗೆ ಇರುವಾಗ ಏತಕ್ಕೆ ಕೂಡದು ?" ಎಂದರು.

ಭಟ್ಟರಿಗೆ ಸಂಪೂರ್ಣವಾಗಿ ಸೋಲಾಯಿತು. ಸಭೆಯಾಗಿದ್ದರೆ, ತುಟಿಪಿಟಕ್ಕೆನ್ನದೆ, ಮೇಲಕ್ಕೆದ್ದು ಕಯ್ಯೆತ್ತಿ ಮುಗಿದು "ಜಿತೋಸ್ಮಿ" ‡ ಎಂದು ದೀರ್ಘದಂಡನಮಸ್ಕಾರ ಹಾಕಬೇಕಾಗಿತ್ತು.

ಭಟ್ಟರು ಅವಾಕ್ಕಾಗಿ ಹೋದರು. ಅವರ ಉಪದೇಶವು ಪುರಾಣದ ಬದನೆಕಾಯಾಯಿತು. ಪತ್ನೀಪ್ರೇಮವು ಅವರ ಅಂತರಂಗದ ವಿವೇಕವನ್ನು ಸೂರೆಗೊಳ್ಳಲು, ಪರವಶರಾದ ಭಟ್ಟರು ಪ್ರೇಮಮಯಿಯಾದ ಕಾಂತೆಯನ್ನು ಬರಸೆಳೆದಪ್ಪಿಕೊಂಡರು. ಮುಖದಲ್ಲಿ ಮುಖವನ್ನಿಟ್ಟರು. ಪವಿತ್ರಪ್ರೇಮದ ಪಾವನಭಾವನಾತರಂಗಿಣಿಯಲ್ಲಿ, ಸಮಾನಶ್ರುತಿಗಳಂತೆ ಜಿಗಿದಿದ್ದ ಅವರ ಅಂತರಂಗಗಳು ಕೊಚ್ಚಿಹೋದುವು. ಅವರಿಬ್ಬರೂ ಒಬ್ಬರ ತೆಕ್ಕೆಯಲ್ಲಿ ಒಬ್ಬರಿದ್ದುದನ್ನು, ಆ ಮಹಾಕವಿ ಭವಭೂತಿಯು ಎಲ್ಲಿಂದಲೋ-ಬಹುಶಃ ಬಾಗಿಲಸಂದಿನಿಂದಲೋ ಏನೋ—ಹೇಗೋ ನೋಡಿಯೇ ಇರಬೇಕು. ಇಲ್ಲವಾದರೆ, ಆ "ಅದ್ವೈತಂ ಸುಖದುಃಖಯೋಃ" ಎಂಬ ಪದ್ಯವನ್ನು ಬರೆಯಲು ಆತನಿಂದ ಆಗುತ್ತಿರಲಿಲ್ಲ.



---

* ಯಾವುದೂ ಅತಿಯಾಗಿರಬಾರದು.

‡ ಸೋತೆನು.

# ಮೂರನೆಯ ಪರಿಚ್ಛೇದ.

---

ಮರುದಿನದಿಂದ ಭಟ್ಟರ ಮನೆಯಲ್ಲಿ ಸುಬ್ರಹ್ಮಣ್ಯದ ಯಾತ್ರೆಗೆ ಹೊರಡುವುದಕ್ಕೆ ಬೇಕಾದ ವಸ್ತುಗಳೆಲ್ಲ ಸಿದ್ಧವಾಗುವುದಕ್ಕೆ ಆರಂಭವಾಯಿತು. ಪಾತಮ್ಮನವರಿಗೆ ಬಹಳ ಸಂಭ್ರಮ. ಆದರೆ, ಆ ಸಂಭ್ರಮದಲ್ಲಿ ಒಂದು ಆಶೆ. ಆಶೆಯ ನಡುವೆ ಒಂದು ಸಂದೇಹ. ಆ ಸಂದೇಹಕ್ಕೆ ಬಲಗೊಡುವುದಕ್ಕೆ ಒಂದು ಬಿಗುಮಾನ. ಅಥವಾ ಈಗಿನವರ ಮಾತಿನಲ್ಲಿ ಅಭಿಮಾನ.

ತಾವೂ ಸುಬ್ರಹ್ಮಣ್ಯಕ್ಕೆ ಹೋಗಿಬರಬೇಕೆಂಬ ಆಶೆ. ತಾವಾಗಿ ಬಾಯಿಬಿಟ್ಟು ಕೇಳುವುದು ಹೇಗೆ? ಕೇಳಿದುದಕ್ಕೆ ಸರಿಯಾಗಿ ಕರೆದುಕೊಂಡು ಹೋದರಂತೂ ಸರಿಯಾಯಿತು. ಹಾಗಿಲ್ಲದೆ, ಸರಿ, ಯಾತಕ್ಕೆ ಎಂದು ಬಿಟ್ಟರೆ! ಎಂದು ಸಂದೇಹ. ಅವರೇ ಕರೆಯಲಿ. ಅವರಿಗೇನು ತಿಳಿಯದೆ? ಹೆಂಡತಿಯನ್ನು ಹಿಂದೆಬಿಟ್ಟು, ಯಾತ್ರೆಹೋದರೆ ಬರುವುದು ಅರ್ಧಪುಣ್ಯ ಮಾತ್ರವೇ ಎಂದು ಅವರು ಕಾಣರೇ? ಹೆಂಡತಿಯೆಂದರೆ ಸುಮ್ಮನೇನೇ? ತಮ್ಮಲ್ಲಿ ಅರ್ಧವೆಂದು ಅಗ್ನಿಸಾಕ್ಷಿಕವಾಗಿ ಪ್ರಮಾಣಮಾಡಿಕೊಟ್ಟಿಲ್ಲವೆ? ಹಾಗೆಬೇಕಾದರೆ ಅವರೇ ಹೊರಡು ಎನ್ನಲಿ ಎಂಬ ಬಿಗುಮಾನ ಹೀಗೆ ಆಶೆ, ಸಂದೇಹ, ಬಿಗುಮಾನಗಳಲ್ಲಿ ಪಾತಮ್ಮನವರು ಯಜಮಾನರನ್ನು ಕೇಳಲಿಲ್ಲ. "ಕನಸೇನಾದರೂ ದಿಟವಾಗಿ ಹೋಗಿಬಿಟ್ಟರೆ ಏನುಗತಿ? ಆದ್ದರಿಂದ, ಏನಾದರೂ ಆಗಲಿ, ಕುಟುಂಬ ಮನೆಯಲ್ಲಿಯೇ ಇದ್ದುಬಿಟ್ಟರೆ ಕ್ಷೇಮ" ಎಂದು ಯಜಮಾನರಿಗೆ. ಆದರೂ, ಏನೂ ಯಾರಿಗೂ ಹೇಳಲೂ ಲಾರದೆ, ತಾವು ಮರೆತೂಬಿಡಲಾರದೆ, ಇರುವ ಯಾವುದೋ ನಗೆಚಾಟಿಕೆಯ ವಿಷಯವೊಂದು ಅವರ ಮನಸ್ಸಿನಲ್ಲಿ ನೆಲಸಿ, ಆ ಮನಸ್ಸು ಹಾಗೂ ಹೀಗೂ ಹೊಯ್ದಾಡಿ, ಹಿಂದಕ್ಕೂ ಮುಂದಕ್ಕೂ ಶತಪಥಮಾಡಿ, ಅಳಿದೂ ಸುರಿದೂ ಆಯಾಸಗೊಂಡಿತ್ತು. ಅಂತೂ, ಆ ಸ್ಥಿತಿಯಲ್ಲಿ ಯಾರೇ ಆಗಲಿ, ಯಾವ ವಿಚಾರವಾಗಿಯೇ ಆಗಲಿ, ಸ್ವಲ್ಪ ಒತ್ತಿದ್ದರೆ, ಬಲಾತ್ಕಾರ ಮಾಡಿದ್ದರೆ, ಭಟ್ಟರು ಕಾಟತಪ್ಪಿದರೆ ಸಾಕೆಂದು "ಆಗಬಹುದು" ಎಂದುಬಿಡುತ್ತಿದ್ದರು.

ಎಂಟು.

ಆದರೆ ಪಾತಮ್ಮನವರು ಒತ್ತಾಯಮಾಡಲಿಲ್ಲ. ಭಟ್ಟರಿಗಂತೂ, ಸ್ವತಂತ್ರಿಸಿ ಕೆಲಸಮಾಡುವ, ಅಥವಾ ಕೆಲಸಮಾಡೆಂದು ಹೇಳುವ ಮನಸ್ಸೇ ಇರಲಿಲ್ಲ.

ಗಾಡಿಯ ವಿಚಾರವು ಮಾತ್ರ, ಹಾಗಾಗಲಿಲ್ಲ. ಅದಕ್ಕೆ ಒತ್ತಾಯದ ಮೇಲೆ ಒತ್ತಾಯವಾಗಿ ಕೊನೆಗೆ ಗಾಡಿಯು ಗೊತ್ತಾಯಿತು. ಇನ್ನೇನು ನಾಳೆಯದಿನ ಸಂಜೆಗೆ ಹೊರಡುವುದು ಎನ್ನುವಾಗ, ಆದಿನ ಮಧ್ಯಾಹ್ನ ಸತೀಪತಿಗಳು ಮಾತನಾಡುತ್ತ ಇದ್ದಾಗ, ಪಾತಮ್ಮನವರು "ನೀವು ಹೇಳಿದ್ದ ಹಾಗೆ ಮಾಡಬೇಡಿ; ಎಲ್ಲಾದರೂ ಗಾಡಿಯಿಳಿದು ಹಿಂದಕ್ಕೆ ಕಳುಹಿಸಿಬಿಟ್ಟು ನೀವು ಮುಂದಕ್ಕೆ ನಡೆದುಕೊಂಡು ಹೊರಟುಬಿಟ್ಟೀರಿ" ಎಂದರು.

ಭಟ್ಟರೂ ಆಕೆಯ ಮುಖವನ್ನು ನೋಡಿ, ನಕ್ಕು ಕೇಳಿದರು. "ಯಾತ್ರೆ ಹೋಗುವುದು ತನಗೋಸ್ಕರವೋ, ಇನ್ನೊಬ್ಬರಿಗೋಸ್ಕರವೋ?"

"ತನಗೋಸ್ಕರ"

"ಹಾಗಾದರೆ, ಆದಷ್ಟು ಗೋಪ್ಯವಾಗಿ ಹೋಗಿ ಬರಬೇಕು. ಇಲ್ಲದೆ ಆಡಂಬರವಾಗಿ ನಾನು ಹೊರಟರೆ, ಆ ಪ್ರಾಂತ್ಯ ಇರುವ ಶಿಷ್ಯರು ಬೇಕಾದಷ್ಟು ಉತ್ಸವ ಮಾಡಿಬಿಡುತ್ತಾರೆ. ಯಾತ್ರೆ ಗೀತ್ರೆ ಎಲ್ಲ ಹೋಗಿ "ರಾಜಕನ್ಯಾವಿವಾಹೇನ" ಎಂಬಂತೆ ಆಗಿಹೋಗುತ್ತದೆ. ಇನ್ನೂ ಒಂದು. ಹಾಗೆ ಆಡಂಬರವಾಗಿ ಹೋಗಬೇಕು ಎನ್ನುವಹಾಗಿದ್ದರೆ, ಅರಮನೆಯಲ್ಲಿ ಕೇಳಿಕೊಂಡಿದ್ದರೆ "ಮೇನಾ" ಬರುತ್ತಿರಲಿಲ್ಲವೆ ?"

"ನಾನು ನೀವು ಅರಮನೆಯಲ್ಲಿ ಕೇಳುತ್ತೀರಿ. ಮೇನಾ ಬರುತ್ತದೆ. ದಾರಿಯಲ್ಲಿ ಬೋಯಿಗಳು, ಆಳು, ಕಾಳು ಎಲ್ಲರಿಗೂ ಬೇಕಾಗುತ್ತದೆ ಎಂದೇ ಪರ್ವತದಹಾಗೆ ಇದೆಲ್ಲ ಮಾಡಿಸಿರುವುದು."

"ನಾನೂ ಗುಣಿಸುತ್ತಿದ್ದೆ. ಇದೇನು. ಇವಳು ಎಂಟುದಿನದಿಂದ ಮದುವೆಗೆ ಮಾಡಿದಹಾಗೆ ಸಿದ್ಧಮಾಡುತ್ತಿದ್ದಾಳಲ್ಲ! ಎಂದು ಯೋಚಿಸುತ್ತಿದ್ದೆ. ಈಗ ಅರ್ಥವಾಯಿತು."

"ಹಾಗಾದರೆ "ಮೇನಾ" ಬರುತ್ತದೆಯೇನು ?"

"ಹಾಗೆ ಬೇಕು ಎನ್ನುವಹಾಗಿದ್ದರೆ, ಈವೇಳೆಗಾಗಲೇ, ಬರೆಸುಕೊಳ್ಳ ಬೇಕಾಗಿತ್ತು. ಈಗ ಸಾಧ್ಯವಿಲ್ಲ."

ಪಾತಮ್ಮನವರ ಆಶೆಯು ಸಮೂಲವಾಗಿ ಛಿನ್ನವಾಗಿಹೋಯಿತು. ಇನ್ನೂ ಏನೋ ಹೇಳಬೇಕೆಂದಿದ್ದವರು, ಸುಮ್ಮನಾಗಿ ನಿಟ್ಟುಸಿರು ಬಿಟ್ಟರು. ಒಂದುಘಳಿಗೆ ಹಾಗೆ ವಿಮುಖವಾಗಿದ್ದು ಪತ್ನಿ "ಹಾಗಾದರೆ, ಹೊರಡುವು ದಕ್ಕೆ ಏನೇನು ಕಟ್ಟಲಿ?" ಎಂದರು.

"ತಿಳಿದೇ ಇದೆ. ಧಾವಳಿಯ ಸಣ್ಣ ಹಸಿಬೆಯ ಚೀಲದಲ್ಲಿ, ಒಂದು ಎರಡುಸೇರು ಅವಲಕ್ಕಿ, ಒಂದು ಸೇರಿನಷ್ಟು ಹುರಿಹಿಟ್ಟು, ಕಟ್ಟಿಬಿಡು. ಆ ಹುರಿಹಿಟ್ಟಿನ ಚೀಲದಲ್ಲಿ, ಒಂದು ನೂರು ರೂಪಾಯಿನ ನೋಟು, ಐದು ರೂಪಾಯಿನದು ಎರಡು ನೋಟು ಎರಡು ರೂಪಾಯಿನ ಚಿಲ್ಲರೆ ಇಷ್ಟು ಒಂದು ಕಾಗದದ ಚೀಲದಲ್ಲಿ ಹಾಕಿಡು. ಮರತೆ—ಚಿಲ್ಲರೆ ಈಚೆ ಇರಲಿ. ಪಂಚೆಕೊಸನೆಗೆ ಗಂಟುಹಾಕಿದಲಾಯಿತು. ಒಂದು ಚೊಂಬು, ಒಂದು ತಾಮ್ರದ ಕೊಳಗ-ಉದ್ಧರಣೆಯೂ ಬೇಡ"

ಪಾತಮ್ಮನವರಿಗೆ ರೇಗಿಹೋಯಿತು. "ಬಿಡಿ ಸನ್ಯಾಸಿಗಳ ಹಾಗೆ ಒಂದು ದಂಡ ಒಂದು ಕಮಂಡಲು ತೆಗೆದುಕೊಂಡು ಹೊರಟುಬಿಡಿ, ಸುಖ."

"ಸನ್ಯಾಸವೆಂದರೆ ಬಿಟ್ಟಿಯಲ್ಲ. ಅದು ಧರ್ಮಿಷ್ಠರ ಕರ್ಮಸಾಮ್ರಾ ಜ್ಯದ ಪರಮಾವಧಿ." ತಣ್ಣಗೆ ಆಡಿದ ಭಟ್ಟರ ಮಾತು ಪಾತಮ್ಮನವರ ಕೋಪವನ್ನೆಲ್ಲ ನುಂಗಿಬಿಟ್ಟಿತು.

ಹಾಗೂ ಹೀಗೂ ಎಳೆದಾಟವಾಗಿ, ಭಟ್ಟರು ಗಾಡಿಯಲ್ಲಿಯೇ ಹೋಗ ಬೇಕೆಂದೂ, ಬೇಡವೆಂದು ತೋರಿದಾಗ, ಗಾಡಿಬಿಟ್ಟು ನಡೆದುಕೊಂಡು ಹೋಗುವ ಸ್ವಾತಂತ್ರ್ಯವು ಭಟ್ಟರಿಗೆ ಇರಬೇಕೆಂದೂ ಗೊತ್ತಾಯಿತು. ಪಾತಮ್ಮನವರೂ ಒಂದು ನಿಯಮವನ್ನು ಒಪ್ಪಿಕೊಂಡರು. ಭಟ್ಟರು ಹೊರಟರೆಂದು ಒಂದು ವಾರದವರೆಗೂ ಯಾರಿಗೂ ಹೇಳಕೂಡದು. ತಾವು ಯಾತ್ರೆಗೆ ಹೋಗಿಬರಲು ಅಪ್ಪಣೆಯಾಗಬೇಕೆಂದು ಅರಮನೆಗೆ ಬರೆದು ಕೊಂಡಿದ್ದ ಮನವಿಯು ಅವರ ನೆನಪಿನಲ್ಲಿರಲಿಲ್ಲ.

———

# ನಾಲ್ಕನೆಯ ಪರಿಚ್ಛೇದ.

ಮೈಸೂರುಬಿಟ್ಟು ನಾಲ್ಕುದಿನವಾಗಿದೆ. ಭಟ್ಟರು ಹಿಂದಿನ ದಿನವೇ ಗಾಡಿ ಕಳುಹಿಸಿಬಿಟ್ಟರು. ರಾಮನಾಥಪುರದಲ್ಲಿ ಯಾರೋ ಗುರುತು ಕಂಡವರು ಬಂದು ಉಪಚಾರ ಮಾಡಿದರಂತೆ. ಇನ್ನು ಮುಂದಕ್ಕೆ ಹೀಗೇ ಆಗಿ ಹೋದೀತೆಂದು ಭಟ್ಟರು ಗಾಡಿಯವನನ್ನು "ಹಿಂದಕ್ಕೆ ಹೋಗು" ಎಂದು ಬಿಟ್ಟರು. ಇಂದು ಭಟ್ಟರು ಪಾದಚಾರಿಗಳು. ಅವರ ಹತ್ತಿರವಿರುವ ಸರಸ್ವತೀ ರೂಪಿಣೀ ಲಕ್ಷ್ಮಿಯನ್ನು ಬಿಟ್ಟರೆ, ಚಿಕ್ಕ ಬಟ್ಟೆ ಜರೆ, ಆ ವಸ್ತ್ರ ಗಂಟು ಎಲ್ಲವೂ ಸೇರಿದರೂ ಸುಮಾರು ಹತ್ತು ರೂಪಾಯಿ ಆದೀತೋ ಇಲ್ಲವೇ ಇಲ್ಲವೋ?

ತಲೆಗೊಂದು ಸ್ನಾನದ ಪಂಚೆ ಸುತ್ತಿದ್ದಾರೆ. ನಡುವಿಗೊಂದು ಚೌಕ ಬಿಗಿದಿದ್ದಾರೆ. ಉಟ್ಟಿರುವುದೊಂದು ಪಂಚೆ, ಹೊದ್ದಿರುವುದು ಧಾವಳಿ. ಅದರೊಳಗೆ ಆರುಮೊಳದ ಪಂಚೆ ಒಂದು. ಬೆನ್ನಿನಮೇಲೆ ಹಸಿಬೆಯ ಚೀಲದ ಗಂಟು. ಭಟ್ಟರು ನಡೆದುದೇ ನಡುದು. ನಡೆದು ಅಭ್ಯಾಸವಿಲ್ಲದ ಭಟ್ಟರಿಗೆ ಒಮ್ಮೊಮ್ಮೆ ದಾರಿಯು ಸವೆಯುವುದೋ ಇಲ್ಲವೋ ಎನಿಸುತ್ತದೆ. ಮತ್ತೆ "ದಾರಿಯು ಸವೆಯುವುದಿಲ್ಲವೆಂದರೇನು? ಇದೊಂದು ಭ್ರಾಂತಿ. ಹಜ್ಜೆಹಜ್ಜೆಗೂ ಸ್ವಾಮಿಯ ಸಾನ್ನಿಧ್ಯವು ಸಮೀಪವಾಗುತ್ತಿದೆ" ಎಂದುಕೊಂಡು ಮುಂದೆ ನುಗ್ಗುವರು. ಆದರೂ ಸೋತ ಕೈಕಾಲುಗಳು, ಅವರ ಮನಸ್ಸಿನ ಆಶೆಯಂತೆ ಮುಂದರಿಯಲಾರದೆ, ಹಿಂದೆ ಬೀಳುವುವು. ಭಟ್ಟರು "ಜಡದೇಹ! ನಾವು ಹೇಳಿದಹಾಗೆ ಎಲ್ಲಿ ಕೇಳುತ್ತದೆ? ಏನೋ ಅವಳ ಮಾತು ಕೇಳಿ, ಗಾಡಿಯಲ್ಲಿಯೇ ಹೋಗಿದ್ದರೆ ಚೆನ್ನಾಗಿತ್ತು. ಎಂದುಕೊಂಡು ನಿಧಾನವಾಗಿಯೇ ಹೋಗುವರು.

ಹೀಗೆ ಕಾಲೆಳೆದುಕೊಂಡುಹಾಕುತ್ತ ಭಟ್ಟರು ದಿನಕ್ಕೆ ಮೂರುನಾಲ್ಕು ಗಾವುದದಂತೆ ನಡೆದರು. ಅಂತೂ ಹೆಜ್ಜೆಹೆಜ್ಜೆಗೂ ಮುಂದಕ್ಕೆ ಹೋಗು

ತ್ತಿದ್ದೇನೆಂಬ ನಂಬಿಕೆ. ದೇವರು ದರ್ಶನಕ್ಕೆ ಬಾರೆಂದು ಆಜ್ಞಾಪಿಸಿರುವನೆಂಬ ಗೌರವ. ಅಂತೂ ದಾರಿಯು ನಿದಾನವಾಗಿಯಾದರೂ ಸಾಗುತ್ತಿದೆ.

ಹೀಗೆ ಇನ್ನೂ ಎರಡುದಿನವಾಗಿದೆ. ನಾಳೆಯದಿನ ಅಮಾವಾಸ್ಯೆ. ಎಲ್ಲಾದರೂ ನದೀತೀರ ನೋಡಿ ಅಲ್ಲಿದ್ದು ತರ್ಪಣ ಮುಂತಾದುದು ಮಾಡಿ ಕೊಂಡು ಮುಂದಕ್ಕೆ ಹೋಗುವುದು ಎಂದುಕೊಂಡರು. ಅವರು ಅದುವರೆಗೂ ಅಮಾವಾಸ್ಯೆಯದಿನ ಪಿತೃಶ್ರಾದ್ಧವನ್ನು ಮಾಡದೆ ಇದ್ದ ದಿನವಿಲ್ಲ. ಆದರೆ ಆ ಕಾಡಿನಲ್ಲಿ ಕುಳಿತು ಶ್ರಾದ್ಧವನ್ನು ಮಾಡುವುದು ಹೇಗೆ? ಹೋಗಲಿ, ಈಸಲಕ್ಕೆ ತರ್ಪಣದಲ್ಲಿಯೇ ತೃಪ್ತಿಪಟ್ಟುಕೊಳ್ಳುವುದು ಎಂದುಕೊಂಡರೂ, ಅಭ್ಯಾಸವಾಗಿದ್ದ, ರೂಢಮೂಲವಾಗಿದ್ದ ಪದ್ಧತಿಯನ್ನು ಬಿಡುವುದೆಂದು, ಬಿಡಲೇಬೇಕೆಂದು, ಬಿಡದಿದ್ದರೆ ಯತ್ನವಿಲ್ಲವೆಂದು ನಂಬಿಕೆಯಾದಾಗ ಉಂಟಾದ ಒಂದು ವಿಧವಾದ ಕಳವಳವು, ಸಂತಾಪವು, ಎದೆನೋವು, ಅವರ ಒಳಬಗೆಯನ್ನು ಕೊರೆಯುತ್ತಿತ್ತು. ಪದಾರ್ಥವು ನಷ್ಟವಾಗಿದೆ ಯೆಂದು ನಂಬಿಕೆಯು ಹುಟ್ಟಿದ್ದರೂ, ನಷ್ಟವಾಯಿತೆಂಬ ಸಂಕಟವು ಹೋಗ ದಿರುವಂತೆ, ನಾಳೆಯ ಶ್ರಾದ್ಧವಿಲ್ಲದೆ ಹೋಯಿತೆಂಬ ಸಂಕಟವು ಭಟ್ಟರಿಗೆ ಬಹಳ ಕಷ್ಟವನ್ನು ಕೊಟ್ಟಿತು. "ಹೋಗಲಿ ನಾಳೆ ಉಪವಾಸ ಮಾಡು ವುದು-ಸುಬ್ರಹ್ಮಣ್ಯಕ್ಕೆ ಹೋದ ದಿವಸವೇ ಪ್ರಾಯಶ್ಚಿತ್ತ ಮಾಡಿಕೊಂಡು ಮೊದಲು ಪರ್ವಶ್ರಾದ್ಧ ಮುಗಿಸಿ, ಆಮೇಲೆ, ತೀರ್ಥಶ್ರಾದ್ಧ ಮಾಡುವುದು. ಇದೇನೂ ಅಶಾಸ್ತ್ರೀಯವಲ್ಲ" ಎಂದು ಮುಂತಾಗಿ, ಎಷ್ಟು ಸಮಾಧಾನ ಹೇಳಿದರೂ, ಸಾಂಪ್ರದಾಯಶರಣವಾದ ಮನಸ್ಸು ಒಪ್ಪಲೊಲ್ಲದು. ಅದರ ಹಾರಾಟವೇ ಹಾರಾಟವಾಗಿ, ಅದನ್ನು ಹದ್ದಿನಲ್ಲಿಟ್ಟುಕೊಳ್ಳುವುದು, ಹುಚ್ಚು ಕುದುರೆಯನ್ನು ಆಳುವುದಕ್ಕಿಂತ ಕಠಿಣವಾಯಿತು.

ಹೀಗೆ ಒಳಗಿನ ನಾಟಕವನ್ನು ನೋಡುತ್ತಿದ್ದ ಭಟ್ಟರ ಕೈಕಾಲುಗಳು ಇದೇ ಸಮಯವೆಂದು ನಡಗೆಯನ್ನು ನಿಧಾನಮಾಡಿಬಿಟ್ಟವು. ನಡೆಯು ತ್ತಿದ್ದುದುಂಟು; ಆದರೆ ದಾರಿಯು ಮಾತ್ರ ಸವೆಯಲಿಲ್ಲ. ಇಷ್ಟವಿಲ್ಲದವರಿಂದ ಕೆಲಸಮಾಡಿಸಿಕೊಂಡಹಾಗೆ-ಸಂಜೆಯೇನೊ ಆಯಿತು. ಆರಾತ್ರಿ ತಂಗ ಬೇಕೆಂದಿದ್ದ ಊರುಮಾತ್ರ ಇನ್ನೂ ಸಿಕ್ಕಲಿಲ್ಲ. ಸೂರ್ಯಾಸ್ತಮಯ

ವಾಗುತ್ತ ಬಂದಿದೆ. ಹಾದಿಯ ಎರಡು ಪಕ್ಕದಲ್ಲಿಯೂ ಚಟ್ಟವಾಗಿ, ದಿಟ್ಟ ವಾಗಿ, ಪುಟ್ಟವಾಗಿ, ಎತ್ತರವಾಗಿ ಬೆಳದಿರುವ ಮರಗಳ ನೆರಳು ವನಸ್ಥಲಿಯು ಚಳಿಯೆಂದು ಹೊದೆದುಕೊಂಡ ಮುಸುಕಿನಂತಿದೆ. ಅಲ್ಲಲ್ಲಿ ಆ ಎತ್ತರವಾದ ಗಿಡಗಳ ತಲೆಯಲ್ಲಿ ಒಂದೊಂದೆಡೆಯಲ್ಲಿ ಮಾತ್ರ ಹೊಂಬಣ್ಣದ ಬೆಳಕು ಹಕ್ಕಿಪಕ್ಕಿಗಳ ಗಜಿಬಿಜಿಯು ಹೆಚ್ಚಾಗಿದೆ. ಸಂಜೆಗಾಳಿಯು ಮರಗಳನ್ನು ಸಣ್ಣಗೆ ಅಲುಗಿಸಿ, ಸುಯ್ಯ್ ಎಂದು ಸಿಳ್ಳುಹಾಕಿಕೊಂಡು, ಶೃಂಗಾರಶೇಖರ ನಾದ ತರುಣವಿಟನಂತೆ ಸಂಭ್ರಮವಾಗಿ ತಿರುಗುತ್ತಿದೆ.

ನಿಷ್ಠುರ ಸಾಯಂಸಂಧ್ಯೆಗೆಂದು ಕೈಕಾಲು ತೊಳೆದುಕೊಳ್ಳುವ ಕಾಲು. ಗಂಡನಮೇಲೆ ಸಿಟ್ಟಾಗಿದ್ದರೂ, ಮನೆಯ ಕೆಲಸವನ್ನು ಮಾತ್ರ ನೇರವಾಗಿ, ಕಾಲಕ್ಕೆ ಸರಿಯಾಗಿ ಮಾಡಿಕೊಂಡುಹೋಗುವ ಮಧ್ಯವಯಸ್ಸಿನ ಮಡದಿ ಯಂತೆ, ಅವರ ಮನಸ್ಸು, ತನ್ನ ಸುಖದುಃಖಗಳನ್ನೆಲ್ಲ ಒತ್ತಟ್ಟಿಗಿಟ್ಟು, ಅವರನ್ನು ಸಂಧ್ಯಾಸಮಯವೆಂದು ಎಚ್ಚರಿಸಿತು. ಭಟ್ಟರ ಕಣ್ಣು ಒಳ ಮೊಗವಾಗಿ ವಿಚಾರತರಂಗಿಣಿಯಲ್ಲಿ ಮಗ್ನವಾಗಿದ್ದುದು, ತಟ್ಟನೆ ತಿರುಗಿ, ಹೊರಮೊಗವಾಗಿ, "ಹೌದು! ಹೌದು! ಸಂಧ್ಯೆಯಸಮಯ"ವೆಂದಿತು. ಕೂಡಲೇ ಅನವಧಾನವಾಗಿದ್ದ ದೇಹದ ಅಂಗಾಂಗಗಳೆಲ್ಲವೂ ಜಾಗ್ರತ ವಾದುವು. ಕೊಂಚಹೊತ್ತಿನೊಳಗಾಗಿ ದಾರಿಯ ಮಗ್ಗುಲಲ್ಲಿದ್ದ ಒಂದು ಕೊಳವನ್ನು ಸೇರಿ, ಭಟ್ಟರು ಕೈಕಾಲು ತೊಳೆದುಕೊಂಡು ಶುದ್ಧಾಚಮನ ಮಾಡುತ್ತಿದ್ದರು.

---

## ಐದನೆಯ ಪರಿಚ್ಛೇದ.

---

ಏನೂ ವಿಘ್ನವಿಲ್ಲದೆ, ಭಟ್ಟರ ಸಂಧ್ಯಾವಂದನೆಯು ನೆರವೇರಿತು. "ಇಂದ್ರಾಕ್ಷಿ, ಶಿವಕವಚ ಪಾರಾಯಣಮಾಡಿಬಿಟ್ಟೇ ಹೋಗೋಣ, ಹೇಗಾದರೂ ಹೊತ್ತಾಯಿತು," ಎಂದು ಭಟ್ಟರು ಕುಳಿತುಬಿಟ್ಟರು. ಶಿವ ಕವಚವು ಮುಗಿಯಿತು. ಇಂದ್ರಾಕ್ಷಿಯು ಮುಗಿಯುತ್ತ ಬಂದಿದೆ. ಆ

ನಾನು ಸುಳ್ಳು ಹೇಳಿಬಿಟ್ಟೆನಲ್ಲ! ಪರಮೇಶ್ವರ! ಈ ನೂರು ರೂಪಾಯಿ ಹೋಗಿದ್ದರೆ, ನನ್ನ ಅದೃಷ್ಟವೆಲ್ಲ ಹೋಗುತ್ತಿತ್ತೆ? ನೀನೇಕೆ ನನ್ನ ಬಾಯಲ್ಲಿ ಹೀಗಾಡಿಸಿಬಿಟ್ಟೆ! ಈ ವೊಂಕು ನನಗೇಕೆ ಇಷ್ಟು ಕವಿದುಕೊಂಡಿತು. ಈ ಎಂಟು ದಿನದಿಂದಲೂ ನಿನ್ನ ಪೂಜೆಯಿಲ್ಲದುದರ ಫಲವೋ ಇದು? ನಾನು ಬ್ರಾಹ್ಮಣನಾಗಿ ಸುಳ್ಳು ಹೇಳಿದೆನಲ್ಲ! ಎಂದು ಪಶ್ಚಾತ್ತಾಪದಿಂದ ಭಟ್ಟರು ಕುದಿದರು. ಅಸತ್ಯವನ್ನಾಡಿದುದು ಮಹತ್ ಪಾಪವೆಂಬ ಭಾವವು ಅವರ ಬಗೆಯನ್ನು ಕೊರೆದುಬಿಟ್ಟಿತು. ಒಮ್ಮೊಮ್ಮೆ “ಅದು ಭೀತನಾಗಿ, ಪ್ರಜ್ಞೆಯಿಲ್ಲದೆ ಹೋಗಿ ಹೇಳಿದುದು ಅಲ್ಲದೆ, ಆ ಕಳ್ಳನೊಡನೆ ಸತ್ಯವಾಡುವು ದೆಂದರೇನು? “ಶಠಂಪ್ರತಿಶಾಠ್ಯಂ” ತಲೆ ಹೊಡೆದು ತಿನ್ನುವನೊಡನೆ ದಿಟವಾಡುವುದೇ?” ಎಂದು ಬಗೆಯೊಂದುಬಗೆಯ ಸಮಾಧಾನವನ್ನು ತಂದೊಡ್ಡುವುದು ಆದರೆ ಧರ್ಮದ ತಿರುಳನ್ನರಿತ ಭಟ್ಟರ ಅಂತರಂಗವು ಅದನ್ನು ಒಪ್ಪದು. ಅವನು ಕಳ್ಳನಾಗಲಿ, ಸುಳ್ಳನಾಗಲಿ, ತಲೆಹೊಡೆಯುವವ ನಾಗಲಿ, ಅದು ಅವನ ಪ್ರಾರಬ್ಧ! ಅವನ ಹಣೆಯ ಬರಹ! ಅದನ್ನು ಕಟ್ಟಿಕೊಂಡು ನನಗೇನು? ಅವನು ಕಳ್ಳನೆಂದು, ನಾನು ಸುಳ್ಳಾಡಿ, ಪಾಪವನ್ನು ಕಟ್ಟಿಕೊಳ್ಳುವುದೇ? ಅಸತ್ಯವನ್ನಾಡುವುದು ದುರ್ಗತಿಗೆ ದಾರಿ ಯೆಂದು, ಸುಳ್ಳು ಸದ್ಗತಿಗೆ ಬಾಧಕವೆಂದು ಹಾಳುಮನವರಿಯದೆ? ಸಮಯದಲ್ಲೇಕೆ ಮೊಸಹೋಯಿತು? ನನ್ನ ಧರ್ಮವನ್ನು ನಾನು ಅನು ಸರಿಸದೆ, ನನ್ನ ಹಾದಿಯನ್ನು ಹಿಡಿದು ನಾನು ಹೋಗದೆ, ಈ ಸಣ್ಣ ದಾರಿಗೇಕೆ ಯಿಳಿದೆ? ಮಹಾದೇವ! ಈ ನಾಯಿಯನ್ನು ಈ ಪಾಪಕೂಪಕ್ಕೆ ತಳ್ಳಬೇಕೆಂದುಕೊಂಡಿದ್ದೆಯಾ? ಅಥವಾ ಇಂತಹ ಸಂದರ್ಭವೊಂದನ್ನು ತಂದೊಡ್ಡಿ, ನನ್ನನ್ನು ಪರೀಕ್ಷಿಸಬೇಕೆಂದಿದ್ದೆಯಾ? ಪರಮೇಶ್ವರ! “ಮಮ ಮಾಯಾ ದುರತ್ಯಯಾ” ಎಂದು ಕಂಠೋಕ್ತವಾಗಿ ಹೇಳಿದ ನೀನೇ, ಹೀಗೆ ನನ್ನಂತಹ ಪಾಮರರನ್ನು ಪರೀಕ್ಷಿಸುವುದೇ? ನಿನ್ನ ಪರೀಕ್ಷೆ ಯಲ್ಲಿ ಗೆಲ್ಲುವಷ್ಟು ತ್ರಾಣವಿದೆಯೇ ಈ ಕುನ್ನಿಗೇ ಇನ್ನಾದರೂ ಮನಸ್ಸು ಮಾಡು, ಆ ಅವನನ್ನು ಮತ್ತೆ ಇಲ್ಲಿಗೆ ಕರೆದುಕೊಂಡುಬಂದು, ಈ ಹಣ ವನ್ನು ಅವನಿಗೆ ಕೊಡಿಸಿಬಿಡು. ಹಾಗಾದರೂ ನನ್ನ ತಪ್ಪನ್ನು ಸರಿಮಾಡು. ನನ್ನ ಅಪರಾಧಕ್ಕೆ ತಕ್ಕ ಪ್ರಾಯಶ್ಚಿತ್ತವಾಗಲಿ,” ಎಂದು ಗೋಳುಗುಟ್ಟ

ಕೊಂಡರು. ಕಣ್ಣುನೀರು ಕಾರಿಕಾರಿ, ಕೆಂಪುಹಿಡಿದಿತ್ತು. ಮೂಗೂ, ಭಟ್ಟರ ಮನೋವ್ಯಕ್ತಿಯಂತೆ, ಕಲುಷಿತವೂ ಜಡವೂ, ಆಗಿತ್ತು. ಚೌಕವೆಲ್ಲವೂ ಕಣ್ಣೂ ಮೂಗೂ ವರೆಸಿವರೆಸಿ ಒದ್ದೆಯಾಗಿತ್ತು.

ಮತ್ತೆ ಯೋಚನೆ ಬಂತು. "ಅವನನ್ನು ಕಾಣುವುದೆಲ್ಲಿ?" ತಿರುಗಿಯೂ ಅದೇ ಮಾತು. ತರ್ಕವನ್ನು ತಿಕ್ಕಿಮುಕ್ಕುವ, ಆಳತೆಗೆ ಸಿಕ್ಕದ, ನಂಬಿಕೆಯ ಮಾತು. "ಅವನೇ ಕರೆತರುತ್ತಾನೆ. ಸ್ವಾಮಿಯು ಪರೀಕ್ಷಿಸಿದ. ನಾನು ಸೋತುಹೋದೆ. ನಾನೂ ಸೋತೆನೆಂದು ಒಪ್ಪಿಕೊಂಡೆ ಇನ್ನು ಸ್ವಾಮಿಯೇ ಪರಶಿವನೇ ಅವನನ್ನು ಕರೆದುಕೊಂಡು ಬಂದು ನನ್ನ ಸಾಲವನ್ನು ತೀರಿಸುತ್ತಾನೆ" ಎಂದು ಅಲ್ಲಿಯೇ ಕುಳಿತುಬಿಟ್ಟರು. ಅದಾವಾಗಲೀ ಆವನು ಬರುವವರೆಗೂ ಅಲ್ಲಿಂದ ಕದಲುವುದಿಲ್ಲವೆಂದು ಕುಳಿತುಬಿಟ್ಟರು. ಚಿಂತೆಯು ಅವರ ಅಂತರಂಗವನ್ನು ಹಿಡಿದು ಮುಟೆಕಟ್ಟಿ, ಹಿಂಡಿ, ಹಿಪ್ಪೆಮಾಡಿ, ತನ್ನ ಉಡಿಯೊಳಗೆ ಸಿಕ್ಕಿಸಿಕೊಂಡುಬಿಟ್ಟಿತು; ಅವರಿಗೆ, ಎದುರಿಗ ನಿಂತಿರುವ ಭೀಕರಾಕಾರಿಯೊಬ್ಬನು—ಅವನೆದುರಿಗೆ ಸನ್ಯಾಸಿಗೆ ಪ್ರತ್ಯಕ್ಷನಾದವನೆಂದು ನಂಬಿ ಗೋಳುಗುಟ್ಟುತ್ತಿರುವವನೊಬ್ಬನು. ಈ ಇಬ್ಬರ ವ್ಯಕ್ತಾವ್ಯಕ್ತವಾದ, ಸ್ಫುಟಾಸ್ಫುಟವಾದ ಛಾಯಾರೂಪಗಳು ಅವನ್ನನುಸರಿಸಿ, ಅಳುವ ಸಂತಾಪದ ಸುಡುಸಿಟ್ಟುಸಿರುಗರೆವ ಕ್ಷತವಿಕ್ಷತವಾದ ಅಂತರಂಗ, ಇದು ಬಿಟ್ಟು ಇನ್ನೇನೂ ಕಾಣಿಸುತ್ತಿರಲಿಲ್ಲ

---

## ಆರನೆಯ ಪರಿಚ್ಛೇದ.



ಮರುದಿನದ ಸಾಯಂಕಾಲವಾಯಿತು. ಭಟ್ಟರು ಇನ್ನೂ ಕೊಳದ ದಡದ ಮಂಟಪದಲ್ಲಿಯೇ ಇದ್ದರು. ಆ ದುಃಖದ ತೀವ್ರತೆಯು ಬರುಬರುತ್ತ ಕಡಿಮೆಯಾಗುತ್ತ ಬಂದಹಾಗೆಲ್ಲ, ಭಟ್ಟರ ಮನಸ್ಸು ಚಿತವಾಗುತ್ತ ಬಂದು, "ಆದುದಾಗಲಿ, ಇನ್ನು ಎಂಟುದಿನವೇ ಏಕಾಗಲೊಲ್ಲದು ? ತಿರುಗಿ ಅವನು

ಬಂದು ಈ ಹಣವನ್ನು ಒಪ್ಪಿಸಿಕೊಂಡು ಹೋಗುವವರೆಗೂ ಇಲ್ಲಿಯೇ ಇದ್ದು ಬಿಡುವುದು'' ಎಂಬ ನಿರ್ಧರಕ್ಕೆ ಬಂದುಬಿಟ್ಟಿತ್ತು.

ಸಂಜೆಯಾಯಿತು. ಭಟ್ಟರ ಸಂಧ್ಯಾ ಪಾರಾಯಣಾದಿಗಳು ಮುಗಿದುವು. ಅವರಿಗೆ ಬೇರೆ ಯೋಚನೆಯೇ ಇಲ್ಲ. ''ಅವರು ಬರಲಿಲ್ಲವಲ್ಲ'' ಎಂಬುದೊಂದೇ ಯೋಚನೆ. ಮನಸ್ಸು ಅವರನ್ನು ಕುರಿತು ಯೋಚಿಸಿ ಯೋಚಿಸಿ, ತಾನರಿತಿದ್ದ ಗುರುತುಗಳನ್ನೆಲ್ಲ, ಚಿಂತಿಸಿ ಚಿಂತಿಸಿ, ಆವೃತ್ತಿ ಹಾಕಿ, ಗಟ್ಟಿಮಾಡಿಕೊಂಡಿತ್ತು. ಒಂದುವೇಳೆ ಕಣ್ಣು ತಟ್ಟನೆ ಗುರ್ತಿಸದೆ ಹೋದರೂ, ಕಿವಿಯಾದರೂ ಗುರ್ತಿಸುವುದರಲ್ಲಿ ಏನೂ ಸಂದೇಹವಿರಲಿಲ್ಲ. ಭಟ್ಟರು ಕಾದಿದ್ದಾರೆ. ಬಂದಾರೇ? ಬಂದಾರೇ? ಎಂದು ಕಾದಿದ್ದಾರೆ. ಅಷ್ಟು ಹೊತ್ತಾಯಿತು ಇಲ್ಲ. ಇಷ್ಟು ಹೊತ್ತಾಯಿತು ಇಲ್ಲ. ಕೊನೆಗೆ ಕಾದು ಕಾದು ವ್ಯರ್ಥವಾಗಿ ಹೋಗುವುದೇನೋ? ಈಪೊತ್ತು ಬರುವರೋ ಇಲ್ಲವೋ ಎಂಬ ಸಂದೇಹವು ಹುಟ್ಟುವಷ್ಟು ಹೊತ್ತಾಯಿತು. ಕ್ರಮೇಣ ಸಂದೇಹವೇ ಖಂಡಿತವಾಗಿ ನಿರಾಶೆಯಾಗುವಷ್ಟು ಹೊತ್ತಾಯಿತು.

ಆವೇಳೆಗೆ ಕಾಲುಸಪ್ಪಳವು ಕೇಳಿಸಿದಹಾಗಾಯಿತು. ಮಾತಿನಸದ್ದೂ ಕೇಳಿದಹಾಗಾಗಿ, ಭಟ್ಟರ ಕಿವಿಗಳು ಆಲೈಸಿದವು. ''ಹೌದು, ಯಾರೋ ಬರುವಂತಿದೆ'' ಅವರೇ ಆಗಿದ್ದರೆ?-ಭಟ್ಟರ ಹೃದಯವು ಒಮ್ಮೆ ಸಂತೋಷ ದಿಂದ ನೆಗೆಯಿತು. ಮಾಡಿದ ತಪ್ಪನ್ನು ತಿದ್ದಿಕೊಳ್ಳಲು ಅವಕಾಶ ಕೊಟ್ಟೆಯಲ್ಲ ಸ್ವಾಮಿ! ಎಂದು ತಮ್ಮ ದೇವರಿಗೊಮ್ಮೆ ಕೈಮುಗಿದರು. ಸದ್ದು ಕೇಳಿದು ದಕ್ಕೂ, ಅವರು ಬಂದುದಕ್ಕೂ ಸುಮಾರು ಎರಡು ನಿಮಿಷವಿರಬಹುದು. ಅದಷ್ಟುಕಾಲವೇ ಭಟ್ಟರಿಗೆ ಒಂದು ಯುಗವಾಗಿ ಪರಿಣಮಿಸಿತು. ಕೊನೆಗೆ ಅವರು ಬಂದರು. ಅವರೇ ಹೌದೋ? ಇರಬಹುದು. ಅಲ್ಲದೆ ಹೋದರೆ? ಮತ್ತೆ ಅವರಾಡುವಮಾತು ಕೇಳಿಸಿ, ನಂಬಿಕೆಯಾಯಿತು. ಅವರೇ ಹೌದು.

ನಿನ್ನೆಯದಿನ ಕಳ್ಳರನ್ನು ನೋಡಿದೊಡನೆಯೇ ಮೊದಲಾಗಿದ್ದ ಎದೆ ಹಾರುವಿಕೆಯು ಇಂದು ಇಲ್ಲ. ಅದಕ್ಕೆ ಬದಲಾಗಿ ಅವರು ಬರುತ್ತಲೂ ಅವರನ್ನು ಕಾಣುತ್ತಲೂ, ಸಂತೋಷವಾಗಿದೆ. ಉತ್ಸಾಹವು ಹೆಚ್ಚಿದೆ. ಉಪಕಾರಿಗಳನ್ನು ಕಂಡರೆ, ಕುಣಿಯುವಂತೆ ಬಗೆಯು ಉಬ್ಬುತ್ತಿದೆ.

ನಿನ್ನೆಯದಿನ ಅಂಜಿದವರೂ, ಈದಿನ ಉಬ್ಬುತ್ತಿರುವವರೂ ಒಬ್ಬರೇನೇನು? ಅಥವಾ ಇಬ್ಬರಿದ್ದು ಆಗ ಒಬ್ಬರು ಈಗ ಒಬ್ಬರು ಕಾಣಿಸಿಕೊಂಡರೇನು? ಹಾಗಲ್ಲದೆ, ಒಬ್ಬರೇ ಇದ್ದು, ಸನ್ನಿವೇಶಸಂದರ್ಭಗಳಿಗನುಸಾರವಾಗಿ ಬೇರೆ ಬೇರೆ ಬಣ್ಣಗಳಾಗುವರೋ?

ಭಟ್ಟರೇ ಮುಂದರಿದು ಮಾತನಾಡಿದರು. "ಅಯ್ಯಾ!" ಆಗಂತುಕರಿಗೆ ಆಶ್ಚರ್ಯವಾಯಿತು. ತಾವಾಗಿ ಮಾತನಾಡಿಸಿದರೆ, ಇತರರಿಗೆ ಎದೆ ಝುಗ್ಗೆಂದು, ನಾಲಗೆಯ ಪ್ರವಾರಿ ಮಾತು ಮರೆತುಹೋಗಬೇಕು. ಹೀಗಿರುವಾಗ, ತಾನಾಗಿ ಬಂದು ಮಾತನಾಡಿಸುವವನಾದರೂ ಯಾರು? ಕಾಳಸರ್ಪವೆಂದು ಅರಿತೂ ಕೆಣಕುವವನಾರು? ಈ ವಿಚಿತ್ರವೇನು? ಎಂದು ಬೆರಗಾಗಿಹೋದರು. ಅವರಿಗೆ ಏನು ಹೇಳಬೇಕೋ ತೋರದೆ ಸುಮ್ಮನಿದ್ದರು. ಭಟ್ಟರು ಮತ್ತೂ ಮುಂದರಿದು "ಅಯ್ಯಾ!" ಎಂದರು. ಹಿಂದಿನದಿನ ಭಟ್ಟರನ್ನು ಮಾತನಾಡಿಸಿದ್ದವನು "ನಿನ್ನೆಯ ಹಾರುವಯ್ಯ ಎನ್ನುವಹಂಗಿದೆಕಣಪ್ಪಾ!" ಎಂದನು. ಹಾಗೆನ್ನುತ್ತಲೇ ಇಬ್ಬರ ಚಿತ್ತವೃತ್ತಿಯೂ ಬದಲಾಯಿಸಿತು. ಬಿಗಿದುಕೊಂಡು, ಕೆರಳಿ, ರೌದ್ರವಾಗುತ್ತಿದ್ದ ಬಗೆಯು ತಟ್ಟನೆ ಪ್ರಸನ್ನವಾಗಿ, "ಏನೋ ಒಂದು ಆಟ, ಕೊನೆಯವರೆಗೂ ನೋಡಿಬಿಡೋಣ" ಎಂಬ ಭಾವವು ಖಚಿತವಾಯಿತು "ಅವನು ಏನು ಸೋಮಿ?" ಎಂದನು

ಭಟ್ಟರು ರೆಪ್ಪೆಹೊಡೆಯುವಷ್ಟು ಸುಮ್ಮನಿದ್ದು, ಒಮ್ಮೆ ನಿಟ್ಟುಸಿರು ಎಳೆದುಬಿಟ್ಟು, "ನಿನ್ನೆ ನಾನು ಹಣಕಾಸಿಲ್ಲವೇ ಎಂಬ ಪ್ರಶ್ನೆಗೆ ಹೇಳಿದುದು ಸುಳ್ಳು ಉತ್ತರವಾಗಿ ಇಲ್ಲವೆಂದೆ. ಅದು ಸುಳ್ಳು. ಇದೋ ನನ್ನಲ್ಲಿದ್ದ ಹಣ" ಎಂದು ಒಂದೆರಡು ಕಾಗದಗಳನ್ನು ಕಳ್ಳರಮುಂದೆ ಹಾಕಿದರು. ಕಳ್ಳರ ಕಣ್ಣಿಗೆ, ಆ ಕತ್ತಲಲ್ಲಿಯೂ ಎದುರುಬಿದ್ದಿರುವ ಕಾಗದಗಳು ನೋಟುಗಳು ಎಂಬುದೂ, ಅದರ ಬೆಲೆಯೆಷ್ಟು ಎಂಬುದೂ ಗೊತ್ತಾಯಿತು. ಅವರಿಗೆ ಒಂದುಗಳಿಗೆ ತಲೆತಿರುಗಿದಂತಾಯಿತು.

ಸುಳ್ಳಿನಲ್ಲಿ ವ್ಯವಹಾರಮಾಡಿಮಾಡಿ, ಅವರಿಗೆ ಅದರ ಪರಿಚಯವು ಸಂಪೂರ್ಣವಾಗಿತ್ತು. ನರನಲ್ಲಿಯೂ, ನಾಯಿಯಲ್ಲಿಯೂ, ಆನೆಯಲ್ಲಿಯೂ,

ಸೊಳ್ಳೆಯಲ್ಲಿಯೂ ವ್ಯಾಪಿಸಿಕೊಂಡು ವಿಶ್ವವನ್ನೇ ಬೆಳಗುರಿಯಂತೆ, ಆಡಿಸು
ತ್ತಿರುವ ಪರತತ್ತ್ವವನ್ನು ಕಂಡು, ಯಾವುದೊಂದು ಹೆಚ್ಚುಗಾರಿಕೆಗಳನ್ನು
ಹೊಂದದೆ, ತಮ್ಮ ವ್ಯಾಪಾರಕ್ಕೆ ತಾನು ಮಗ್ನನಾಗಿರುವ ಪಂಡಿತನಂತೆ ಆ
ಕಳ್ಳರೂ, ತಮ್ಮ ನಿತ್ಯವ್ಯಾಪಾರದಲ್ಲಿ ಸುಳ್ಳುಹೇಳುವವರನ್ನು ಕಂಡು ಕಂಡು,
ಹೇಳುವುದೆಲ್ಲ ಸುಳ್ಳು ಎಂಬ ನಿಶ್ಚಿತನಾದರ್ಥವನ್ನು ಕಂಡುಕೊಂಡು ತಮ್ಮ
ವ್ಯಾಪಾರದಲ್ಲಿ ತಾವು ಪ್ರವೃತ್ತರಾಗಿದ್ದರು. ಆದರೆ ನಾನು ಹೇಳಿದುದು
ಸುಳ್ಳೆಂದು ಹೇಳುವವರ ಪರಿಚಯವು ಮಾತ್ರ ಇರಲಿಲ್ಲ. ಅವರಿಗೆ ಅಂತಹ
ಅಭ್ಯಾಸವಿಲ್ಲವಾಗಿ, ಅವರು ಅದನ್ನು ಗ್ರಹಿಸಲಾರದೆಹೋದರು. ಅಪರೂಪ
ವಾದ ವಸ್ತುವು ಎದುರಿಗೆ ಬಂದಾಗ, ಅದರ ಸ್ವರೂಪವನ್ನರಿಯಲಾರದೆ ಬೆರ
ಗಾಗುವ ಮನವು ಒಂದುಗಳಿಗೆ ಮೂಕವಾಗುವಂತೆ, ಅವರು ಬೆಪ್ಪಾದರು.
ಅವರಿಗೆ ಏನು ಹೇಳಬೇಕೆಂಬುದು ತಿಳಿಯುವುದಿರಲಿ ಭಟ್ಟರು ಹೇಳಿದುದು
ಅರ್ಥವಾಗಲಿಲ್ಲ. ಅವರ ಅರಿವಿಗೆ, ಆ ಮಾತಿನ ಅರ್ಥವು ಸಿಲುಕಲಿಲ್ಲ.
ಅವರು ಮಾಡಿದುದು ಏನು ಎಂಬುದು ತಿಳಿಯಲಿಲ್ಲ. ಗೊತ್ತಾಗಲಿಲ್ಲ.

ಆದರೂ, ಆ ಅರ್ಥವು ಮಾತ್ರ ತನ್ನ ಪ್ರಭಾವವನ್ನು ತೋರಿಸದೆ
ಬಿಡಲಿಲ್ಲ. ಸತ್ವಗುಣ ಪ್ರಧಾನವಾಗಿ, ನೋಡುವವರ ಮನಸ್ಸಿಗೆ ತನ್ನಲ್ಲಿ
ರುವ ಸತ್ಯತೆಯನ್ನು ಪ್ರಕಾಶವಾಗಿ ತೋರಿಸುವ ಭಟ್ಟರ ಮುಖವು, ಬೇರೆ
ಪ್ರಶ್ನೆಗಳಿಗೆ ಅವಕಾಶವನ್ನು ಕೊಡದೆ, ಆಡಿದ ಆ ಮಾತು ದಿಟವೆಂದು ಕೇಳು
ವವರ ಮನಸ್ಸಿಗೆ ಖಂಡಿತನಾಗುವ ಹಾಗೆ ಮಾಡಿಬಿಟ್ಟಿತು. ಕಳ್ಳರು ಪರ
ವಶರಾದಂತೆ, ಬುದ್ಧಿಯನ್ನು ಇನ್ನೊಬ್ಬರಲ್ಲಿ ಒತ್ತೆಯಿಟ್ಟು ಪರಾಧೀನರಾಗಿ
ರುವ ಮೋಹಭ್ರಾಂತರಂತೆ, ತಬ್ಬಿಬ್ಬಾಗಿ ನಿಂತುಕೊಂಡರು. ಅಭ್ಯಾಸಾನು
ಸಾರವಾಗಿ, ಕೈಯನ್ನು ಚಾಚಿ, ದೇವಸ್ಥಾನದ ಕಡೆಗೆ ಹೋದರೂ, ಅದರಲ್ಲಿ
ಎಂದಿನಂತೆ ಉಗ್ರಕಾರ್ಯದ ಸಂಪ್ರದ್ವೇಷವಿರಲಿಲ್ಲ. ಕಣ್ಣು ಅಂಗೈಯ
ಗಲವಾಗಿ ತೆರೆದಿದ್ದರೂ, ಅವರಲ್ಲಿ ಕ್ರೌರ್ಯದ ಕೆಟ್ಟಬುದ್ಧಿಯಿರಲಿಲ್ಲ. ಆಶ್ಚರ್ಯ
ತರಂಗಿಣಿಯಲ್ಲಿ ಕೊಚ್ಚಿಹೋಗಿ, ನೆಲವನ್ನರಿಯದೆ ಅಲೆವ ಅವರ ಮನವು
ಮೌನವಾಗಿಹೋಗಿ, ಮೌನವನ್ನವಲಂಬಿಸಿ, ನಿಶ್ಶಬ್ದವಾಗಿ, ನಿಶ್ಚಲವಾಗಿ
ಭಟ್ಟರಿಗೆ ಏಕೆ ಏನು ಎಂಬುದನ್ನು ಅರಿಯದೆ, ಮೆಚ್ಚುಗಾಣಿಕೆಯನ್ನು,

ಕೊಟ್ಟು, ತಾವಾಗಿ ಮುಗಿದ ಕೈಗಳಿಂದ, ತಮ್ಮಂತರಂಗವನ್ನು ಒಪ್ಪಿಸಿ ಬಿಟ್ಟರು. ಕಣ್ಣಿಂದ ಉದುರುವ ನೀರೇ ದಾ[illegible]ವಾಯಿತು.

ಅಷ್ಟು ಹೊತ್ತು ಉಭಯರೂ ಮಾತನಾಡಲಿಲ್ಲ. ಭಟ್ಟರಿಗೆ ಎದೆಯನ್ನು ಕೊರೆಯುತ್ತಿದ್ದ ಕರೆಕರೆಯು ತೀರಿತೆಂದು ಹಿ[illegible]ವನ್ನು ಸಂತೋಷವಾಗಿ, ಆ ಸಂತೋಷದ ಭರದಲ್ಲಿ, ದುಃಖದ ಭಾರವು ಜಾರಿದ ಉತ್ತರಕ್ಷಣದಲ್ಲಿ ತೋರುವ ಆ "ಉಸ್ಸಪ್ಪಾ" ಭಾವದಲ್ಲಿ ನಿದ್ರೆಯು, ಕೊಂಚ ಬಾಗಿದೆ. ಭಾವವು ಸುಖಲೀನವಾಗಿ ಆನಂದಮಯವಾಗುತ್ತ ಕಣ್ಣೀರಿನಿಂದ ದುಃಖದ ಭಾರದೊಡನೆ, ಇರುವ ದೇಹದ ಭಾರವನ್ನು ಒಪ್ಪಿಸಿದಂತೆ ಒಳಗಿರುವವರು ಯಾರೋ ಮಾಡುತ್ತಿರುವ ಯತ್ನದ ಫಲವಾಗಿ, ಒದಗಿ ಬಾಗುತ್ತ ಬಂತು. ನಿದ್ದೆಯು ಝೊಂಪಿಸಿಲ್ಲದಿದ್ದರೂ, ಸಿದ್ಧನಿದ್ರೆಯ ನರ್ತನದ ಪೂರ್ವರಂಗಪ್ರಸಾಧನದಲ್ಲಿ ತಲೆದೋರುವ ತೂಕಡಿಕೆಯಲ್ಲಿ ಶರೀರವು ಅಜ್ಞಾತವಾಗಿ, ವಿವಶವಾಗಿ, ಬಾಗುವಂತೆ ಬಾಗುತ್ತಿರಲು, ಹೊದಿಸಿದ ಉತ್ತರೀಯವೂ ಸಂತೋಷದ ಆವೇಶದಲ್ಲಿ ವಿವಶವಾದಂತೆ ಜಾರಿತು. ಹಿಮಪರ್ವತಗಳಲ್ಲಿ ಜಾರಿ ಜಾರಿ ಕೆಳಕ್ಕಿಳಿಯುವ ಮಂಜುಗಡ್ಡೆಯ ನದಿಯಂತೆ, ಹೊದೆದಿದ್ದ ಉತ್ತರೀಯವೂ ಧಾವಳಿಯೂ ಜಾರುತ್ತಿರಲು, ಭಟ್ಟರ ಅಂಗಕಾಂತಿಯೂ, ತೋಳಮೇಲಿನ ಸ್ಫಟಿಕದ ಮಣಿಗಳೂ ವಿಭೂತಿಯೂ ಎದ್ದು ಕಂಡು ಕಳ್ಳರ ಕಣ್ಣನ್ನು ಚಮಕಿಸಿದವು.

ಕಳ್ಳರ ಮನಸ್ಸಿನಲ್ಲಿ ಒಮ್ಮೆ, ಅಜ್ಞಾತವಾಗಿ ಅರಿವಿಗೆ ಸಿಲುಕದ ಯಾವುದೋ ಸನ್ನಿಧಾನದಲ್ಲಿ, ತಾವು ಎದುರು ಕ್ರಿಮಿಗಳು ನಿಂತಿರುವಂತೆ ಭಾಸವಾಯಿತು. ಅವರಿಗೆ ಇದುವರೆಗೂ ಅಪರಿಚಿತವಾಗಿದ್ದ ಯಾವುದೋ ಭಾವವು ಮೂಡಿ, ಅವರನ್ನು "ಷರಗು" ಒಡೆದುಬಿಟ್ಟು, ಅವರ ಕಾಳಕರ್ಮದ ಆಳವನ್ನು ಅವರಿಗೇ ತೋರಿಸಿ, ಅವರೇ ಅಂಜುವಂತೆ ಮಾಡಿಬಿಟ್ಟಿತು. ಕಳ್ಳರು ವಿಚಾರದ ಹೆಸರಿಲ್ಲದಿದ್ದರೂ, ಪಶ್ಚಾತ್ತಾಪಕ್ಕೆಡೆಯಿಲ್ಲದ ರೀತಿಯಲ್ಲಿ, ಅಂತರಂಗವನ್ನು ಒಪ್ಪಿಸಿದವರು ನಡೆದುಕೊಳ್ಳುವ ರೀತಿಯಲ್ಲಿ, ಭಕ್ತಿಯ ಭರದಿಂದ ಆತ್ಮಾರ್ಪಣ ಮಾಡಿದವರು ವರ್ತಿಸುವ ಭಂಗಿಯಲ್ಲಿ, ಮೃದುವಾಗಿ, ನಯವಾಗಿ, ಮೆತ್ತಗಾಗಿ, ಮೆಲ್ಲಗೆ, ಅರಿಯಬಾರದ ಅಳುಕಿನ ಅಂಕುಶದ

ಆಳ್ವಿಕೆಗೆ ಒಳಗಾಗದವರಂತೆ, ಬಾಗಿ, ತಮ್ಮ ಮೈಯನ್ನಿಟ್ಟರು ಭಟ್ಟರ ಚರಣ ತಲದಲ್ಲಿ. ರೆಪ್ಪೆಹೊಯ್ಯುವಷ್ಟರಲ್ಲಿ, ಕಳ್ಳರಿಬ್ಬರ, ಅಥವಾ ಕಳ್ಳರೆನ್ನಿಸಿ ಕೊಂಡವರ, ದೀರ್ಘದೇಹಗಳು ಭೂಶಾಯಿಗಳಾಗಿ, ಆ ಕಲ್ಲುಮುಳ್ಳುಗ ಳನ್ನು ಗಮನಿಸದೆ ಭಟ್ಟರಿಗೆ ದಂಡಪ್ರಣಾಮವನ್ನೆಸಗಿದ್ದುವು.

---

## ಏಳನೆಯ ಪರಿಚ್ಛೇದ

ಉತ್ತರೀಯವು ಜಾರಿ, ಚಳಿಗಾಳಿಯು ತಗಲುತ್ತಲೂ, ಮೈಯ್ಯು ನವಿರೆದ್ದು, ಭಟ್ಟರಿಗೆ ವೃತ್ತಿಯೂ ಬಹಿರ್ಮುಖವಾಯಿತು. ನೋಡಿದರೆ, ಅವರಿಬ್ಬರೂ ತಮ್ಮ ಪದತಲದಲ್ಲಿ ಪ್ರಣಾಮ ಮಾಡುತ್ತಿದ್ದಾರೆ. ಭಟ್ಟರಿಗೆ ಅಂತಹ ಸ್ಥಿತಿಯಲ್ಲಿ ಹೇಗೆ ವರ್ತಿಸಬೇಕೆಂಬುದು ಚಿರಪರಿಚಿತವಾದ ವಿಷಯ. ಕೂಡಲೇ, ತಮ್ಮ ಮನೆಯಲ್ಲಿ, ಇಷ್ಟಬಂಧುಪರಿವಾರದ ಮಧ್ಯದಲ್ಲಿ ಇರು ವಾಗ, ಪ್ರಕಟವಾಗುವ ಸಾರಳ್ಯವು ತಲೆದೋರಿ, ‹‹ ಇದೇನು ? ನೀವು ಏನುಮಾಡಲು, ಹೊರಟಿರಿ ? ನನ್ನ ಸುಳ್ಳಿಗೆ ಪ್ರಾಯಶ್ಚಿತ್ತಮಾಡಿಕೊಳ್ಳ ಬೇಕೆಂದು ನಾನು ಬಂದರೆ, ನೀವೇ ನನಗೆ ಅಡ್ಡಬೀಳುವುದೇ? ಏಳಿ, ಏಳಿ, ಚೆನ್ನಾಯಿತು. ಈ ನಾಯಿಯು ಮಾಡಿದ ಪಾಪಕ್ಕೆ ತಕ್ಕಪ್ರಾಯಶ್ಚಿತ್ತ ವಾಗಿ, ಈ ಹಾಳು ಮನಸ್ಸಿಗೆ ಶಾಂತಿಯಾಗಲಿ. ಚೆನ್ನಾಯಿತು. ಏಳಿ, ಏಳಿ !'' ಎಂದು ಅವರಿಬ್ಬರನ್ನು ಮುಟ್ಟಿ ಎಬ್ಬಿಸಿದರು. ಭಟ್ಟರಿಗೆ ಅರಿವು ನೆರವಾಗಿತ್ತು. ಆದರೂ ಅವರು ವರ್ಣಹೀನರೆಂಬುದು ಅವರಿಗೆ ಬರಲಿಲ್ಲ.

ಕಳ್ಳರು ಎದ್ದರು. ವಿದ್ಯಾವಿನಯ ಸಂಪನ್ನನಾದ, ಕುಲೀನನಾದ ಪುತ್ರನು, ತಂದೆಯ ಬಳಿಯಲ್ಲಿ ತೋರುವ ನಯಭಯ ಭಕ್ತಿಗಳಿಂದ ‹‹ ನಮ್ಮಪ್ಪ ! ನೀನು ಯಾರು ? ಈ ಕಲಿಗಾಲದಲ್ಲೂ ಇಂತಹ ಸತ್ಯವಂತ ರುಂಟೆ ? ಹಣವು ನಿನ್ನದೋ ನಮ್ಮಪ್ಪ ! ನಾವು ಅದನ್ನು ಕಿತ್ತುಕೊಳ್ಳು ವುದಕ್ಕೆ ಬಂದ ಕಳ್ಳರು. ನಿನ್ನ ಹಣವನ್ನು ನೀನು ಕಾಪಾಡಿಕೊಳ್ಳಲು

ನನ್ನಲ್ಲಿ ಹಣವಿಲ್ಲವೆಂಬುದು ತಪ್ಪು ಹೇಗೆ? ಪಾಪ ಹೇಗೆ? ಅದಕ್ಕೆ ಏನು ಪ್ರಾಯಶ್ಚಿತ್ತ? ಇದೇನಪ್ಪ ಈ ಹೊಸ ಆಟ ಕಟ್ಟಿ, ನಮ್ಮ ಕಣ್ಣು ಬಿಚ್ಚು ವುದಕ್ಕೆ ನೀನೆಲ್ಲಿಂದ ಬಂದೆಯಪ್ಪ!" ಎಂದರು. ಭಟ್ಟರು, ಅಕೃತ್ರಿಮ ವಾದ, ಸರಳವಾದ, ಕಾಪಟ್ಯದ ಸೋಂಕಿಲ್ಲದ, ಋಜುವಾದ, ಆ ಅಂತ ರಂಗದ ಆಟದಿಂದ ದಿಟವಾಗಿಯೂ ತೃಪ್ತರಾದರು ಅವರ ಅಂತಃಕರಣವೂ ಆ ಎದುರಾಳಿಗಳ ನಿಷ್ಕಪಟವರ್ತನವನ್ನು ಕಂಡು, ಅಥವಾ ನಿರ್ಮಲವಾದ ತನ್ನ ಭಾವವನ್ನು ಕನ್ನಡಿಯಂತೆ ಪ್ರತಿಬಿಂಬಿಸಿ ತನಗೆ ತೋರುತ್ತಿರುವ ಆ ಬಡಪಾಯಿಗಳ ವ್ಯಾಪಾರವನ್ನು ಕಂಡು, ಒಳಗೊಳಗೆ ಮೆಚ್ಚಿ, ಸತಿಯ ಸದ್ವರ್ತನದಿಂದ ತೃಪ್ತನಾಗಿ ತನ್ನನ್ನು ಆಕೆಯ ವಶಕ್ಕೊಪ್ಪಿಸಿಕೊಂಡು ಇನ್ನೂ ತೃಪ್ತನಾಗುವ ಪತಿಯಂತೆ, ಅವರ ವಶವಾಯಿತು.

ಹೊಸ ಮೆಚ್ಚಿನ ಭರದಲ್ಲಿ, ಕುಂದು ಕೊರತೆಗಳನ್ನು ಕಾಣದೆ, ಕೂರ್ಮೆಯು ತಾನೇತಾನಾಗಿ ಹರಿಯುತ್ತಿರುವ ಕಾಲದಲ್ಲಿ, ಸ್ನೇಹವು ಉಕ್ಕಿ ಉಕ್ಕಿ ಜಗತ್ತಿಗೇ ಹೊಸಬಣ್ಣ ಕಟ್ಟಿ, ನೋಡುವ ಕಣ್ಣಿಗೆ ಹಬ್ಬವಾಡುತ್ತಿ ರುವ ಸಂದರ್ಭದಲ್ಲಿ, ಯಾವುದೋ ಒಂದು ಗುಣವನ್ನು ಕಂಡು, ಅದರ ಮೇಲಿನ ಲೋಭದಿಂದ ಹುಟ್ಟಿದ ಮೋಹವನ್ನು, ಪ್ರತ್ಯಾಶೆಯನ್ನು ಗಾಢದ ಪವಿತ್ರ ಪ್ರೇಮವೆಂದು ಭ್ರಾಂತಿಗೊಂಡು ವರ್ತಿಸುವ ಕಾಲದಲ್ಲಿ, ಆಡುವ ಮಾತುಗಳು ಇಬ್ಬರಿಗೂ ನಡೆದುವು. ಕೊನೆಗೆ ಭಟ್ಟರು ಕಳ್ಳರ ಊರಿಗೆ ಬಂದೇ ತೀರಬೇಕೆಂದು, ಅಲ್ಲಿ ಎರಡುದಿನ 'ಅವರು ಹೇಳಿದಂತೆ' ಅವರ ಮನೆಯಲ್ಲಿದ್ದು ಕುಲವನ್ನೆಲ್ಲ ಉದ್ಧಾರಮಾಡಿ ಹೋಗಬೇಕೆಂದು ಗೊತ್ತಾ ಯಿತು. ಆ ಕಳ್ಳರ ಉಪಚಾರವು, ಅವರ ಸದ್ವರ್ತನೆಯು ಭಟ್ಟರ ಅಂತ ರಂಗವನ್ನು ಸೆರೆಹಿಡಿಯಿತು. ಭಟ್ಟರು 'ಹೂ ಆಗಲಿ' ಎಂದರು. ಕಳ್ಳರ ಆತಿಥ್ಯವನ್ನು ಒಪ್ಪಿಸಿದೆಯಾ? ಎಂದು ಒಂದು ಸಣ್ಣ ಕೂಗು ಕಿವಿಗೆ ಕೇಳಿ ಸಿತು. ಆದರೂ, ಅವರಿಗೆ ಅದೇ ಕುಲವೃತ್ತಿ. ಅಲ್ಲದೆ ಅವರೂ ಸಭ್ಯ ರಾಗಿದ್ದಾರೆ ಎಂದು ಮತ್ತೊಂದು ಸಮಾಧಾನವೂ ಒದಗಿತು. ಹೀಗೆ ಪೂರ್ವಪಕ್ಷ ಸಮಾಧಾನ, ಸಿದ್ಧಾಂತಗಳಾಗುವುದರಲ್ಲಿ, ಭಟ್ಟರು, ಅವ ರಿಬ್ಬರ ಜೊತೆಯಲ್ಲಿ ಅಥವಾ ಅವರು ಹಿಂದಿನಿಂದ ತೋರಿಸಿದ ಹಾದಿಯಲ್ಲಿ

ಮುಂದಾಳುಗಳಾಗಿ, ಹೋಗುತ್ತಿದ್ದರು. ಭಟ್ಟರ ಅರಳು ಹಿಟ್ಟು ಅವಲಕ್ಕಿಯ ಮೂಟೆಯು ಕನ್ನಸೊಪ್ಪನ ಭುಜವನ್ನೇರಿತ್ತು.

ಭಟ್ಟರೂ ಇದಲ್ಲವೇ ಪರಮಾತ್ಮನ ಲೀಲೆ-ಕಿಚ್ಚಿಟ್ಟು, ಊದಿ ಉರಿಯೆಬ್ಬಿಸಿ, ಅದು ಒಳಗು ಹೊರಗನ್ನೆಲ್ಲ ವ್ಯಾಪಿಸಿ, ಎಲ್ಲವನ್ನೂ ಬೇಯಿಸಿದಾಗ, ಕಾಳ ಮೇಘವನ್ನು ಕಳುಹಿಸಿ ಅಮೃತ ವರ್ಷವನ್ನು ಕರೆದು ಹೊಸ ಸೃಷ್ಟಿಯನ್ನು ಹುಟ್ಟಿಸುತ್ತೀಯ! ಅಯ್ಯಾ! ಇದರಿಂದಲೇ ನೀನು ಸರ್ವಶಕ್ತ! ನಾವು ಅಶಕ್ತರು, ನೀನು ಆಟವನ್ನು ಹೂಡಿರುವೆಯಯ್ಯಾ! ಈ ಆಟದ ಮೊದಲು ತುದಿಗಳನ್ನು ತೋರಿಸದೆ, ನಿನ್ನ ಮನಸ್ಸಿಗೆ ಬಂದಂತೆ, ಎಲ್ಲರನ್ನು ಕುಣಿಸುವೆಯಲ್ಲಾ! ಇದರಿಂದ ನಿನಗೇನು ತೃಪ್ತಿಯಯ್ಯಾ? ಎಂದು ಹರಿಯುವ ಮಾಯಾ ಪ್ರಪಂಚ ಚಿತ್ರವನ್ನು ಪರಿಭಾವಿಸುತ್ತ ಕಳ್ಳರಿಗಿಂತಲೂ ಜಾಗ್ರತೆಯಾಗಿಯೇ ನಡೆದರು.

ಸುಮಾರು ಹತ್ತು ಗಂಟೆಯ ಸಮಯ ಇರಬಹುದು. ಕಳ್ಳರು "ಅಪ್ಪ ಎಡಗಡೆಗೆ ತಿರುಗಿಕೊಳ್ಳಿ" ಎಂದರು. ಭಟ್ಟರ ಯೋಚನಾತರಂಗವು ಭಂಗವಾಗಿ, ಅವರಲ್ಲಿಯೇ ನಿಂತು, ಅವರು ಹೇಳಿದುದು ಅರ್ಥವಾಗದೆ, "ಆ" ಎಂದರು. ಆ ವೇಳೆಗೆ ಸರಿಯಾಗಿ ಅಷ್ಟು ದೂರದಲ್ಲಿ ಒಂದು ನಾಯಿಯು ಬೊಗಳಿತು. ಭಟ್ಟರ "ಊರು ಬಂತೋ?" ಎಂಬ ಪ್ರಶ್ನೆಗೆ, ಒಬ್ಬನು "ಹೂ! ಕಾಣಪ್ಪ" ಎಂದನು. ಅವನ ಕಣ್ಣು ಆ ಬೇಲಿಯಿಂದಾಚೆ ನಿಧಾನವಾಗಿ ಚಲಿಸುತ್ತಿರುವ ಏನೋ ಒಂದನ್ನು ಕಂಡು, ಅವನು ತಟ್ಟನೆ ಅವಹಿತನಾಗಿ, ನಿಂತು, ಮಗ್ಗುಲಲ್ಲಿರುವವನನ್ನು ಮುಟ್ಟಿ, ಅದನ್ನು ತೋರಿಸಿದನು. ಎರಡನೆಯವನು, ಅಪ್ರತಿಹತವಾಗಿ, ಅಂತರಾಯವನ್ನು ಕಾಣದೆ ಬದಲಾಯಿಸುವ ಪ್ರಭುತ್ವಕ್ಕೆ ಗುರುತಾದ ದೋರಣೆಯ ದಪ್ಪದಾದರೂ ಒರಟಿಲ್ಲದ ಗಂಭೀರ ಧ್ವನಿಯಿಂದ "ಯಾರು?" ಎಂದನು

ಆ ವ್ಯಕ್ತಿಯು ಸರಳವಾದ, ಮೃದುವಾದ, ಕೋಮಲವಾದರೂ ಸ್ಫುಟವಾದ, ದೃಢವಾದ, ಅಳಿಯದ ಸ್ವರದಿಂದ, "ನಾನು" ಎಂದಿತು. ಕೂಡಲೇ ಪ್ರಚ್ಛಕನ ಭಾವವು ಅತ್ಯಂತ ಕೋಮಲವಾಗಿ, ವಾತ್ಸಲ್ಯದ

ಮಾರ್ದವದಿಂದ ಸುಂದರವಾಗಿ, “ ಬಸವಿ ” ಯೆಂದಿತು. ಕೂಡಲೇ ಅವಳನ್ನು ಕೂಗಿ ಅವನು “ ಚಾವಡಿಯಲ್ಲಿ ಬೆಳಕು ಮಾಡಿ, ಕಸ ಆರಿಸಿ, ಚಾಪೆ ಬಿಡು, ಅಯ್ಯನವರು ಬಂದವರೆ” ಎಂದನು. ಅವಳು, ಕೆಲದಿನದಿಂದ ನೊಗವನ್ನು ಕಾಣದೆ ಕತ್ತು ಬಲಿತ ಎತ್ತು ಮತ್ತೆ ನೊಗವನ್ನಿಟ್ಟಾಗ ಮಿಡಕುವಂತೆ ಮಿಡುಕಿ, ಹೋಗುತ್ತಿದ್ದವಳು ನಿಂತು, ಹಿಂತಿರುಗಿನೋಡಿ ಮತ್ತೆ ಹೊರಟು ಹೋದಳು. ಮಾತನಾಡಿದವನು ಇನ್ನೂ ಏನೋ ಹೇಳಬೇಕೆಂದು ಹೊರಟಿದ್ದು, ಹಾಗೆಯೇ ಸಣ್ಣ ನಗುವಿನಲ್ಲ ಎಲ್ಲವನ್ನೂ ಮುಗಿಸಿ ಸುಮ್ಮನಾದನು.

ಇಷ್ಟರಷ್ಟು ಹೊತ್ತಿನೊಳಗಾಗಿ ಭಟ್ಟರು ಚಾವಡಿಯಲ್ಲಿ ಹಾಸಿದ ಚಾಪೆಯ ಮೇಲೆ ಕುಳಿತಿದ್ದರು. ಹಸನಾಗಿ ಕಾದು ಗಮುಗಮಾಯಿಸುತ್ತಿದ್ದ ಹಾಲು, ಒಂದು ತಂಬಿಗೆಯಲ್ಲಿ ಅವರ ಮುಂದಿತ್ತು. ಅವರ ಕಣ್ಣು ಅತ್ತಿತ್ತ ಅಲೆಯುತ್ತ, ಅಲ್ಲಿ, ಆಚೆಯ ಕಡೆಗೆ, ವಿಭೂತಿಯ ಗೆರೆಗಳಿಂದ ಮೆರೆಯುವ ವಿಶಾಲ ಫಾಲದವಳೊಬ್ಬಳು ಅರೆದೆರೆಗಿದ ಮೆಯ್ಯೋಲವಿನಲ್ಲಿ ನಿಂತು ತಮ್ಮ ಕಡೆ ನೋಡುತ್ತಿರುವುದನ್ನು ಕಂಡರು. ಇಬ್ಬರ ಕಣ್ಣೂ ಸೇರಿ, ಒಬ್ಬರ ನೋಟವನ್ನು ಒಬ್ಬರ ನೋಟವು ತಡೆಯಿತು. ವಿದ್ಯುತ್ತಿನ ಶಾಖೆಯು ತಟ್ಟಿದಂತೆ, ಇಬ್ಬರಿಗೂ ಮೆಯ್ಯು, ಥಟು ಹೊಡೆದಂತೆ, ನಡುಗಿತು

ಯೇಕೆ? ಏನು? ಎಂಬುದು, ಮುಗ್ಧೆಯಾದ ಅವಳಿಗಂತೂ ತಿಳಿಯಲಿಲ್ಲ ಹೋಗಲಿ, ವಿದ್ಯಾವಂತರಾದ ವಾದಜನಸನರಾಂಕುಶರೆಂದು ಹೆಸರಾಂತ ಭಟ್ಟರಿಗಾದರೂ ಅರ್ಥವಾಯಿತೇನು ? ಆದಂತೆ ತೋರಲಿಲ್ಲ.



## ಎಂಟನೆಯ ಪರಿಚ್ಛೇದ.



ಆ ಪುರಿನಲ್ಲಿ ಶಿವದೇವಾಲಯವೊಂದುಂಟು. ತಮ್ಮಡಿಯು ದಿನದಲ್ಲಿ ಯಾವಾಗಲಾದರೂ ಒಂದು ಸಲ ಬಂದು ಪೂಜೆಮಾಡಿ ಹೋಗುವನು.

ಮಿಕ್ಕವೇಳೆಯಲ್ಲೆಲ್ಲಾ ಆ ವೂರಿನ ಬಸವಿ, ಗೌರಿಯೇ ಅಲ್ಲಿದ್ದು ಸೇವೆಮಾಡು ವಳು. ದೇವರಿಗೆಂದು ಬಿಟ್ಟ ಆ ಬಸವಿಯು ದೇವರವಳೇ ಆಗಿಹೋಗಿದ್ದಳು. ಅವಳಿಗೆ ಆವೂರಲ್ಲಿ ತೌರುಮನೆಯುಂಟು. ಆದರೆ ತವರ್ಮನೆಗೆ ಹೋಗಿ ವರ್ಷಾಂತರಗಳಾಗಿತ್ತು. ಮೊದಮೊದಲು ಊಟಕ್ಕೆ ಹೋಗುತ್ತಿದ್ದಳು. ಬರುಬರುತ್ತ ಅದೂ ತಪ್ಪಿಹೋಯಿತು. ತಂದೆತಾಯಿಗಳು ಶಿವನಿಗೆ ಒಂದು ಗದ್ದೆಯನ್ನು ಒಪ್ಪಿಸಿದರು. ಅದರಲ್ಲಿ ಬರುವ ಭತ್ತವನ್ನು ತಮ್ಮಡಿಯು ತೆಗೆದುಕೊಳ್ಳುವನು. ಅವನು ನಿತ್ಯವೂ ನೈವೇದ್ಯಕ್ಕೆ ತರುವ ಮೊಸರನ್ನ ವನ್ನು ಅವಳಿಗೆ ಕೊಟ್ಟುಬಿಡುವನು. ಕೆಲವುದಿನ ಮನೆಯಿಂದ ಉದಕ ವನ್ನು ತಂದುಕೊಳ್ಳುತ್ತಿದ್ದಳು. ಒಂದು ದಿನ, ಶಿವನಿಗೆ ಒಪ್ಪಿಸದ ಉದಕ ವನ್ನು ತಾನು ಹೇಗೆ ತಿನ್ನುವದು ಎನ್ನಿಸಿತು. ಅಂದಿನಿಂದ ಅದೂ ತಪ್ಪಿ ಹೋಯಿತು. ದಿನಕ್ಕೊಂದುಸಲ ಅಷ್ಟು ಮೊಸರನ್ನವನ್ನು ತಿನ್ನುವಳು. ಅವಳ ಆಸ್ತಿಯೆಲ್ಲವೂ ಒಂದು ರುದ್ರಾಕ್ಷಿಸರ, ಎರಡು ಸೀರೆ, ಒಂದು ಚೊಂಬು, ಒಂದು ವಿಭೂತಿಯ ಬುರುಡೆ. ಅವಳ ಕಾರ್ಯವಾದರೂ ಹೆಚ್ಚಿಗೆ ಯಿಲ್ಲ. ಬೆಳಗೆದ್ದು ಮುಖವನ್ನು ತೊಳೆದುಕೊಂಡು, ದೇವಸ್ಥಾನದಲ್ಲಿ ಕಸ ವನ್ನು ಗುಡಿಸಿ, ಸಾರಿಸಿ, ರಂಗವಲ್ಲಿ ಹಾಕಿ, ಕೆರೆಗೆ ಹೋಗುವಳು. ಅಲ್ಲಿ ಮಿಂದು ಉಟ್ಟಬಟ್ಟೆಯನ್ನೊಗೆದುಕೊಂಡು ಹೊರಟುಬಂದು ತನಗೆ ತೋರಿ ದಷ್ಟು ಹೊತ್ತು ಶಿವನಾಮವನ್ನು ಜಪಿಸುತ್ತಾ ಕುಳಿತಿರುವಳು. ಮತ್ತೆ ಸಂಜೆಗೆ ಹೋಗಿ ಮಿಂದು ಬರುವಳು. ಮತ್ತೆ ಶಿವಕೀರ್ತನಗಳನ್ನು ಹಾಡಿ ಕೊಳ್ಳುತ್ತಾ ಕುಳಿತುಕೊಳ್ಳುವಳು. ರಾತ್ರಿ ಎಷ್ಟು ಹೊತ್ತಾದರೂ ಆಗಲಿ ಅವಳ ಕೀರ್ತನವು ನಡೆದೇ ಇರುವುದು. ದೇವಾಲಯದ ಮೊಂಕುದೀಪ ದಲ್ಲಿ, ಇದ್ದ ಆ ನಾಲ್ಕಾರು ಕಂಭಗಳ ನೆರಳುಗಳು, ಕುಣಿಯುವ ದೀಪ ಶಿಖೆಯೊಡನೆ ಕುಣಿಯುವುದನ್ನು ಕಂಡು, ಶಿವನು ತನಗೆ ಒಲಿದನೆಂದು ಕೊಳ್ಳುವಳು. ಅರೆಮುಚ್ಚಿದ್ದ ಆ ಕಣ್ಣುಗಳಲ್ಲಿ ನೀರುತುಂಬಿ, ಆ ನಂದಾ ಧಿಕ್ಯದಿಂದ ಮೈಮರೆತು ಹಾಗೆಯೇ ಬರಹಿಕೊಳ್ಳುವಳು. ಇದು ಅವಳ ದಿನ ಚರ್ಯೆ.

ಅವಳ ವಿಚಾರವಾಗಿ ಹೇಳಬೇಕೆಂದರೆ ಹುಡುಗಿಯು ರೂಪವಂತೆ. ಹಳ್ಳಿಯವಳು; ಇರುಸರಿಕೆಯನ್ನರಿಯದವಳಾದರೂ, ನಾಗರಿಕ ಸ್ತ್ರೀಯ

ಕೃತಕ ಸೌಂದರ್ಯದ ಸೊಂಕಿಲ್ಲವಾದರೂ, ಚೆಲುವೆ. ಮೂರು ಎಳೆಯ ವಿಭೂತಿಯು ವಿರಾಜಿಸುತ್ತಿರುವ, ಅಗಲವಾದರೂ ಗಂಡು ಕಳೆಯನ್ನು ತೋರದ, ಹಣೆ. ನಿತ್ಯವೂ ನೀರು ಮುಳುಗುವುದರಿಂದ ಒರಟಾಗಿದ್ದರೂ, ಸ್ವಾಭಾವಿಕವಾದ ಮೃದುತ್ವವನ್ನು ತೊರೆಯದ ಕಪ್ಪನೆಯ ಗುಂಗುರು ಕುರುಳು ಮೆಟ್ಟಲು ಮೆಟ್ಟಲಾಗಿ ಇಳಿದು, ಬಂದು ತುರುಬಿನಲ್ಲಿ ಸೆರಗಿನೊಳಗೆ ಮರೆಯಾಗಿರುವ ತುಂಬುಕೂದಲು. ನೀಳವಾಗಿ, ದೊಡ್ಡವಾಗಿ, ಹಾಲುಬೆಳ್ಳಿಯಂತೆ ಬೆಳಗುವ ಕಣ್ಣು ಸ್ಥಿರವಾದರೂ, ಸುಂದರವಾದ ಕಣ್ಣನೋಟ. ತೇಜಸ್ವಿಯಾಗಿ, ಎಳೆಗೆಂಪಿನಿಂದ ಕೂಡಿದ ಬಿಳಿಯ ಬಣ್ಣದಿಂದ ಮನೋಹರವಾಗಿರುವ ಅಷ್ಟುದೊಡ್ಡದೂ ಅಲ್ಲದೆ ಚಿಕ್ಕದೂ ಅಲ್ಲದಿರುವ ಸುಂದರಮುಖ. ಆ ಮುಖದಲ್ಲಿರುವ ಸೊಬಗನ್ನೆಲ್ಲ ಸೇರಿಸಿ ತಂದು ಗಂಟಿಕ್ಕಿರುವಂತೆ ತೋರುವ ಗಲ್ಲ ಯಥಾಸ್ಥಾನಗಳಲ್ಲಿ ಔಚಿತ್ಯವನ್ನು ಮೀರದ ಕುಲೀನರಂತೆ, ಸ್ವಾಭಾವಿಕವಾದ ಸೌಂದರ್ಯದಿಂದ ಒಟ್ಟಿನ ಅಂದಕ್ಕೆ ಒಪ್ಪವಿಡುತ್ತಿರುವ ಹುಬ್ಬು, ಮೂಗು, ಬಾಯ್ದೆರೆಗಳು. ಆ ಮುಖಕ್ಕೆ ಅನುಗುಣವಾದ, ಬಟ್ಟೆಯಲ್ಲಿ ಕಟ್ಟಿದ ರತ್ನದಂತೆ, ತೆಳುವಾಗಿ ಬೂದಿಮುಚ್ಚುತ್ತಿರುವ ಕೆಂಡದಂತೆ, ಆ ಮರೆಯಲ್ಲಿದ್ದರೂ ಮೆರೆಯುತ್ತಿರುವ ಲಾವಣ್ಯವನ್ನು ಬೀರುವ, ದೇಹಲತೆ. ಅಂತೂ ಚೆಲುವೆ. ನಾಗರಿಕನೂ ಅತೃಪ್ತನಯನಗಳಿಂದ, ಒಂದ್ಗಳಿಗೆ ನಿಂತು ನೋಡಬೇಕೆನ್ನಿಸುವಂತಹ ರೂಪಿನ ಚೆನ್ನೆಯು ಅವಳು.

ಚೆಲುವನ್ನು ಕಂಡು ಸೋಲದವರು ಯಾರು ? ಶಿವಪೂಜೆಯ ತಮ್ಮಡಿಯು, ಶಿವನಿಗೊಪ್ಪಿಸಿದ ಬಸವಿಯನ್ನು ಕಂಡು, ಭ್ರಾಂತನಾದನು. ಇಬ್ಬರೂ ಶಿವನ ಪರಿವಾರದವರೆಂದುಕೊಂಡು, ಬಸವಿಯು ಬಿಟ್ಟಿ ಹಿಡಿದವರ ಸೊಮ್ಮು ಎಂದು ಧೈರ್ಯಗೊಂಡು, ಮನವನ್ನು ಕೊರೆಯುವ ಆಶೆಯನ್ನು ಅವಳ ಕಿವಿಗೂ ಹಾಕಿದನು. ಅವಳದನ್ನು ಲಕ್ಷಿಸಲಿಲ್ಲ. ತಮ್ಮಡಿಗೆ ಇನ್ನೂ ಧೈರ್ಯವಾಗಿ, ಚೇಷ್ಟೆಗಳು ಬಲಿತವು. ಅವಳು ಅದಕ್ಕೂ ಗಮನಕೊಡದಿರಲು, ಮೌನವನ್ನು ಸಮ್ಮತಿಯೆಂದು ಭಾವಿಸಿ, ಒಂದು ದಿನ ನಟ್ಟಿರುಳಿನಲ್ಲಿ ತಮ್ಮಡಿಗಳ ಸವಾರಿಯು ಶಿವದೇವಾಲಯಕ್ಕೆ ದಯಮಾಡಿಸಿತು. ಮರುದಿನ ಬೆಳಗಾಗುವ ವೇಳೆಗೆ, ಗುಡಿಯನ್ನು ಗುಡಿಸುವ ಸಮ್ಮಾರ್ಜನಿಯು ಬೀ[illegible]ಯಿತು. ಗುಡಿಯ ಬಾಗಿಲಲ್ಲಿ, ಕೈಕಾಲು

ಹಿಂಗಟ್ಟು ಮುರಿಕಟ್ಟಿಸಿಕೊಂಡು ಮೈಯೆಲ್ಲಾ ಹುಣ್ಣಾಗುವಂತಹ ಒದೆಗಳನ್ನು ಮೆದ್ದು, ಯಾರೋ ಒಬ್ಬರು ಬಿದ್ದಿದ್ದರು. ಒಂದೂವರೆ ತಿಂಗಳು ಶಿವಪೂಜೆಯನ್ನು ಇನ್ನೊಬ್ಬರು ಬಂದು ಮಾಡಿದರು.

ಅಂದಿನಿಂದ ಊರಿನವರು ಪರ್ಯಾಯವಾಗಿ ಕೊಟ್ಟಿದ್ದ, ಬಸವೀ, ಗೌರಿಗಳು ಮಾಯವಾಗಿ, ಬಸವಮ್ಮ, ಗೌರಮ್ಮ ಬಂದಿದ್ದರು. ಆದರೆ ಅವಳಿಗೆ ಮಾತ್ರ ಬಸವಿ, ಬಸವಮ್ಮ ಎಂದರೆ ಬಹಳ ಸಂತೋಷ. ಊರಿನವರು ಅವಳನ್ನು ಕಂಡು ಮಾತಾಡುವುದೇ ಅಪರೂಪ. ಆದ್ದರಿಂದ ಬಸವಿ, ಬಸವಮ್ಮ ಎನ್ನುವಾಗ, ಅದರಲ್ಲಿ ಯಾವ ಅಪಾರ್ಥದ ಸಂಬಂಧ ಇರುತ್ತಿರಲಿಲ್ಲ.

ಭಟ್ಟರು ಬಂದ ರಾತ್ರಿ ಎಂದೂ ಇಲ್ಲದೆ ಬಸವಿಗೆ ದೇಹಶಂಕೆಗೆ ಹೋಗಬೇಕೆನ್ನಿಸಿ, ಹೊರಗೆ ಹೋಗಿದ್ದಳು. ಊರಿನನಾಯಕನೊಡನೆ ಹೊಸಬರೊಬ್ಬರು ಬರುತ್ತಿರುವುದನ್ನು ಕಂಡು, ಅತ್ತಳಾದಳು. ಅದುವರೆಗೂ ಪರಿಚಿತವಲ್ಲದ ಯಾವುದೋ ಒಂದು ತೆರದ ಕುತೂಹಲವು ಮೂಡಿ ಅವಳು ಚಾವಡಿಯವರೆಗೆ ಬಂದಳು. ತನ್ನಾಸೆಗಾದರು ನಾಯಕನ ಮಾತೆಂಬ ನೆವದಿಂದ ಸೇವೆಮಾಡದವಳು, ಚಾವಡಿಯಲ್ಲಿ ಗುಡಿಸಿ, ಮಂದಲಿಗೆ ಹಾಸಿದಳು. ಅವಳು ತಿರುಗಿ ನೋಡಿದಾಗ ತ್ರಿಪುಂಡ್ರರಂಜಿತವಾಗಿ, ನಾತಿರೂಕ್ಷಶ್ಮಶ್ರು ಶೋಭಿತವಾಗಿ, ತೇಜಃಪುಂಜವಾಗಿದ್ದ ಭಟ್ಟರ ಮುಖವನ್ನು ಕಂಡು, ಒಂದುಗಳಿಗೆ ಮೈಮರೆತಳು. ಯಾರಿಗೂ ಮೊಖಗೊಟ್ಟು ಮಾತನಾಡದ ಹೆಣ್ಣು, ಭಟ್ಟರ ಅಪರಿಚಿತವಾದರೂ ಇಷ್ಟವಾದ ಮುಖವನ್ನು, ಮೊಗವೆತ್ತಿ, ಕಣ್ಣುಬಿಟ್ಟು ನೋಡಿತು. ಅತ್ತಿತ್ತ ತಿರುಗಿದ ಅವರ ಕಣ್ಣಿನ ನೋಟವು ತನ್ನ ನೋಟವನ್ನು ಸಂಧಿಸಲು, ಅದುವರೆಗೂ ಆ ಕಣ್ಣಿನಲ್ಲಿದ್ದ ಅಲೆಯದ ಸ್ಥೈರ್ಯವು ಹೋಗಿ, ಆಳವಾದರೂ, ಹೂಗಾಳಿಗೂ ಅಲೆಯುವ ನೀರಿನಂತೆ ಚಾಂಚಲ್ಯವನ್ನು ಪಡೆಯಿತು. ಶಿವಭಕ್ತಿ, ಶಿವಸೇವೆಗಳನ್ನು ಬಿಟ್ಟು ಮತ್ತೇನನ್ನೂ ಅರಿಯದ ಆ ಮುಗ್ಧೆಯ ಮನವು ಅರಿಯದ ಆಶೆಗೆ ಎಡೆಗೊಟ್ಟಿತು. ಆ ಹುಡುಗಿಯ, ಹುಡುಗಾಟವರಿಯದ ಬಗೆಯು, ನನ್ನ ಸೇವೆಗೊಪ್ಪಿ ನನ್ನ ಭಾಗ್ಯದ ಶಿವನು ನನ್ನನ್ನು ಅನುಗ್ರಹಿಸಲು ಬಂದಿದ್ದಾನೆ ಎಂದು ಕೊಂಡಿತು,

ಉತ್ತರಕ್ಷಣದಲ್ಲಿಯೇ, ಹೆಣ್ಣಿನ ಹುಟ್ಟುಗುಣವಾದ ನಾಚಿಗೆಯು ತಲೆದೋರಿ ಅಲ್ಲಿಯೇ ಇರಬೇಕೆಂಬ ಆಶೆಯು ತುಂಬಿದ್ದರೂ, ನಿಲ್ಲಲಾರದೆ ಹೊರಟು ಬಿಟ್ಟಳು. ಅಭ್ಯಾಸವು ಅವಳನ್ನು ದೇವಸ್ಥಾನಕ್ಕೆ ಕರೆದೊಯ್ಯಿತು

ಅಲ್ಲಿ ಅವಳು ಡಡಬಡನೆ ಒಂದಿಷ್ಟು ಕರ್ಪೂರವನ್ನು ಹಚ್ಚಿ ಶಿವನ ಮುಂದೆ ಇಟ್ಟು ನಮಸ್ಕಾರ ಮಾಡಿದಳು. ಏನು ಹೇಳುವುದಕ್ಕೂ ತೋರದೆ ಇದ್ದರೂ, ಸಂತೋಷ ಸಮುದ್ರದಲ್ಲಿ ಓಲಾಡುತ್ತಿರುವೆನೆಂಬ, ಸಂತೃಪ್ತಿ ಯಲ್ಲಿ ಬೀಗುತ್ತಿರುವೆನೆಂಬ, ಭಾವವು, ರೋಮಾಂಚವಾಗಿ ಉಬ್ಬುತ್ತಿರುವ ಮೆಯ್ಯಿಂದ, ಕರೆಯುತ್ತಿರುವ ಕಂಬನಿಗಳಿಂದ ವ್ಯಕ್ತವಾಗುತ್ತಿತ್ತು.

---

## ಒಂಭತ್ತನೆಯ ಪರಿಚ್ಛೇದ

---

ಗ್ರಾಮದಲ್ಲಿ 'ಗದ್ದಲವೋ ಗದ್ದಲ. ಎಲ್ಲರೂ ಬಂದು ಭಟ್ಟರನ್ನು ನೋಡುವವರೇ! ಬೆಳಗಾದ ಅಷ್ಟು ಹೊತ್ತಿನೊಳಗಾಗಿ ಭಟ್ಟರ ಸಮಾ ಚಾರವು ಊರಿಗೆಲ್ಲ ತಿಳಿದು ಹೋಯಿತು. ಚಿಕ್ಕವರು ದೊಡ್ಡವರು ಎಲ್ಲ ರಿಗೂ ಭಟ್ಟರೆಂದರೆ ಒಂದು ಅಸಾಮಾನ್ಯವ್ಯಕ್ತಿಯೆನ್ನಿಸಿತು. ಆ ಹಳ್ಳಿಯ ವರ ಸ್ವಾಭಾವಿಕವೂ, ಸರಳವೂ ಆದ ಮನಸ್ಸಿಗೆ, ತಮಗಿಂತಲೂ ಮಿಗಿ ಲಾದ, ಉತ್ತಮವಾದ, ತಮಗೆ ಅರ್ಥವಾಗದ ಪ್ರತಿಯೊಂದೂ ದೈವವೇ ಆಗುವುದು. ಆದರಂತೆ, ಭಟ್ಟರೂ ದೈವವೇ ಅಥವಾ ದೈವಸಮಾನರೇ ಆದರು. ಶಿವನಂತಹವರು ಆ ಭಟ್ಟರು. ಅವರನ್ನು ನೋಡಿದ ದಿನವೇ ಸುದಿನವೆಂದು ಎಲ್ಲರಿಗೂ, ಯಾರೂ ಹೇಳಿಕೊಡದೆಯೇ, ಖಂಡಿತವಾಗಿ ಹೋಯ್ತು.

ಭಟ್ಟರು ಬೆಳಗೆದ್ದು ಚಳಿಯನ್ನು ಲಕ್ಷಿಸದೆ ಊರಮುಂದಿನ ಕೆರೆಗೆ ಸ್ನಾನಕ್ಕೆ ಹೊರಟು ಹೋದರು. ಅಲ್ಲಿ ಅವರ ಸ್ನಾನಾದಿಗಳೆಲ್ಲಾ ಮುಗಿ

ಯುವ ವೇಳೆಗೆ ತಕ್ಕಷ್ಟು ಹೊತ್ತಾಯಿತು. ಕುತೂಹಲಿಯಾದ ಜನತಂಡವು ಕೆರೆಯ ಮಂಟಪಕ್ಕೇ ಬಂದು ಬಿಟ್ಟಿತು. ಆದರೆ .ಯಾರೂ ಸಮೀಪಕ್ಕೆ ಹೋಗರು. ಹೋಗಲೊಲ್ಲರು. ಎಲ್ಲರೂ ದೂರದಿಂದಲೇ ನೋಡುತ್ತಿದ್ದಾರೆ. ಎಲ್ಲರಿಗೂ ಗೌರವ; ಒಂದು ತೆರದ ಭೀತಿಗೆ ಸರಿದೊರೆಯಾಗುವ ಪ್ರೀತಿ. ಸಮೀಪಕ್ಕೆ ಹೋದರೆ, ಅಯ್ಯನವರ ಜಪಕ್ಕೆ ತೊಂದರೆ ಯಾದೀತೆಂದು ಎಲ್ಲರೂ ಹಿಂಜರಿಯುತ್ತಾರೆ ಆದರೂ ಭಟ್ಟರ ಜಪವೇನೋ ಎಂದಿನಂತೆ ನಿರ್ವಿಘ್ನವಾಗಿ ನಡೆಯಲಿಲ್ಲ. ಅವರ ಮನಸ್ಸು ಜಪದ ಧ್ಯಾನಮೂರ್ತಿಯನ್ನು ಚಿಂತಿಸುವುದಕ್ಕೆಪ್ರತಿಯಾಗಿ, ಈ ಪ್ರಪಂಚದ ಒಂದು ಸ್ತ್ರೀಮೂರ್ತಿಯನ್ನು ಚಿಂತಿಸುತ್ತಿದ್ದಂತೆ ತೋರುತ್ತಿತ್ತು. ಆ ವ್ಯಕ್ತಿಯ ಪರಿಚಯವು ಭಟ್ಟರಿಗೆ ಅಷ್ಟಾಗಿಲ್ಲ. ಆದರೂ ಕೆಳೆತನವನ್ನು ಬಯಸಿದಾಗ, ವಹಿಸುವ ಸೌಮ್ಯಭಾವವನ್ನು ವಹಿಸಿ, ಬಗೆಯು, ಒಲಿಸುವುದಕ್ಕೆ ನರ್ತಿಸುತ್ತಾ ಹಾವಭಾವಗಳಿಂದ ಮುಂದರಿಯುವ ಪಾರಿವಾಳದಂತೆ ಮುಂದಕ್ಕೆ ಹೋಗುತ್ತಿದೆ.

ಭಟ್ಟರು ಹಾಗೂ ಹೀಗೂ ಮಾಡಿ, ಜಪವನ್ನು ಮುಗಿಸಿ ಕಣ್ಣು ತೆರೆದರು. ಕೆರೆಯ ಸೋಪಾನಗಳ ಕಡೆಯಲ್ಲಿ ಒಬ್ಬ ತರುಣಿಯು ನಿಂತಿರುವುದು ಕಣ್ಣಿಗೆ ಬಿತ್ತು. ಮೂಡಿ, ಮೇಲಕ್ಕೆ ಹತ್ತುತ್ತಿರುವ ಸೂರ್ಯನ ಕೆಂಬಣ್ಣದ ಎಳೆಬಿಸಿಲಿನಲ್ಲಿ, ಪ್ರಪಂಚವೇ ರಾಗರಂಜಿತವಾಗಿ, ಅನುರಕ್ತರ ಮುಖದಂತೆ ಮನೋಹರವಾಗಿರುವ ಆ ವೇಳೆಯಲ್ಲಿ ಸ್ವಭಾವರಕ್ತಿಮಾರಂಜಿತವಾದ ಆ ಮುಖವು ಇನ್ನು ಉಜ್ವಲವಾಗಿತ್ತು. ಬಹಳ ಹೊತ್ತಿನಿಂದ ಮುಚ್ಚಿಕೊಂಡಿದ್ದು ತಟ್ಟನೆ ಬಿಟ್ಟು ಭಟ್ಟರ ಕಣ್ಣಿಗೆ ನಿಂತಿರುವುದು ತಮ್ಮ ಕುಟುಂಬವೆನ್ನಿಸಿತು. ಸತ್ಯವನ್ನು ಹುಡುಕುವುದರಲ್ಲಿ ನಿಪುಣವಾದ ಆತನ ಮನಸ್ಸು, ಅದು ಭ್ರಾಂತಿಯೆಂದು ಗೊತ್ತಾದುದಕ್ಕೂ ನಡುವೆ ಅವಕಾಶವಿದ್ದಿತು. ಹುಡುಕಿದರೂ ಆ ಭ್ರಾಂತಿಯು ಹುಟ್ಟುವುದಕ್ಕೆ ಏನು ಕಾರಣವೆಂಬುದು ಮಾತ್ರ ತಿಳಿಯಲಿಲ್ಲ. ಭಟ್ಟರು ಮಾತ್ರ ಶಾಸ್ತ್ರದ ಬಲದಿಂದ "ಭ್ರಾಂತಿರೇಷಾ ಭ್ರಾಂತಿಃ" ಎಂದುಕೊಂಡರು. ಆದರೆ ನೀರಿನಲ್ಲಿ ಕಲ್ಲೆಸೆದಂತಾಯಿತು. ಕಲ್ಲೆಸೆದ ಮೇಲೆ ಹುಟ್ಟುವ ಗುಂಡು ಅಲೆಗಳನ್ನು ನಿಲ್ಲಿಸಲು ಯಾರಿಗೆ ಸಾಧ್ಯ ? ಅದರಂತೆ ಮನಸ್ಸು ಒಮ್ಮೆ ಕಲಕಿಬಿಟ್ಟಿತೆಂದರೆ, ತಿಳಿ [illegible] ಕುಳುಬವೆ ?

ಭಟ್ಟರನ್ನು ನಾಯಿಕನು ಬಂದು ಮನೆಗೆ ಕರೆದುಕೊಂಡು ಹೋದನು ಭಟ್ಟರ ಪೂರ್ವೋತ್ತರವನ್ನೆಲ್ಲ ವಿಚಾರಿಸಿಯಾಯಿತು. ಅವರ ತೀರ್ಥ ಯಾತ್ರೆಯ ಸಮಾಚಾರವನ್ನು ಕೇಳಿ "ಅದಕ್ಕೇನಂತೆ, ಸುಬ್ರಹ್ಮಣ್ಯವಿಲ್ಲಿಗೆ ೪೦ ಮೈಲಿದೂರ. ಒಂದು ರಾತ್ರಿಯಲ್ಲಿ ಅಲ್ಲಿಗೆ ತಲಪಿಸುವ ಎತ್ತುಗಳಿವೆ. ತಾವು ಇನ್ನೆರಡು ದಿನ ಇದ್ದು ಹೋಗಿ ಬಿಟ್ಟು ಬನ್ನಿ" ಎಂದನು.

ಭಟ್ಟರೂ ಕುತೂಹಲದಿಂದ "ನೀವು ಯಾರು?" ಎಂದು ಪರಿಚಯ ವನ್ನು ಬಯಸಿದರು. ಆದರೆ ನಾಯಕನು ಆ ವಿಚಾರವಾಗಿ ಬಹಳ ಮಾತ ನಾಡಲಿಲ್ಲ. "ನಮ್ಮದೇನಪ್ಪ! ಕಳ್ಳಬಾಳು! ಇದ್ದದ್ದು ಇದ್ದಂಗೆ ಹೇಳುವ ಮಾತೇ ನಾವು ಕಾಣೆವು. ತಮ್ಮಲ್ಲಿ ಅಪನಂಬಿಕೆಯಲ್ಲ. ನಾವು ನಂಬೋದೆ ಅಷ್ಟುದೂರ ಅಲ್ಲಿಂದಾಚೆಗೆ ನಾವು ನಂಬೋದೆ ಇಲ್ಲ. ಅದ ರಿಂದ ನಾವು ತಮಗೆ ಅರಿಕೆ ಮಾಡಿಕೊಳ್ಳುವುದಿಷ್ಟೆ. ತಾವು ನಮ್ಮನ್ನು ಹೆಚ್ಚಾಗಿ ಕೇಳಲೇಬೇಡಿ."

ಭಟ್ಟರು ಮುಂದರಿಸಲಿಲ್ಲ. ಅಲ್ಲಿಗೇ ಬಿಟ್ಟರು. ನಾಮರೂಪಾತ್ಮಕ ವಾದ ಪ್ರಪಂಚ. ರೂಪಕ್ಕೊಂದು ನಾಮವಿರಲೇಬೇಕು. ನಾಮವೂ ವ್ಯವಹಾರಕ್ಕಾಗಿ. ಯಾವುದಾದರೂ ಸಲ್ಲುವಾಗ ಅದಕ್ಕೇನಂತೆ ಎಂದು ಕೊಂಡರು. ಆದರೂ ಭಟ್ಟರ ಮನಸ್ಸು ಅವರ ಉಪದೇಶವನ್ನು ಗಮನಿಸದೆ ಬೋಧೆಯನ್ನು ಕೇಳದೆ, ಅಂದಿನ ಬೆಳಗ್ಗೆ ನೋಡಿದ ರೂಪರಾಶಿಯನ್ನು ಮತ್ತೆ ಮತ್ತೆ ನೆನೆಸಿಕೊಂಡು, ಇದರ ಹೆಸರೇನು? ಅದನ್ನು ತಿಳಿಯುವ ಬಗೆ ಹೇಗೆ? ಎಂದು ಯೋಚಿಸುತ್ತಿತ್ತು.

ಬಸವಿಗೂ ಅಂದಿನದಿನ ಜಪವು ನೇರವಾಗಿ ನಡೆಯಲಿಲ್ಲ. ಹೊರಗಿನ ಹಂಬಲಿಲ್ಲದೆ, ತನ್ನ ಹುಚ್ಚಿನಲ್ಲಿ ತಾನು ಕೊಚ್ಚಿಕೊಂಡು ಹೋಗುತ್ತಾ ಸುಖವಾಗಿದ್ದವಳಿಗೆ, ಹೊರಗಿನ ಗಾಳಿಯು ಹೊಸದೊಂದನ್ನು ತಂದು ತೂರಿ ಅವಳನ್ನು ಬದಲಾಯಿಸಿತು. ಶಿವನನ್ನು ಹೊರತು ಮತ್ತೇನನ್ನೂ ಚಿಂತಿಸದೆ ಇದ್ದ ಮನಸ್ಸು, ಶಿವನಂತೆ ಕಾಣುತ್ತಿದ್ದ ಮತ್ತೊಬ್ಬರ ರೂಪ ವನ್ನು ಧ್ಯಾನಿಸತೊಡಗಿತು. ಕಣ್ಣುಮುಚ್ಚಿ ಕುಳಿತುಕೊಂಡರೆ, ಒಂದೊಂದು

ದಿನ ಸಂಜೆಯವರೆಗೂ ಕಣ್ಣು ಬಿಡದೆ ಇದ್ದವಳಿಗೆ, ಅಂದು ಕಣ್ಣು ಮುಚ್ಚಿ ಕುಳಿತುಕೊಳ್ಳುವುದೇ ಕಷ್ಟವಾಯಿತು. ಯಾರೋ ಬಂದರೆಂದು ಸಂಭ್ರಮದಿಂದ ಕಣ್ಣು ಬಿಡುವಳು. ಯಾರೂ ಇಲ್ಲದಿರುವುದನ್ನು ಕಂಡು ಅಪ್ರತಿಭಳಾಗಿ ಮತ್ತೆ ಕಣ್ಣು ಮುಚ್ಚಿಕೊಳ್ಳುವಳು. ವಿಷಯಗಳ ಸೆಳೆತವನ್ನು ಅರಿಯದ ಇಂದ್ರಿಯಗಳು, ಇಂದ್ರಿಯಗಳ ದಮನವನ್ನು ಅರಿಯದ ಮನಸ್ಸು, ಆ ವಿಹ್ವಲತೆಯಲ್ಲಿ ತಟ್ಟನೆ ಸೋತುಹೋದುವು. ಆದರೆ ಏನು ಮಾಡಬೇಕು? ಹೊಸದೊಂದು ಸ್ಥಿತಿಯು ಹುಟ್ಟಿಕೊಂಡಾಗ, ಹಿಂದಿನ ನೆನಪಿನಲ್ಲಿ ಇಲ್ಲದ ಹೊಸದೊಂದು ಬಂದು ಎದುರಿಗೆ ನಿಂತಾಗ, ಅನನುಭವಿಯಾದ ಮನಸ್ಸು ಏನುಮಾಡಬಲ್ಲುದು? ಏನೂ ತೋರಲಿಲ್ಲ. ಸುಮ್ಮನಾಗಬೇಕಾಯಿತು.

ಆದರೆ ಬಸವಿಯ ಮನಸ್ಸಿನ ಏವಣೆಯಳಿಯಲಿಲ್ಲ. ಅವಳಿಗೆ ಉಂಡ ಮೊಸರನ್ನದಲ್ಲಿ ಏನೋ ಕಹಿಯಿದ್ದಂತೆ ತೋರಿತು. ಕಣ್ಣಿಗೆ ಎತ್ತ ನೋಡಿದರೂ ಬಯಲೇ ಆಗಿರುವಂತೆ ಕಾಣುವುದು. ಎಲ್ಲಿಗೋ ಹೋಗಬೇಕೆಂದು ಆಸೆ. ಅಭ್ಯಾಸವಿಲ್ಲವಾಗಿ ಸಂಕೋಚ. ಒಮ್ಮೆ ಹೋಗೋಣವೆಂದು ಏಳುವಳು. ಹೋಗುವುದು ಹೇಗೆ ಎಂದುಕೊಂಡು ಹಾಗೆಯೇ ಕುಳಿತುಕೊಳ್ಳುವಳು. ಹಾಗಾಗಿ, ಹೀಗಾಗಿ, ತನ್ನ ವರ್ತನವನ್ನು ತಾನೇ ಅರಿಯದವಳಾಗಿ ಸಂಜೆಯ ಐದುಗಂಟೆಯ ಸುಮಾರಿನಲ್ಲಿ ಚಾವಡಿಗೆ ಬಂದುಬಿಟ್ಟಳು. ಯಾರನ್ನು ಕಂಡರೂ ಹೆದರದೆ ಇದ್ದವಳಿಗೆ ಇಂದು ಹೆದರಿಕೆ. ಯೇಕೆ ಯೆಂಬುವುದು ಮಾತ್ರ ತಿಳಿಯದು.

ಬಸವಿಯು ಚಾವಡಿಯ ಬಾಗಿಲಿಗೆ ಬಂದಳು. ಅಲ್ಲಿಂದ ಮುಂದೆ ಹೋಗುವುದು ಅವಳ ಕೈಯಲ್ಲಾಗಲಿಲ್ಲ. ಏನಾಯಿತೋ ಏನೋ, ತಲೆಯು ತಿರುಗಿ ಬಂದಂತಾಗಿ, ಧೊಪ್ಪನೆ ಬಿದ್ದುಬಿಟ್ಟಳು.

ಭಟ್ಟರು ಯೇನೋ ಯೋಚಿಸುತ್ತ ಕುಳಿತಿದ್ದವರು ಸದ್ದಾಗುತ್ತಲೇ ತಿರುಗಿನೋಡಿದರು. ಹೆಂಗುಸು ಬಿದ್ದುಬಿಟ್ಟಿದ್ದಾಳೆ. ತಟ್ಟನೆ ಎದ್ದು ಓಡೋಡಿಬಂದರು. ಸುತ್ತಲೂ ಯಾರೂ ಇಲ್ಲ. ಭಟ್ಟರಿಗೆ ಕಷ್ಟಕ್ಕೆ ಬಂತು.

ಯಾರನ್ನಾದರೂ ಕರೆಯುವುದೋ ಅಥವಾ ತಾವೇ ಅವಳಿಗೆ ಉಪಚಾರ ಮಾಡುವುದೋ? ಒಮ್ಮೆ ಉಪಚಾರ ಮಾಡುವುದೇ ಸರಿ ಎನ್ನಿಸಿತು. ಇನ್ನೊಮ್ಮೆ, ಉಂಟೆ? ಎಷ್ಟಾಗಲಿ ಹೆಂಗುಸು. ಊರಿನವರು ಯಾರನ್ನಾದರೂ ಕೂಗಿದರೆ ಬರುತ್ತಾರೆ ಎನ್ನಿಸಿತು. ಭಟ್ಟರೂ ಕೂಗಬೇಕೆಂದು ಕೊಂಡರು. ಆದರೆ ಯಾರದೂ ಪರಿಚಯವಿಲ್ಲ. ಯಾರ ಹೆಸರೂ ತಿಳಿಯದು.

ಅಲ್ಲದೆ ಭಟ್ಟರಿಗೂ ಎದೆಯ ಅಂತರಾಂತರದಲ್ಲಿ ಅವಳನ್ನು ಮುಟ್ಟಿ ಉಪಚಾರ ಮಾಡಬೇಕು ಎನ್ನಿಸಿತು. ವರ್ಣಾಂತರಪವಳೆಂಬುದು ತೋರಲಿಲ್ಲ. ಮತ್ತಾರಾದರೂ ಕಂಡು ಏನೆಂದುಕೊಂಡಾರು ಎನಿಸಲಿಲ್ಲ. ಕೆಟ್ಟಕಣ್ಣಿನವರು ಕಂಡರೆ ಕಳಂಕವನ್ನು ಹುಟ್ಟಿಸಿಯಾರು ಎಂಬುದು ಬಗೆಗೆ ಬರಲಿಲ್ಲ. ಇದ್ದಿದ್ದಹಾಗೆ ಮನಸ್ಸು "ಯಾರೂ ಬರುವಂತಿಲ್ಲ. ನಾನೇಕೆ ನೋಡಿಕೊಳ್ಳಬಾರದು?" ಎನ್ನಿಸಿತು. ಮರುಮಾತು ಹುಟ್ಟಲಿಲ್ಲ. ಕವಲುನುಡಿಯ ಸುಳಿಯೇ ಇಲ್ಲ. ಇನ್ನೊಂದುಗಳಿಗೆಯೊನ್ನುಪ್ರದೊಳಗಾಗಿ ಬಸವಿಯನ್ನು ಭಟ್ಟರು ಎತ್ತಿಕೊಂಡು ಚಾವಡಿಯೊಳಕ್ಕೆ ಕರೆದು ತಂದಿದ್ದರು.

ಚಾಪೆಯಮೇಲೆ ಪ್ರಜ್ಞೆಯಿಲ್ಲದ ಬಸವಿಯ ದೇಹವು ಬಿದ್ದಿದೆ. ಮಗ್ಗುಲಲ್ಲಿ ಭಟ್ಟರು ಅವಳಿಗೆ ನೀರು ತಟ್ಟುತ್ತಾ ಕುಳಿತಿದ್ದಾರೆ. ಕೈಗಳು ಸೇವಿಸುತ್ತಿವೆ. ಆದರೆ ಅವರ ರಸಿಕ ಮನಸ್ಸು "ಮಲಿನಮಪಿ ಹಿಮಾಂಶೋಃ ಲಕ್ಷ್ಮಲಕ್ಷ್ಮೀಂತನೋತಿ" ಎಂದು ಸಣ್ಣಗೆ, ಮೃದುವಾಗಿ, ಮತ್ತೊಬ್ಬರಿಗೆ ಕೇಳಿಸದಂತೆ ಹಾಡುತ್ತಿದೆ. ಎರಡುಮೂರುಸಲ ಆ "ಮಲಿನಮಪಿ" ಮಂತ್ರದ ಜಪವಾದಮೇಲೆ ಭಟ್ಟರಿಗೆ ಅರಿವಾಗಿ, "ಇದೇನಿದು" ಎಂದು ಕೊಂಡರು. ಬಸವಿಯ ಸೆರಗು ತೆರೆದಿದ್ದ ಎದೆಯ ಆ ಭೋಗವನ್ನು ಎವೆಯಿಕ್ಕದೆ ನೋಡಿ ತನ್ಮಯವಾಗಿ ಸುಖದ ಸವಿಗನಸಿನಲ್ಲಿ ಓಲಾಡುತ್ತಿದ್ದ ಅವರ ಅರೆಮುಚ್ಚಿದ ಕಣ್ಣು, "ಇದೇನಿದು" ಎಂದುಕೊಂಡಕೂಡಲೇ ನಿಸ್ತಾರವಾಯಿತು. ಮುಖವು ಗಭೀರವಾಯಿತು. ಮುಂದರಿದು ಹೋಗಿ ಎದೆಗೆ ನೀರುತಟ್ಟುತ್ತಿದ್ದ ಕಯ್ಯು ಹಿಂಜರಿಯಿತು. ಭಟ್ಟರು ತಾವು ಅಧೀರರಾದುದಕ್ಕೆ ತಾವೇ ಬೇಸರಪಟ್ಟುಕೊಂಡರು. ಅತ್ತಿತ್ತ ನೋಡಿ, ನೋಡಿ

ದವರು ಯಾರೂ ಇಲ್ಲದಿರಲು, ಹೋಗಲಿ ಯಾರೂ ಕಾಣಲಿಲ್ಲವೆಂದು ಸಮಾಧಾನಪಟ್ಟುಕೊಳ್ಳಲು ಯತ್ನಿಸಿದರು.

ಬಸವಿಗೆ ಅರಿವು ಬರುವ ಗುರುತು ಕಾಣಿಸಿತು. ಕೂಡಲೇ ಅವರು ಅವಸರವಸರವಾಗಿ ಅವಳ ಶಿರಗನ್ನು ಹೊಚ್ಚಿದರು. ಅವರ ಮುಖದಲ್ಲಿ ಗಾಬರಿಯು ತಾನೇತಾನಾಗಿದೆ. ಏಕೋ ಏನೋ ಬೆಚ್ಚಿದ್ದಾರೆ. ಎದೆಯು ಡವಡವ ಎನ್ನುತ್ತಿದೆ. ಕಣ್ಣುಗಳು ಅಗಲವಾಗಿವೆ. ಬಿಟ್ಟ ಬಾಯಿಯು ಮನಸ್ಸಿನ ಅಸ್ತವ್ಯಸ್ತಸ್ಥಿತಿಯನ್ನು ಸೂಚಿಸುತ್ತಿದೆ.

ಬಸವಿಯು ಕಣ್ಣುಬಿಟ್ಟಳು. ಮುಖದಿಂದ ಎದೆಯುವರೆಗೂ ಒದ್ದೆಯಾಗಿರುವುದು ತಿಳಿಯಿತು. ಕೈಯ್ಯು ಮುಟ್ಟಿನೋಡಿ, ನೀರಿರುವುದನ್ನು ಕಣ್ಣಿಗೆ ತಂದು ತೋರಿಸಿ, ಮನಸ್ಸಿಗೆ ತೋರಿದುದು ನಿಜವೆಂಬುದನ್ನು ನಿರ್ಧರಿಸಿಕೊಟ್ಟಿತು. ಒಂದುಗಳಿಗೆಯೊಳಗಾಗಿ, ಹೆಣ್ಣಿನ ಬಗೆಯು ಎಲ್ಲವನ್ನೂ ಗ್ರಹಿಸಿತು. ತಾನು ಬಿದ್ದವೊಡಲು ಅದುವರೆಗೂ ಹೀಗೆ ಹೀಗೆ ನಡೆದಿರಬೇಕು ಎಂಬುದು ಅವಳ ಮನಸ್ಸಿಗೆ ಹೊಳೆಯಿತು. ನಾಚಿ, ನೀರಾಗಿ ತಟ್ಟನೆ ಎದ್ದು ಕುಳಿತುಕೊಳ್ಳಲು ಯತ್ನಿಸಿದಳು. ಸಾಗಲಿಲ್ಲ: ಮತ್ತೆ ಬಿದ್ದು ಬಿಟ್ಟಳು.



## ಹತ್ತನೆಯ ಪರಿಚ್ಛೇದ.



ಅರಿವಿಲ್ಲದಾಗ, ಧೈರ್ಯವಾಗಿ ಅವಳನ್ನು ಮುಟ್ಟಿ ಉಪಚಾರ ಮಾಡಿದ ಭಟ್ಟರಿಗೆ, ಅರಿವಿರುವಾಗ ಮುಟ್ಟುವುದಕ್ಕೆ ಸಂಕೋಚವಾಯಿತು. ಆಗ ತಡೆಯರಿಯದೆ ಮುಂದರಿದುಹೋಗಿ ಶಿರಗನ್ನು ತೆಗೆದು ಎದೆಗೆ ನೀರು ತಳಿದ ಕೈಗಳು, ಬೀಳುತ್ತಿರುವವಳನ್ನು ಹಿಡಿದುಕೊಳ್ಳಲು ಹೋಗಲು ಒಂದುಗಳಿಗೆ ಹಿಂಜರಿದವು. ಆದರೇನು? ಹುಡುಗಿಯ ಆರ್ತತೆಯೊಂದೆಡೆ, ಸಹಾಯಶೂನ್ಯತೆಯೊಂದೆಡೆ, ಅವರ ಮರುಕವೊಂದೆಡೆ—ಅಂತೂ, ಎಲ್ಲವೂ ಸೇರಿ ಅವಳಿಗೆ ಉಪಚಾರಮಾಡಿಸಿದವು.

ಬೀಳುತ್ತಿದ್ದವಳನ್ನು ಹಿಡಿದುಕೊಂಡು, ಎದೆಗೆ ಒರಗಿಸಿಕೊಂಡು ಕುಳಿತರು. ಅವರು ಸಮಾಧಾನದ ಮಾತುಗಳನ್ನು ಹೇಳುತ್ತ, ತಲೆಯನ್ನು ಸವರುತ್ತ ಭುಜಗಳನ್ನು ಹಿಡಿದುಕೊಂಡು ಕುಳಿತಿರುವಾಗ, ಭಟ್ಟರಿಗೆ ಏನೇನೋ ನೆನಪು-ಏನೋ ದಿಗಿಲು, ಎಲ್ಲಿಯದೋ ಸಂತೋಷ. ಒಂದು ಉತ್ಸಾಹ, ಒಂದು ಆಸೆ.

ಸಮಾಧಾನದ ಮಾತುಗಳನ್ನು ಆಡುತ್ತ ಆಡುತ್ತ ಭಟ್ಟರು ತಮ್ಮನ್ನು ತಾವೇ ಅರಿಯದವರಾಗಿ, "ನಿನ್ನ ಹೆಸರೇನು ?" ಎಂದುಬಿಟ್ಟರು. ಅವಳು ನಾಚಿಕೆಯಿಂದ ಕೆಂಪೇರಿದ ಮುಖವನ್ನು ನೆಲದಕಡೆಗೆ ತಗ್ಗಿಸಿಕೊಂಡು ಬಿಟ್ಟಳು. ಅವಳಿಗೆ ಏನೋ ಅಭೂತಪೂರ್ವವಾದ ಸುಖ. ಆ ತೋಳ ತೆಕ್ಕೆಯಲ್ಲಿ, ಎದೆಗೆ ಒರಗಿಕೊಂಡು, ತಾನು ಕುಳಿತಿರುವುದರಲ್ಲಿ ಅವಳಿಗೆ ಏನೋ ಹಿತ. ಜೊತೆಗೆ ಹೆಸರೇನೆಂದು ಬೇರೆ ಕೇಳಿಬಿಟ್ಟರು. ಅವಳ ಆನಂದಕ್ಕೆ ಪಾರವಿಲ್ಲ. ತುಂಬಿದ ಸಂತಸವು ಪ್ರೀಯುನ್ನುಮ್ಮೆ ಅಲುಗಿಸಿ ಬಿಟ್ಟಿತು. ಕುಲುಕಿಸಿಬಿಟ್ಟಿತು. ಜುಮ್ಮೆನ್ನಿಸಿ ಝೂಕುತೋರಿ, ಗಾತ್ರ ವೆಲ್ಲವೂ ಪುಳಕಿತವಾಗುವಂತೆ ಮಾಡಿಬಿಟ್ಟಿತು.

ಸಂಗದಿಂದ ಗುಣದೋಷಗಳು ಉಂಟಾಗುವುದರಲ್ಲಿ ಅತಿಶಯವೇನು? ಆನಂದಿಯಾದ ದೇಹದ ಸಂಪರ್ಕದಿಂದ ಅವರಿಗೂ ಒಂದುತೆರನಾದ ಆನಂದವಾಯಿತು. ಬಗ್ಗಿರುವ ಮುಖವು ಅಂತಹ ಮತ್ತೊಂದು ಮುಖ ವನ್ನು ಮನಸ್ಸಿನ ಕಣ್ಣಿಗೆ ತಂದುತೋರಿತು.

ಅವರಿಗೆ ಅರಿವು ಉಳಿಯಲಿಲ್ಲ. "ವಿದ್ವಾಂಸಮಪಿಕರ್ಷತಿ" ಎಂಬ ಆಚಾರ್ಯವಾಕ್ಯವು ನಿಜವಾಯಿತು. ಅವರಿಗೆ ತಾವು ಏನುಮಾಡುತ್ತಿರುವೆ ನೆಂಬುದು ತಿಳಿಯದೆ, ಇಂದ್ರಿಯಗಳು ಮನಸ್ಸನ್ನು ಭ್ರಾಂತಿಗೊಳಿಸಿ ಬುದ್ಧಿಗೆ ಮೊಂಕುಹಿಡಿಸಿ, ಕರ್ತೃತ್ವವನ್ನು ತಾವು ವಹಿಸಿ, ಅವರನ್ನು ದುಡುಕುವಂತೆ ಮಾಡಿಬಿಟ್ಟವು. ಇದುವರೆಗೂ ಕಾಮವಾಸನೆಯ ಚುಂಬನದ ಹೆಸರು ಗಾಣದ ಬಸವಿಯ ಅಧರವು ರದನದಂಶರಂಜಿತವಾಯ್ತು.

ಅವರು ಮತ್ತೆ ಅದೇ ಭ್ರಾಂತಮನದಲ್ಲಿ, ಪಶ್ವಸ್ನೇಹದ ಅಭಾಸವು ತೋರುವ ಮೋಹದ ಆವೇಶದಲ್ಲಿ ಸ್ನಿಗ್ಧವಾಗಿ, ಸರಳವಾಗಿ, ಮುದ್ದಾಗಿ,

ಸವಿಯಾಗಿರುವ, ಮನೋಹರ, ಗಂಭೀರ, ಸೂಕ್ಷ್ಮಸ್ವನದಿಂದ ಅರ್ಥವಿಲ್ಲದ ಪ್ರಶ್ನೆಯಾಗಿ "ನಿನ್ನ ಹೆಸರೇನು?" ಎಂದರು. ಬಸವಿಯೂ ಅದೇ ಸ್ಥಿತಿಯಲ್ಲಿ, ಅದೇ ಕಾವ್ಯಾಂಗದ ತಾನದಲ್ಲಿ, ಹಿಂದಿನ ಮಂದ್ರದ ರಣಿತಕ್ಕೆ ಅನುರಣಿತವಾಗಿ ನುಡಿಯುವ ವಾದ್ಯತಂತ್ರಿಯಂತೆ, ತಾನೂ, ತನ್ನ ಹೆಸರನ್ನು ನುಡಿದಳು. ಸಂತೋಷದ ಭರದಲ್ಲೋ, ನಾಚಿಕೆಯ ಆವೇಶದಲ್ಲೋ, ಹೆಸರು ಹೇಳಿದರೆ ಏನಾದರೂ ಅಭಾಸವಾದೀತೆಂಬ ಶಂಕೆಯಿಂದಲೋ, ಅಂತೂ ಹೆಸರು ಗಂಟಲಿನಿಂದ ಆಚೆಗೆ ಬರಲಿಲ್ಲ. ಏನೋ ಗೊಣಗೊಣ, ಏನೋ ಕೊರಕೊರ. ಸ್ಪಷ್ಟ, ಅಸ್ಪಷ್ಟದಲ್ಲಿಯೇ ಸಂಪೂರ್ಣವಾಯಿತು.

ಮತ್ತೆಯೂ ಅದೇ ಪ್ರಶ್ನೆ. ಆದರೆ ಅಕ್ಷರಗಳು ಅಥವಾ ಪದಗಳು ಹೆಚ್ಚುಕಡಿಮೆಯಾಗಿವೆ. ಪದಗಳು ಇಲ್ಲದಿದ್ದರೆ ಅರ್ಥವು ತಿಳಿಯುವುದಿಲ್ಲವೇನು? ಮನಸ್ಸಿನ ಅರ್ಥವು ಸ್ಫುಟವಾಗಿ ವ್ಯಕ್ತವಾಗಬೇಕಾದರೆ, ಪದಗಳ ಸಹಾಯವು, ಹೃದಯವು ಬೇರೆಬೇರೆಯಾಗಿದ್ದಾಗ, ಬೇಕು. ಹೃದಯಗಳೆರಡೂ ಸಮರಸವಾಗಿ ಏಕಭಾವವಾಗಿ ಬೆರೆದೊಂದಾಗಿರುವಾಗ ಪದವೇಕೆ? ಅಥವಾ ನಿಷ್ಕ್ರಿಯೆಯಿಂದ ಅರ್ಥವು ವ್ಯಕ್ತವಾಗುವಾಗ ಪದಗಳ ಭಾರವೇಕೆ? ಇನ್ನೊಮ್ಮೆ ಸಣ್ಣಗೆ, ನುಣ್ಣಗೆ, ಎಂದ 'ಊ' ಒಂದು ಸಾಕಾಯಿತು. ಬಸವಿಯು ಮತ್ತೆ ನೀರುನುಂಗಿ ಗಂಟಲನ್ನು ಸರಿಪಡಿಸಿಕೊಂಡು "ಗೌರಿ" ಎಂದಳು.

ಭಟ್ಟರ ಮನಸ್ಸು, ಏನು ಕೇಳಬೇಕೆಂದಿತ್ತೋ, ಯಾವ ಪುಣ್ಯನಾಮದ ಪವಿತ್ರಾಕ್ಷರಗಳನ್ನು ಕೇಳಿ ಧನ್ಯವಾಗಬೇಕೆಂದುಕೊಂಡಿತ್ತೋ, ತಟ್ಟನೆ ಕೆರಳಿತು. ನಿರಾಶೆಯ ದಳ್ಳುರಿಗೆ ಸಿಕ್ಕಿ, ಸರ್ರನೆ ಸೀದು ಸೀಕರಿಯಾಗಿ, ಜಳ್ಳಾಯಿತು. ಅವರು ತಮ್ಮನ್ನು ಅಂತೂ, ಅತ್ತ ತಪ್ಪಿ, ಜಗ್ಗನೆ ಮೇಲಕ್ಕೆದ್ದರು. ಆಕಾಶವೆಲ್ಲವೂ ತಟ್ಟನೆ ಬಂದು ಮೇಲೆಬಿದ್ದು ಕವಿದುಕೊಂಡಿದೆಯೆಂಬಂತೆ, ಯಾರಾದರೂ ಹಿಡಿದು ಅವುಕುತ್ತಿದ್ದರೆ ತಪ್ಪಿಸಿಕೊಳ್ಳುವುದಕ್ಕೆ ಏಳುವಂತೆ, ತಟ್ಟನೆ ಎದ್ದರು. ಅಥವಾ ಹಾವು ಹಿಡಿದರೆ, ಚೇಳು ಕುಟುಕಿದರೆ ಏಳುವಂತೆ ಎದ್ದರು.

ಅವರಿಗೆ ತಮ್ಮ ಕಾರ್ಯದ ಅಕರಣೀಯತ್ವವು ಮೂರ್ತಿಮತ್ತಾಗಿ
ಎದುರಿಗೆ ನಿಂತಂತಾಯಿತು. ಅಕಾರ್ಯವನ್ನು ಮಾಡುವುದು ಎಂಬುದನ್ನೇ
ಅರಿಯದ, ಅವರ ಮನಸ್ಸಿಗೆ ತಾವು ಮಾಡಿರುವುದು ಮಹಾಪರಾಧ,
ಪಾತಕ, ಪ್ರಾಯಶ್ಚಿತ್ತವಿಲ್ಲದ ಪಾಪವೆನ್ನಿಸಿತು. ಏನು ಮಾಡಬೇಕು
ಎಂಬುದನ್ನರಿಯದವರಾಗಿ, ಮಾಡಿದುದನ್ನು ಅಳಿಸುವುದು ಹೇಗೆ ಎಂದು
ತಿಳಿಯದವರಾಗಿ, ಮೊದಲಿನ ಧೀರವೃತ್ತಿಯನ್ನು ಅವಲಂಬಿಸಲು ಗೊತ್ತಿಲ್ಲ
ದವರಾಗಿ, ಭ್ರಾಂತರಾಗಿ, ಮುಗ್ಧರಾಗಿ, ಬಿಟ್ಟಕಣ್ಣು ಬಿಟ್ಟಂತೆ, ಗುರಿ
ಯಿಲ್ಲದ ನೋಟವನ್ನು ಅತ್ತಿತ್ತ ತಿರುಗಿಸುತ್ತಿದ್ದರು. ಅಸ್ಥೈರ್ಯವು, ಅಲಿ
ತವು ಸರ್ವಾಂಗಗಳಲ್ಲೂ ಮನೆಮಾಡಿರಲು, ಭಟ್ಟರು ಗಾಳಿಗೆ ಸಿಕ್ಕಿದ ಅರಳಿ
ಯೆಲೆಯಂತೆ ಗಡಗಡನೆ ನಡುಗುತ್ತಿದ್ದುದರಲ್ಲಿ ಆಶ್ಚರ್ಯವೇನು?

ಗೌರಿಯು ಅವಾಕ್ಕಾಗಿ, ಗಾಬರಿಗೊಂಡು, ಬರಿತಿರುಗಿದ ಮೈಯ್ಯನ್ನು
ಊರಿದ ತೋಳುಗಂಬದ ಮೇಲೆ ವಾಲಿಸಿ, ಅವರನ್ನೇ ದುರುಗುಟ್ಟಿಕೊಂಡು
ನೋಡುತ್ತಿದ್ದಳು. ಅವಳಿಗೆ ಮನಸ್ಸು ಸ್ತಬ್ಧವಾಗುವುದಕ್ಕೆ ಪ್ರತಿಯಾಗಿ
ಚಂಚಲವಾಯಿತು. ಯೋಚನೆಗಳು ತರಂಗತರಂಗವಾಗಿ ಹೊರಟವು.
ತನ್ನನ್ನೊಂದುಬೀಳಿ ಯಿರುವ ಬೀದಿಯ ಬಸವಿಯೆಂದುಕೊಂಡಿದ್ದಾರು
ಎನ್ನಿಸಿ, ಒಂದುಗಳಿಗೆ ಕಣ್ಣು ಅರಳಿ ಕೆಂಪಿನ ಕಡೆಗೆ ಹೊರಳಿತು. ಆದರೆ
ಒಲಿದವರಲ್ಲಿ ಮುನಿಯುವುದೆಂತು? ಕಿನಿಸು ಕನಸಾಗಿ, ತೋರುವುದರಲ್ಲಿದ್ದ
ಕೋಪವು ಮರೆಯಾಗಿ, ಮತ್ತೆ ಸಂಕಟವೇರಿ, ಆ ಸಂಕಟವ ತೊಳಲುದನಿ
ಯಲ್ಲಿ ಒಡೆದು ತೋರುತ್ತಿರಲು "ಗಂಡೆಂದು ಈ ಮೈ ಮುಟ್ಟಿದವರಿಲ್ಲ
ಒಡೆಯಾ" ಎಂದಳು.

ಆಡಿದ ಮಾತುಕೇಳಿ ಅವರಿಗೂ ನಾಲಗೆಯಾಡಿತು. "ನಾನೂ
ಯಾರನ್ನೂ ಮುಟ್ಟಿರಲಿಲ್ಲ" ಎಂದರು.

ಭಾವವು ಒಮ್ಮೆ ಮೂಡಿತೆಂದರೆ, ವೃತ್ತಿಯೊಮ್ಮೆ ಬಾಹ್ಯಮುಖ
ವಾಯ್ತೆಂದರೆ, ಯೋಚನೆಗಳು ಹೊರಡುವುದಕ್ಕೆ ಸಾವಕಾಶವೇ? ಮೂಢ
ವಾಗಿ, ಮುಗ್ಧವಾಗಿ, ನಿಸ್ತೇಜವಾಗಿ ಅಡಗಿ ಕುಳಿತಿದ ಅವರ ಮನಸು

ಏನೇನೋ ಭಾವನೆಗಳನ್ನು ತಂದೊಡ್ಡಿತು. ಸಮೃದ್ಧವಾದ ಮನೆ, ನಗು ನಗುತ್ತಾ ನಲಿಯುವ ಮಕ್ಕಳು, ತನ್ನ ಭಾಗ್ಯಲಕ್ಷ್ಮಿಯಂತೆ ಒಪ್ಪುವ ಮಡದಿ, ಎಲ್ಲರಲ್ಲೂ ಅಭಿಮಾನವಿಟ್ಟುಕೊಂಡು ಸಂತೃಪ್ತವಾಗಿರುವ ಹೃದಯದಿಂದ ಸಂಸಾರ ಮಾಡಿಕೊಂಡಿದ್ದ ತಾನು, ಎಲ್ಲವೂ ಒಮ್ಮೆ ಮನೋವೇಗವಲಿ, ಮಿಂಚಿನ ಪಿಳಕಂತೆ, ಚಿತ್ತಭಿತ್ತಿಯಮೇಲೆ ಕಾಣಿಸಿ ಮರೆಯಾದವು. ಉತ್ತರಕ್ಷಣದಲ್ಲಿ, ಮುಚ್ಚಂಜೆಯಲ್ಲಿ, ಊರಮಧ್ಯದ ಚಾವಡಿಯಲ್ಲಿ, ಅಜ್ಞಾತಕುಲಗೋತ್ರಳಾದ ಯಾವಳೋ ಒಬ್ಬಳನ್ನು ತಾನು.........ಅದೂ ಕಾಣಿಸಿತು.

ಭಟ್ಟರ ಬೇಸರವು ಮಟ್ಟು ಮೀರಿತು ಜುಗುಪ್ಸೆಗೆ ಆದಿಯೂ, ಆಳವೂ ಇಲ್ಲದಂತಾಯ್ತು. ಸಂಕೋಚವು ತಾನೇ ತಾನಾಯಿತು ಆತ್ಮ ನಿಂದೆಯ ಆಳಿಗೆ ಮೇರೆಯಿಲ್ಲವಾಯ್ತು. ಭಟ್ಟರು ಅಲ್ಲಿ ನಿಲ್ಲದೆ ಹೊರಟು ಬಿಟ್ಟರು. ಸುರಿಯುವ ಕಣ್ಣೀರನ್ನು ಒರೆಸಿಕೊಳ್ಳುತ್ತಾ, ಹೊದೆದಿದ್ದ ಶಾಲನ್ನು ಸವರಿಸಿಕೊಳ್ಳುತ್ತಾ, ಅತ್ತಕಡೆ ಹೊರಟುಹೋದರು.

---

## ಹನ್ನೊಂದನೆಯ ಪರಿಚ್ಛೇದ

ಒಂದುಗಳಿಗೆಯೊಳಗಾಗಿ ಬಸವಿಯ ಪ್ರಬಲವಾದ ಬದಲಾವಣೆಯು ನಡೆದು ಹೋಯಿತು. ನಟ್ಟಡವಿಯ ಚಿಗುರೆಯಂತೆ ಅಂಕೆಸಂಕೆಗಳಿಲ್ಲದೆ ತಾನೇ ತಾನಿಗಿದ್ದವಳಿಗೆ ಎಲ್ಲಿಯದೋ ಒಂದು ಸಂಕೋಚವು, ಕೊರತೆಯು ಬಂದು ಆವರಿಸಿಬಿಟ್ಟಿದೆ ಆವರಿಸುತ್ತಿರುವ ಆ ಚಿಂತೆಯಲ್ಲಿ, ಅವಳು ಕುಗ್ಗಿದ್ದಾಳೆ. ನಿಸ್ತೇಜಳಾಗಿ ಹೋಗಿದ್ದಾಳೆ. ನಗುವಂತಹ ನಲವಿಲ್ಲದಿದ್ದರೂ, ಒಲಿಯುವಂತಹ ಸಂತಸವಿಲ್ಲದಿದ್ದರೂ, ತುಂಬಿದ ಕೊಡದಂತೆ ತೃಪ್ತಿಯಿಂದಿದ್ದವಳು, ಹುಳು ಹೊಡೆದ ಹೂವಿನಂತೆ ಆಗಿಹೋಗಿದ್ದಾಳೆ.

ಬಸವಿಯು ಬಹಳಹೊತ್ತು ಚಾವಡಿಯಲ್ಲೇ ಕುಳಿತಿದ್ದಳು. ಏನೋ ಹರಿಯದ ಹತ್ತಾರ ಆಲೋಚನೆಗಳು. ಅಂತಹ ಆಲೋಚನೆಗಳನ್ನು ಅವಳು ಅರಿಯದವಳು. ಅವಳಿಗೆ ತಡೆಯಲಾರದಷ್ಟು ತಲೆನೋವು ಬಂದಿತು. ಅಲ್ಲಿಂದ ಎದ್ದಳು. ಸಂಜೆಯ ಹೊತ್ತಿನಲ್ಲಿ ಸ್ನಾನಮಾಡುವುದಕ್ಕೆ ಅವಳು ಹೊರಟುಹೋಗಿರಬೇಕು. ಅವಳು ಆ ಹೊತ್ತು ಹೋಗಿಲ್ಲ.

ಬಸವಿಯು ನೇರವಾಗಿ ದೇವಸ್ಥಾನಕ್ಕೆ ಹೋದಳು. ಅಲ್ಲಿ ದೇವರ ದೀಪವೂ ಕುಡುಗಟ್ಟಿಕೊಂಡು ಅವಳಂತೆಯೇ ಮೊಂಕಾಗಿತ್ತು. ಅಭ್ಯಾಸ ಬಲದಿಂದ ಅಲ್ಲಿ ಹೋಗಿ, ಆ ಕುಡುವನ್ನು ಮಿಡಿದು ಬತ್ತಿಯೆತ್ತಿ ದೀಪವನ್ನು ಬೆಳಗಿದಳು. ''ಶಿವನೇ! ನನ್ನ ದುಃಖವನ್ನೂ ಹೀಗೆಯೇ ಮಿಡಿಯಬಾರದೇ'' ಎಂದುಕೊಂಡಳು. ಕಣ್ಣಿನಲ್ಲಿ ಎರಡು ಹನಿಯುದುರಿತು. ಒಂದು ಕಂಬ ವನ್ನೊರಗಿಕೊಂಡು ಕುಳಿತಳು. ನಿರ್ಜನವಾದ ಪ್ರದೇಶವೆಂದು ಖಂಡಿತ ಮಾಡಿಕೊಂಡು ಒತ್ತುವ ತನ್ನ ದುಃಖಕ್ಕೆ ಎಡೆಗೊಟ್ಟಳು. ಕಣ್ಣಿನಲ್ಲಿ ನೀರು ಧಾರಾಳವಾಗಿ ಹರಿದು ಹೋಯಿತು. ನಿರರ್ಗಳವಾಗಿ, ತಡೆಯಿಲ್ಲದೆ, ಏಕೆಂದು ಕೇಳುವವರಿಲ್ಲದೆ, ಒಂದೇ ಸಮನಾಗಿ ಅತ್ತೂ ಅತ್ತೂ, ಅತ್ತು ಬಿಟ್ಟಳು.

ಅವಳಿಗೆ ಆವೇಗವಿಳಿದು, ಶಾಂತಿಯಾಗುವ ವೇಳೆಗೆ ಚೆನ್ನಾಗಿ ಕತ್ತ ಲಾಗಿತ್ತು. ತಾನು ಹುಟ್ಟಿದುದು ಏಕೆಂದು ನಿಂದಿಸಿಕೊಂಡು, ಹುಟ್ಟಿಸಿದೆ ಏಕೆಂದು ಶಿವನನ್ನು ದೂರಿ, ಮಾಡುವುದಕ್ಕೆ ಕೆಲಸವಿಲ್ಲದೆ, ಕುಳ್ಳಿರುವುದಕ್ಕೆ ಸಾಧ್ಯವಿಲ್ಲದೆ, ಸ್ನಾನವನ್ನಾದರೂ ಮಾಡಿ ಬರೋಣವೆಂದು ಹೊರಟಳು.

ಕೆರೆಗೆ ಬಂದಳು. ಎಂದೂ ಇಳಿಯುತ್ತಿದ್ದ ಕಡುವಿಗೆ ಹೋಗಲಿಲ್ಲ. ಅಲ್ಲಿ ತನಗೆ ಬೇಡವಾದ ಅಥವಾ ಆಗ ತಾನು ನೋಡಲು ಇಷ್ಟಪಡದ ಯಾರೋ ಇರುವರೆಂದು ಅದನ್ನು ಬಿಟ್ಟು, ಬೇರೆ ಕಡುವಿಗೆ ಹೋದಳು. ಅಲ್ಲಿಗೆ ಸಂಜೆಯಾದ ಮೇಲೆ ಯಾರೂ ಹೋಗುತ್ತಿರಲಿಲ್ಲ. ಅಲ್ಲಿ ಮೆಟ್ಟಲು ಎತ್ತರ, ಸಾಲದೆ ಪದೇ ಪದೇ ಹೋಗಿ ಬರುವವರು ಕಡಿಮೆಯಾಗಿ ಪಾಚಿಯು ಹೆಚ್ಚು, ಜಾರಿಕೆ ಬಹಳ. ಇದೆಲ್ಲವೂ ಸೇರಿ, ಅಲ್ಲಿ ಒಂದು

ದೆವ್ವನಿರುವುದಾಗಿಯೂ, ಸಂಜೆಯಾದಮೇಲೆ ಅಲ್ಲಿ ಅದರ ಸಾಮ್ರಾಜ್ಯ ವಾಗಿಯೂ ಜನಜನಿತವಾದ ವದಂತಿ. ಅಂತೂ ಅದನ್ನು ವಿಚಾರಿಸುವವರಿಗಿಂತ, ನಂಬಿದವರೇ ಹೆಚ್ಚು. ಸುಲಭವಾಗಿ ನಂಬಬಹುದಾದ ಯೆಡೆಯಲ್ಲಿ, ಕಷ್ಟವಾದ ಸಂದೇಹಕ್ಕೆ ಎಡೆಗೊಟ್ಟು ವಿಚಾರಿಸುವ ಶ್ರಮವನ್ನೇಕೆ ವಹಿಸಬೇಕು?

ಸ್ನಾನಕ್ಕಿಳಿದಳು. ಮತ್ತೆ ಅದೇ ಯೋಚನೆ, ತಿರುಗಿಯೂ ಅಳು. ಈ ಹಾಳುಜನ್ಮ ಹೀಗೆಯೇ ಹೋಗಿಬಿಟ್ಟರೆ, ಎನ್ನಿಸಿತು. ನಡುವಿನಷ್ಟು ನೀರಿನಲ್ಲಿ ನಿಂತಿದ್ದಳು. ಹಾಗೆಯೇ ಬಿದ್ದುಬಿಡಲೇ ಎನ್ನಿಸಿತು. ಆದರೆ ಆಸೆ. ಅಷ್ಟಲ್ಲದೆ ಹೇಳಿದನೆ ಆ ಕವಿಕುಲಗುರುವು "ಆಶಾಬಂಧಃ ಕುಸುಮ ಸದೃಶೋ ಪ್ರಾಯಶೋಹ್ಯಂಗನಾನಾಂ ಸದ್ಯಃ ಪಾತಿ ಪ್ರಣಯಿ ಹೃದಯೇ ವಿಪ್ರಯೋಗೇ ರುಣದ್ಧಿ" ಎಂದು.

ಅವಳಿಂದ ನೀರಿನಲ್ಲಿ ಬೀಳಲು ಸಾಧ್ಯವಾಗಲಿಲ್ಲ. ಮೈನಡುಗಿತು. ಅವಳು ಎಂದೂ ಇಲ್ಲದಷ್ಟು ಹೆದರಿದಳು. ಅಲ್ಲಿ ದೈವವಿದ್ದಿತಲ್ಲ ಅದೇ ಹೆದರಿಸಿರಬೇಕು ಎನ್ನಿಸಿತು. ಅಂತೂ, ನೀರಿಗೇನೋ ಬೀಳಲಿಲ್ಲ. ಸ್ನಾನ ಮಾಡಿಕೊಂಡು ಮೇಲಕ್ಕೆ ಬಂದಳು.

ಎಂದಿನಂತೆ ಮಡಿಯನ್ನು ತಂದಿರಲಿಲ್ಲ. ಚಳಿಯಲ್ಲಿ ನಡುಗುತ್ತ ಹಾಗೆಯೇ ಅಲ್ಲಿಯೇ, ಬಟ್ಟೆಯಿಂದ ನೀರು ಸೋರುತ್ತಿರುವ ಹಾಗೆಯೇ, ಕುಳಿತುಕೊಂಡಳು ಮಗ್ಗುಲಲ್ಲಿದ್ದ ಹಂತದ ಮೇಲೆ. ಅಡ್ಡಗೈ ಮೇಲೆ ತಲೆ ಒರಗಿದಳು. ಮತ್ತೆ ಅಳುವಿಗೆ ಮೊದಲಾಯಿತು. ಅಳುವಿನ ಭೀತಿಗೆ ಚಳಿಯು ಓಡಿತು.

ಅಲ್ಲಿಯೂ ಅವಳನ್ನು ಅಳಬೇಡವೆನ್ನುವವರು ಯಾರೂ ಬರಲಿಲ್ಲ. ಅವಳು ಕುಳಿತು ಸುಮಾರು ಅಷ್ಟು ಹೊತ್ತಾಯಿತು. ಭುಜದ ಮೇಲಿನ ಬಟ್ಟೆಯು ಆಡುವಗಾಳಿಗೆಸಿಕ್ಕಿ ಒಣಗುವಷ್ಟು ಹೊತ್ತು ಕುಳಿತಿದ್ದಳು. ಅವಳಿಗೆ ಇಹಲೋಕದ ಚಿಂತೆಯಿಲ್ಲ. ಅವಳ ಚಿಂತೆಗೆ ರೂಪವಿಲ್ಲ, ಒಂದು

ಮುಖವಿಲ್ಲ ಅವಳ ಶಿವನೇ ಎದುರಿಗೆ ಬಂದು ನಿಂತು "ಏನು ಬೇಕು ? ಹೇಳು ಕೊಡುವೆನು" ಎಂದರೂ, ಅವಳು ತನ್ನ ಆಶೆಯನ್ನು ಹೇಳಿಕೊಳ್ಳ ಲಾರಳು. ಅದು ಬೇಕೆಂಬ ಹಿಡಿತವೋ ಬೇಡವೆಂಬ ಬಿಡುವಿಕೆಯೋ ಅದೇ ಅವಳಿಗೆ ತಿಳಿಯದು. ಅಂತೂ ಗಾಳಿಗೆ ಸಿಕ್ಕಿದ ಎಳೆ ಬಳ್ಳಿಯಂತೆ, ತನ್ನ ಭಾರದಿಂದ ತೊನೆಯುವ ಎತ್ತರದಲ್ಲಿರುವ ಮಾವಿನ ಕಾಯಂತೆ, ಅವಳು ಅಲ್ಲಾಡುತ್ತ ಇದ್ದಾಳೆ. ಹೃದಯದಲ್ಲಿ ಆದ ವಿಕ್ಷೋಭವು, ಕಲ್ಲೋಲವು, ಕಂಬನಿಯನ್ನು ಹರಿಯಿಸುವ ಕಾರ್ಯದಲ್ಲಿ ಪ್ರವೃತ್ತವಾಗಿದೆ. ಅಂತೂ ಕ್ಷತವಿಕ್ಷತವಾಗಿರುವ ಅವಳ ಹೃದಯವು ಹೇಗಿರಬಹುದು ಎಂದು ಹೇಳಿದರೆ, ನೋಡಿದವರು, ಅತ್ತು ಅತ್ತು ಕೆಂಡದಹಾಗಿರುವ ಅವಳ ಕಣ್ಣುಗಳಂತೆಯೇ ಇದೆಯೆಂದು ಹೇಳುವರು.

ಇನ್ನೂ ಅಷ್ಟು ಹೊತ್ತಾಯಿತು. ಬೆನ್ನಿನ ಮೇಲಿನ ಬಟ್ಟೆಯೂ ಒಣಗುವಷ್ಟು ಹೊತ್ತಾಯಿತು. ಆಗ, ಅತ್ತಕಡೆಯಿಂದ ಹಳ್ಳಿಯಕಡೆಗೆ ಯಾರೋ ಇಬ್ಬರು ಹೋಗುತ್ತಿದ್ದಾರೆ. ಇಬ್ಬರ ಕಯ್ಯಲ್ಲಿಯೂ ಹಣೆ ಮಟ್ಟದ ದೊಡ್ಡದೊಣ್ಣೆಗಳು. ಕರಿಯ ಕಂಬಳಿಯ ಮುಸುಕು ಬಲವಾಗಿದೆ. ಇಬ್ಬರೂ ನೀರವ, ನಿಷ್ಪಂದ. ಇಬ್ಬರ ದೊಣ್ಣೆಗಳ ಸದ್ದೂ ವಿಚಿತ್ರವಾಗಿದೆ. ದೂರದಿಂದ ಕೇಳಿದರೆ ಯಾವುದೋ ಮೃಗವು ನಡೆದುಕೊಂಡು ಹೋಗುತ್ತಿ ರುವ ಶಬ್ದದಂತೆ ಕೇಳಿಸುವುದು.

ಇವಳು ತಲೆಯೆತ್ತುವ ವೇಳೆಗೂ ಅವರು ಅಲ್ಲಿಗೆ ಬರುವ ವೇಳೆಗೂ ಸರಿಯಾಯಿತು. ಹಿಂದಿನವನ ಕಣ್ಣು ಬಲು ಚುರುಕು. ಆ ಕತ್ತಲಲ್ಲಿಯೂ ಸುಮಾರು ಹತ್ತು ಮಾರಿನಷ್ಟು ದೂರದಲ್ಲಿ, ಕೆಳಗೆ, ನೀರಿನ ಸಮೀಪದಲ್ಲಿ, ಮೆಟ್ಟಲುಗಳಿಗೆ ಹತ್ತಿಕೊಂಡಂತೆ, ಇರುವ, ವಸ್ತುವೋ, ವ್ಯಕ್ತಿಯೋ ಚಲಿ ಸಿದುದನ್ನು ಕಂಡು, ಸಣ್ಣದನಿಯಲ್ಲಿ "ಅಲ್ಲಿಯೇನೋ ಆದೆ ಅನ್ನೊಹಂಗದೆ" ಎಂದನು. ಇಬ್ಬರೂ ಹಾಗೆಯೇ ನಿಂತು ಕಣ್ಣಿಕ್ಕಿನೋಡಿದರು. ಹೌದು, ಯೇನೋ ಇದೆ. ಮುಂದಿನವನು ಒಂದು ಹೆಜ್ಜೆ ಮುಂದಿಟ್ಟು "ಯಾರು" ಎಂದನು. ಸಣ್ಣನಿದ್ದರೂ ಗಂಭೀರವಾಗಿ ಮರ್ಮಭೇದಿಯಾದ ಆ ದನಿಗೆ

ಉತ್ತರಕೊಡದಿರಲು ಯಾರಿಗೂ ಸಾಧ್ಯವಿಲ್ಲ. ಅಲ್ಲಿಂದ ಉತ್ತರ ಬಂತು. ಉಪ್ಪುಕಾರವೇನೂ ಇಲ್ಲದ ಒಂದು ಬರಿಯ "ನಾನು" ಅಷ್ಟೆ!

ನಾಯಕನಿಗೆ ಆ ದನಿಯು ಗೊತ್ತಾಯಿತು: ಗುರುತು ಸಿಕ್ಕಿತು. ಆದರೆ ಅನುಮಾನ. ಬಸವಿಯು ಅತ್ತುದನ್ನು ಅವನು ಎಂದೂ ಕಾಣ. "ಈ ದನಿಯು ಅವಳದೇ. ಆದರೆ ಅತ್ತು ಭಾರವಾಗಿದೆ. ಇದೇನು?" ಎಂದು ಕೊಂಡು, ಸರಸರನೆ ಇಳಿದು ಅಲ್ಲಿಗೆ ಹೋದನು. ಹೌದು ಬಸವಿ.

ನಾಯಕನಿಗೆ ಆಶ್ಚರ್ಯವಾಗಿ "ಇದೇನಾ ಇಷ್ಟುಹೊತ್ತಿನಲ್ಲಿ ಇಲ್ಲಿ ಕೂತಿದ್ದೀಯೇ?" ಎಂದನು. ಅವಳೂ ಏನೋ ಕೂತುಬಿಟ್ಟೆನೆಂದಳು. ಅವನು "ಏನೋ ಹಂಗೆ ನೀರಿನಲ್ಲಿ ಉರುಳಿಕೊಂಡು ಈಗ ಇರೋದೈಯ್ಯದ ಜೊತೆಗೆ ನೀನೂ ದೈಯ್ಯವಾಗಿ, ಜನಾನ ಮುರುಕೋಬೇಕೂಂತ ಕೂತು ಕೊಂಡಿದ್ದೀಯೋ? ಬಾ! ಬಾ! ನಡೀ ಹೋಗೋಣ" ಎಂದನು.

ಬಸವಿಗೂ ಹೌದು ಎನ್ನಿಸಿತು. ನೀರಿನಲ್ಲಿ ಬಿದ್ದರೆ ದುರ್ಮರಣ. ದುರ್ಮರಣವಾದರೆ ದೈಯ್ಯವಾಗುವುದು. ದೈಯ್ಯವಾದರೆ ಇನ್ನೊಬ್ಬ ರನ್ನು ಗೋಳು ಹುಯ್ದುಕೊಳ್ಳುವುದು. ಇದೇಕೆ? ಅನ್ಯಾಯ ಎಂದು ಕೊಂಡು ಹೊರಟಳು.

ದಾರಿಯಲ್ಲಿ ಬರುತ್ತ ನಾಯಕನು ಹಿಂದಿನವನನ್ನು ಕುರಿತು, "ಎಲಾ ಇವಳನ್ನು ನೋಡುತ್ತಲೂ ನೆನೆಪಾಯಿತು. ನಾಳೆ ಆ ಚುರುಕೆತ್ತು ಯಾವ ಗಾಡೀಗೂ ಕಟ್ಟಕೂಡದು. ನಾಳಿದ್ದು ಅಯ್ಯನವರನ್ನು ಕಳಿಗಿಸಿಕೊಡ ಬೇಕು" ಎಂದನು.

ಬಸವಿಗೆ ಎದೆಯು ಜಗ್ಗೆಂದಿತು. "ಹಾಗಾದರೆ ನಾಳಿದ್ದು ಹೊರಟು ಹೋಗುವರೆ? ಮುಂದೇನುಗತಿ?" ಎನ್ನಿಸಿ, ಯೇಕೋ ಯೇನೋ ನಾನು ನೀರಿನಲ್ಲಿ ಬಿದ್ದು ಹೋಗಿದ್ದರೆ ಚೆನ್ನಾಗಿತ್ತು. ಯೇಕೆ ಯೆದ್ದು ಬಂದೆ?" ಎಂದುಕೊಂಡಳು. ಹಾಗೆಯೇ ಇನ್ನೂ ಒಂದು ಮಾತು ನೆನ ಪಿಗೆ ಬಂತು. ಇನ್ನೂ ಒಮ್ಮೆ ಅವಳು ಚಕಿತಳಾದಳು. "ಈ ಮಾತು

ನನ್ನನ್ನು ನೋಡಿ ಯೇಕೆ ನೆನೆಪಾಗಬೇಕು ? ಸಂಜೆಯಲ್ಲಿ ಇವನು ಚಾವಡಿಯ ಬಳಿಯಲ್ಲಿದ್ದನೇ ? ಕಂಡನೇ ?" ಹುಟ್ಟಿದ ಸಂದೇಹವು ಅಲ್ಲಿಯೇ ಅಡಗಿಹೋಯಿತು. "ನೋಡಿದರೇನು ?" ಎಂದುಕೊಂಡಳು. ಹೆಣ್ಣು ರೇಗಿತು. ಹುಲಿಗೆ ತಾನೇ ಅಷ್ಟು ಧೈರ್ಯವುಂಟೇನು ?



## ಹನ್ನೆರಡನೆಯ ಪರಿಚ್ಛೇದ.

ಭಟ್ಟರು ಹೊರಡುವಾಗ ಆಲೋಚಿಸಿದ್ದಂತೆ, ಷಷ್ಠಿಯ ದಿನವೇ ಸುಬ್ರಹ್ಮಣ್ಯಕ್ಕೆ ಹೋದರು. ಯಥಾಸಾವಕಾಶವಾಗಿ ಸ್ನಾನಾಹ್ನಿಕಗಳು ನಡೆದುವು. ಆದರೆ ಮೊದಲಿದ್ದ ಪಾದರಸದಂತೆ ಆಡುತ್ತಿದ್ದ ಗುಡುಗಾಟವಿಲ್ಲ. ಬ್ರಹ್ಮೋಪದೇಶವನ್ನು ಪಡೆದ ವಟುವಿನ, ಪೂರ್ಣಾಹುತಿಯನ್ನು ಕೈಗೊಂಡ ಯಜ್ಞೇಶ್ವರನ ವರ್ಚಸ್ಸು ಅವರ ಮುಖದಲ್ಲಿ ಯಾವಾಗಲೂ ವಿರಾಜಿಸುತ್ತಿತ್ತು. ಈಗ ಅದು ಕಡಿಮೆಯಾಗಿದೆ. ಅಂತರಂಗದ ಒಳಗುದಿಯು ಮುಖಕ್ಕೆ ಒಂದು ಆವರಣವನ್ನು ಹೊಚ್ಚಿದೆ. ಈಗಿನ ಭಟ್ಟರ ಮುಖವು ಮಳೆಮೋಡದ ಹಿಂದಿನ ಪ್ರಭಾಕರಮಂಡಲದಂತೆ ತೇಜಸ್ಸುಂಟು; ಆದರೆ ಮೊದಲಿನಷ್ಟಿಲ್ಲ.

ಮಧ್ಯಾಹ್ನದವೇಳೆಗೆ ಹೋಗಿ ದೇವರ ದರ್ಶನಾದಿಗಳನ್ನು ಮಾಡಿಕೊಂಡು ಬಂದುದಾಯಿತು. ಒಂದು ವಿಶೇಷವೆಂದರೆ, ಭಟ್ಟರು ಏನೋ ವಿಷಣ್ಣಭಾವದಲ್ಲಿದ್ದಾರೆ. ದೇವರಮುಂದೆ ನಿಂತು ಕಣ್ಣೀರು ಸುರಿಸಿದರು. ಆದರೆ ಅದು ಭಕ್ತಿಯ ಭರದಿಂದ ಉರುಳುವ ಆನಂದಾಶ್ರುಗಳಲ್ಲ. ಯಾವನಾದರೊಬ್ಬ ಸಮರ್ಥನು ಆ ಕಂಬನಿಗಳನ್ನು ತೆಗೆದು ಪರೀಕ್ಷಿಸಿದ್ದರೆ ಸಮುದ್ರದಲ್ಲಿರುವ ಬಾಡಬನಂತೆ, ಆ ಹನಿಗಳಲ್ಲಿಯೂ ಒಳಗಿನ ಸಂತಾಪಾನಲದ ಉಷ್ಣವು ಉರಿಯುತ್ತಿರುವುದನ್ನು ಕಾಣಬಹುದಾಗಿತ್ತು.

ಭಟ್ಟರು ಉಪಚಾರದ ಮೋಹಕ್ಕೆ ಕಟ್ಟುಬಿದ್ದು, ಹಾಗೂ ಹೀಗೂ ಹಣ್ಣು ತಿಂದು ಹಾಲು ಕುಡಿದರು. ನಡುನಡುವೆ ಎಳನೀರಿನ ಪಾನೀಯ. ಇಟ್ಟದ್ದೆಲ್ಲವನ್ನು ಮುಗಿಸಬೇಕೆಂದು ನಾಯಕನ ಬಲವಂತ. "ನನ್ನಂಥವರು ಮೂವರು ಬಂದರೂ ಆಗುವಷ್ಟು ಇಟ್ಟು ನನ್ನನ್ನು ಒಬ್ಬನನ್ನು ಎಲ್ಲಾ ಮುಗಿಸೆಂದರೆ ಹೇಗೆ ಸಾಧ್ಯ?" ಎಂದು ಅವರು. ನಾಯಕನು "ರುಚಿಯಾಗದೆ ಕಣಪ್ಪಾ! ಸಲ್ಲಿಸಿಬಿಡಿ. ಜೀವಾತ್ಮ ತೃಪಿಯಾಗಲಿ" ಎಂದನು. ಭಟ್ಟರೂ ತುಂಬಿದ ತೃಪ್ತಿಯ ನಗೆಯ ಬೆಳಕನ್ನು ಪಸರಿಸುತ್ತಾ "ಹೌದಪ್ಪಾ! ರುಚಿಯಾಗಿದೆ-ನಾಲಗೆ ಚಪ್ಪರಿಸುವಷ್ಟು ರುಚಿಯಾಗಿದೆ. ಹಾಗೆಂದು ತಿಂದರೆ ಹೊಟ್ಟೆ ಹಿಡಿಸಬೇಡವೆ?" ಎಂದು ಲೋಕಾಭಿರಾಮವಾಗಿ ನುಡಿದರು.

ಅವರ ಮನಸ್ಸು ಕಾದು ಕುಳಿತಿದ್ದುದು "ಹೌದು, ಹೌದು, ನಾಲಗೆಯ ಚಪಲಕ್ಕೆ ಸಿಕ್ಕಿಕೊಂಡರೆ, ಹೊಟ್ಟೆಗೆ ಇಡಿಯುವುದೆ?" ಎಂದಿತು. ಕೂಡಲೇ ಉತ್ತರಕ್ಷಣದಲ್ಲಿಯೇ, ಉಸಿರು ಮೊಗಚುವುದಕ್ಕಿಂತ ಮುಂಚೆಯೇ ಅವರ ಕಿವಿಗೆ ಒಂದು ಪ್ರಶ್ನೆಯು ಕೇಳಿಸಿತು. ಯಾರೋ ಹಿಂದಿನಿಂದ "ಹಾಗಾದರೆ ಅಪ್ಪೊತ್ತಿನದು ಚಪಲಕ್ಕೆ ಗಂಟುಬಿದ್ದುದಲ್ಲವೋ? ಅದೇ ಆಗಬಹುದಂತೆ ಇದೇಕೆ ಆಗಬಾರದು?" ಎಂದಹಾಗಾಯಿತು. ಇಲ್ಲವೆನ್ನುವುದು ಸಾಧ್ಯವಿಲ್ಲ. ಕಿವಿಯು ಕೇಳಿದೆ. ಎತ್ತಿತ್ತ ನೋಡಿದರೂ ಯಾರೂ ಇಲ್ಲವಾಗಿ, ಕೇಳಿದವರು ಯಾರೂ ಇಲ್ಲವೆಂದು ಸಿದ್ಧ. ಅಂತೂ ಕೇಳುವವರಿಲ್ಲದೆ ಬಂದ ಪ್ರಶ್ನೆಯು ಕಿವಿಗೆ ಬೀಳುತ್ತಲೂ ಭಟ್ಟರು ಅಧೀರರಾದರು. ಮುಖದ ಪ್ರಸನ್ನತೆಯು ಮಸುಳಿತು. ಆಡುತ್ತಿದ್ದ ಮಾತು ಅಲ್ಲಿಗೇ ನಿಂತು ಹೋಯಿತು. ಕೈಯ್ಯು ತಲೆಯಮೇಲಕ್ಕೆ ಹೋಯಿತು.

ಅರೆನುಡಿಯಲ್ಲಿ ನಿಂತುಹೋದ ಅವರ ಮಾತನ್ನು ಕೇಳಿ ನಾಯಕನು ನೆತ್ತಿಹತ್ತಿರಬೇಕೆಂದುಕೊಂಡನು. ನಾಯಕನಿಗೆ ನಗುವಿನಲ್ಲಿ ಬಹಳ ಭಕ್ತಿ. ನವೆಯಾಗಲಿ, ನೋವಾಗಲಿ ನಗುತ್ತಿದ್ದರೆ ಎಲ್ಲವೂ ಸರಿಹೋಗುವುದೆಂದು ಅವನ ನಂಬಿಕೆ. ಅದಕ್ಕಾಗಿ ಅವನು "ಎಲ್ಲೋ ಮನೆಯಲ್ಲಿ ನೆಂದುಕೊಂಡಿರಬೇಕು ಕಣಪ್ಪಾ!" ಎಂದನು. ಭಟ್ಟರ ವೃತ್ತಿಯು ಅಸ್ತವ್ಯಸ್ತವಾಯಿತು.

ಹೊರಡುವುದಕ್ಕೆ ಮುಂಚೆ ತಮಗಾದ ಕನಸು, ಅದನ್ನು ಹೆಂಡತಿಗೆ ಹೇಳದೆ ತಾವು ಮುಚ್ಚಿಟ್ಟುಕೊಂಡುದು; ಅದರಂತೆಯೇ ನಡೆದಿರುವ, ಸಂಭವಿಸಿರುವ, ಸಂಘಟನೆಗಳು; ಎಲ್ಲವನ್ನೂ ನೆನೆದು ಅವರ ಮನವು ವಿಕಲವಾಯಿತು'' ''ಇಲ್ಲಿ ನಡೆದುದು ಮನೆಯಲ್ಲಿ ಅವಳಿಗೆ ತಿಳಿದರೆ ಒಂದು ಸಣ್ಣ ಪ್ರಳಯವೇ ಆಗಿ ಹೋಗುವುದು.'' ಎಂದು ಅವರ ಹೃದಯವು ಅಲ್ಲಾಡಿಹೋಯಿತು.

ನಮ್ಮಂತರಂಗವು ಇತರರಿಗೆ ಕಾಣದಂತೆ ಇರುವುದು ನಮಗೆಷ್ಟು ಅನುಕೂಲ! ಹಾಗಲ್ಲದೆ, ನಮ್ಮ ಹೃದಯವು ಗಾಜಿನ ಬುರುಡೆಯಂತಿದ್ದು, ಅದರೊಳಗಿನ ಆಲೋಚನೆಗಳೆಲ್ಲವೂ ನೋಡುವವರಿಗೆಲ್ಲ ತಿಳಿಯುವ ಹಾಗೆ ಆಗಿದ್ದರೆ ನಮ್ಮ ಗತಿಏನು? ಎಂತಹ ಪ್ರಮಾದವಾಗುತ್ತಿತ್ತು? ದೊಡ್ಡತನದ ಅಂಗಿಯನ್ನುತೊಟ್ಟು ಮೆರೆಯುತ್ತಿರುವವರು ಎಷ್ಟುಜನರು ಅಲ್ಪರೆಂದು, ಉತ್ತಮರಲ್ಲವೆಂದು ಸಿದ್ಧಾಂತವಾಗುತ್ತಿತ್ತು? ಬಹುಶಃ ಹಾಗೆ ಹೃದಯವು ಕಾಣುವಂತೆ ಇದ್ದಿದ್ದರೆ, ಪವಿತ್ರ ಹೃದಯಕ್ಕೊಂದು ನೊಬೆಲ್ ಪ್ರೈಜ್ ಇದ್ದಿದ್ದರೆ, ಅದು ನಮಗೇ ಬರುತ್ತಿತ್ತು ಎನ್ನುವವರೂ ಉಂಟೋ ಏನೋ? ವ್ಯಕ್ತಿಸ್ವಾತಂತ್ರ್ಯದ ಈ ಯುಗದಲ್ಲಿ ಆಲೋಚನಾ ಸ್ವಾತಂತ್ರ್ಯವೂ ಉಂಟಾಗಿ ನಾವು ಪ್ರತಿಯಾಡಲು ಆಳಿಸುವುದಿಲ್ಲ. ಅದರೂ ಪ್ರೈಜೂ ಇಲ್ಲ. ಇದ್ದರೂ ಅದನ್ನು ಪಡೆಯುವಂತಹವರೂ ಹುಟ್ಟುವುದಿಲ್ಲ, ಎಂದು ಮಾತ್ರ ನಮ್ಮಷ್ಟಕ್ಕೆ ನಾವು ಹೇಳಿಕೊಳ್ಳುವೆವು.

ಅಂತೂ ಭಟ್ಟರ ಅಂತರಂಗವು ನಾಯಕನಿಗೆ ತಿಳಿಯಲಿಲ್ಲ. ಅವನು ಆ ಅವರ ಚಿತ್ತವೃತ್ತಿಯ ಬದಲಾವಣೆಯನ್ನು ಬೇರೊಂದು ವಿಧವಾಗಿ ಬಗೆದನು. ಮನೆಯನ್ನು ಬಿಟ್ಟುಬಂದು, ಹೆಂಡತಿ ಮಕ್ಕಳನ್ನು ನೋಡಿ, ಸುಮಾರು ಹದಿನೈದು ದಿನವಾಗಿದೆ. ಅದರಿಂದ ಅವರ ಮನಸ್ಸು ಕ್ಷುಬ್ಧವಾಗಿರಬಹುದು ಎಂದುಕೊಂಡನು. ಭಟ್ಟರ ಮೌನದಿಂದ, ಅವರ ಹೃದಯದೊಳಗಿನ ಅಲ್ಲೋಲಕಲ್ಲೋಲವು ತಿಳಿದರೂ, ಅದರ ಕಾರಣವನ್ನು ಮಾತ್ರ ಬೇರೆಯಾಗಿ ಭಾವಿಸಿಕೊಂಡನು. ಅಪರಾಧಿಯು ತನ್ನಪರಾಧವು ಲೋಕಕ್ಕೆ ತಿಳಿದರೇನುಗತಿ ಎಂದು ಹೆದರಿ ಜಗ್ಗುವಂತೆ, ಭಟ್ಟರು ಬನವಿಯ ಪ್ರಸಂಗವು ಪಾತಮ್ಮನವರಿಗೆ ತಿಳಿದರೇನುಗತಿ ಎಂದು ಬೆದರಿದರೆ, ನಾಯಕನು

ಅದನ್ನು ಕಂಡು ಅವರು ತಮ್ಮ ಕುಟುಂಬವನ್ನು ನೆನೆದು ವಿಶ್ವಾಸದಿಂದ, ಹಂಬಲದಿಂದ, ವಿರಹದ ಯಾತನೆಯಿಂದ, ನೊಂದರೆಂದು ಊಹಿಸಿ ಕೊಂಡನು. ಪ್ರಿಯಕಳತ್ರರು ಈ ಭಟ್ಟರು ಎಂದುಕೊಂಡು, ಆದಷ್ಟುಬೇಗ ಇವರನ್ನು ಕಳುಹಿಸಿಬಿಡಬೇಕೆಂದು ನಿರ್ಧರಿಸಿಕೊಂಡು, "ಆಗಲಪ್ಪಾ! ಯೋಚನೆಮಾಡಬೇಡಿ, ನಾಳೆಯೇ ಹೊರಟು ಬುಡೋರಂತೆ" ಎಂದು, ತನ್ನಾಳಿಗೆ ಸನ್ನೆಮಾಡಿದನು.



## ಹದಿಮೂರನೆಯ ಪರಿಚ್ಛೇದ

ಹೋದಆಳು ತುಂಬಿಟ್ಟಿದ್ದ ಎರಡು ತಟ್ಟೆಗಳನ್ನು ತಂದು ಅವರ ಮುಂದಿಟ್ಟನು. ಒಂದು ತಟ್ಟೆಯಂತೂ ಕೆಳಗಿಡುವಾಗ ಸದ್ದುಮಾಡಿ, ತನ್ನಲ್ಲಿರುವುದು ಹಣವೆಂದು ಹೇಳಿಕೊಂಡುಬಿಟ್ಟಿತು. ಇನ್ನೊಂದರಲ್ಲಿ ಒಂದು ಕುಪ್ಪೆಯಂತೆ ಕಾಣುತ್ತಿದೆ. ಆದರೆ ಏನೆಂಬುದು ಮಾತ್ರ ತಿಳಿಯ ಲೊಲ್ಲದು. ಏನಿರಬಹುದು ಎಂದು ಕೊಳ್ಳುವುದರೊಳಗಾಗಿ, ನಾಯಕ ನೆದ್ದುಬಂದು, ಅದರ ಮೇಲೆ ಇದ್ದ ಮುಸುಕನ್ನು ಎಳೆದುಹಾಕಿ, "ಒಪ್ಪಿಸಿ ಕೊಳ್ಳಬೇಕು" ಎಂದು ಹೇಳಿ ಅವರಿಗೆ ಅಡ್ಡಬಿದ್ದನು.

ಭಟ್ಟರು ಅವಾಕ್ಕಾಗಿ ಎಲ್ಲವನ್ನೂ ನೋಡುತ್ತಿದ್ದರು. ಆದರೂ ಅವ ರಿಗೆ ಯಾವುದೂ ತಿಳಿಯಲಿಲ್ಲ. ನಾಯಕನು ಪ್ರಪಂಚದಲ್ಲ ಕಳ್ಳ. ಅಂಥ ವನು ತಮ್ಮ ಮುಂದೆ ನಿಂತು, ತಟ್ಟೆಯ ತುಂಬ ಹಣವನ್ನೂ, ಇನ್ನೊಂದು ತಟ್ಟೆಯಲ್ಲಿ ಜವಳಿಯನ್ನೂ, ಅಲ್ಲಿಯೂ ಏನೋ ಥಳಪಳವೆನ್ನುತ್ತಿದೆ, ಬಹುಶಃ ಚಿನ್ನದ ಒಡವೆಯೋ? ಹೌದು ಎನ್ನುವ ಹಾಗಿದೆ. ಸುಮಾರು ಕೈಬಳೆಗಳಿರಬಹುದು. ತಂದಿಟ್ಟು ಒಪ್ಪಿಸಿಕೊಳ್ಳಬೇಕು ಎನ್ನುತ್ತಿದ್ದಾನೆ. ಇದೇನು ಹಗಲು ಕನಸೋ? ಜಾಗ್ರತ್ಸ್ವಪ್ನವೋ? ಎನ್ನಿಸಿತು. ಆದರೆ ಎಲ್ಲವೂ ಎದುರಿರುವಾಗ, ಬಗೆಗೆ ತೋರಿದುದು ಕಣ್ಣಿಗೂ ಕಾಣಿಸುತ್ತಿರು

ವಾಗ, ಭಾವನೆಯಲ್ಲಿ ಕಂಡ ವಸ್ತುಗಳನ್ನು ಪ್ರತ್ಯಕ್ಷವಾಗಿ, ಎಲ್ಲರ ಸಮಕ್ಷಮ ದಲ್ಲಿಯೂ ಕಾಣುತ್ತಿರುವಾಗ ಕನಸೆನ್ನುವುದು ಹೇಗೆ?

ಅವರೊಮ್ಮೆ ಮುಗ್ಗರಿಸಿದುದುಂಟು. ಇಲ್ಲವೆನ್ನುವಂತಿಲ್ಲ. ಭ್ರಮೆ ಗೊಂಡು, ಮೋಹದ ಸೆಳೆತಕ್ಕೆ ಮನವು ಸಿಕ್ಕಿಕೊಂಡು ವಿವೇಕವು ಉಳಿಯದೆ ಕೊಚ್ಚಿಹೋದಾಗ, ಅವರ ಮನಸ್ಸಿಗೆ ಬೇಸರವಾಗುವಂತಹ ಕಾರ್ಯವನ್ನು ಒಮ್ಮೆ ಮಾಡಿದುದುಂಟು. ಅವರ ಮಾತಿನಲ್ಲಿ ಹೇಳಬೇಕೆಂದರೆ "ಅಗ್ನಿ ಸಾಕ್ಷಿಕವಾಗಿ ಪರಿಗ್ರಹಿಸಿದ ಪತ್ನಿಗೆ ಎರಡುಬಗೆದಂತಾಯ್ತು" ನಿಜ. ಆದರೆ, ಈಗ ಆ ಮನವು ನೋವಿನಿಂದ ನರಳಿ ಪವಿತ್ರವಾಗಿತ್ತು. ಬೆಂದು ಬೆಂದು, ಒಗ್ಗರಣೆಗೆ ಹಾಕಿದ ಕಾಯಿಪಲ್ಯಗಳು ಸೊಗಡುವಾಸನೆಯನ್ನು ಬಿಡುವಂತೆ, ತನ್ನ ಕಲ್ಮಷವನ್ನೆಲ್ಲ ತೊಳೆದುಕೊಂಡು ಶುದ್ಧವಾಗಿತ್ತು. ಪಶ್ಚಾತ್ತಾಪದ ಬೇಗುದಿಗೆ ಸಿಕ್ಕಿ, ಪುಟವಿಟ್ಟ ಚಿನ್ನದಂತಾಗಿತ್ತು. ಅಂತೂ, ಅಭಾವದಲ್ಲಿ ಬೇಡವೆಂದುಕೊಂಡಿದ್ದು ಸದ್ಭಾವದಲ್ಲಿ ಇರಲೆಂದು ಸಂಗ್ರಹಿಸುವ ಶುಷ್ಕ ವೈರಾಗ್ಯದ ಅವಸ್ಥೆಯನ್ನು ಕಳೆದು, ಸದ್ಭಾವದಲ್ಲಿ, 'ನಿನ್ನದು ಮಾಡಿಕೊ' ಎಂದು ಪ್ರಪಂಚವೇ ಒಪ್ಪಿಸಿದ ವಸ್ತುವನ್ನೂ ಬೇಡವೆಂದು ನಿರಾಕರಿಸುವ ಸ್ಥಿತಿಗೆ ಬಂದಿತ್ತು. ಭೋಗವಸ್ತುವನ್ನು ಗ್ರಹಣಮಾಡಿ, ಧರ್ಮಕ್ಕೆ ಅವಿ ರುದ್ಧವೆಂದು ಸಮಾಧಾನ ಹೇಳಿಕೊಂಡು, ಅದರಲ್ಲಿ ಪ್ರವೃತ್ತವಾಗುವ ಮನ ಸ್ಸಿನ ಕಡಿವಾಣವನ್ನು ಕಿತ್ತೊಗೆಯುವ ಕೀಳುತೆರದ ವೇದಾಂತವನ್ನು ತಳ್ಳಿ, ಕಣ್ಣೆದುರಿಗೆ ಇದ್ದು ಕೈಸೆಳೆದಿದರೆ, ಮುಟ್ಟಿದರೆ ತನ್ನದಾಗುವಂತಹ ವಸ್ತು ವನ್ನು, ತಾನೊಪ್ಪಿದರೆ, ಅದರ ಸ್ವಾಮ್ಯವನ್ನು ತನಗೊಪ್ಪಿಸಲು ಇತರರು ಸಿದ್ಧರಾಗಿರುವುದನ್ನು, ಕಂಡೂ, ನನಗೇಕೆ ಬೇಡವೆಂದು ಬಿಡುವ ಧೀರ ಸ್ವಭಾವವನ್ನು ಅವಲಂಬಿಸಿತ್ತು ಅವರ ಮನಸ್ಸು. ಸಿಕ್ಕಿದರೆ ಸಾಕೆಂದು ಗಬಕ್ಕೆನ್ನುವ ಬಕವೃತ್ತಿಯನ್ನು ಬಿಟ್ಟು, ಬಿಟ್ಟಷ್ಟು ತೊಡಕು ತಪ್ಪಿತು ಎನ್ನುವ ವಿಶ್ರಾಂತವೃತ್ತಿಯಲ್ಲಿತ್ತು ಅವರ ಮನಸ್ಸು.

ತುಂಬಿಟ್ಟ ತಟ್ಟೆಗಳನ್ನು ನೋಡಿ, ಭಟ್ಟರು, "ಅಯ್ಯಾ! ನೀವೇನೂ ತಿಳಿದುಕೊಳ್ಳಬಾರದು. ಇದನ್ನು ಕಟ್ಟಿಕೊಂಡು ನಾನೇನು ಮಾಡಿಕೊಳ್ಳಲಿ? ನನಗೆ ಬೇಕಾದುದನ್ನು, ಬೇಕಾದಷ್ಟನ್ನು ಕೊಡಲು ಸ್ವಾಮಿಯು ಒಬ್ಬರನು.

ತೋರಿಸಿದ್ದಾನೆ. ಹೀಗಿರಲು, ನೀನು ಕೊಡುವೆಯೆಂದು ಕೊಟ್ಟುದುದನ್ನೆಲ್ಲ ನಾನು ತೆಗೆದುಕೊಳ್ಳುವುದು ನ್ಯಾಯವಲ್ಲ. ದೇವರು ನಮ್ಮನ್ನು ಪರೀಕ್ಷಿಸುವುದು ಹೀಗೆ. ಆಶೆಪಟ್ಟರೆ ನಾವು ಕೆಟ್ಟೆವು..........'' ಎಂದು ಹೇಳುತ್ತಿದ್ದವರು ಯಾರೋ ಬಂದುದನ್ನು ಕಂಡು, ಹಠಾತ್ತಾಗಿ ಸುಮ್ಮನಾದರು.

ಬಂದವಳು ಬಸವಿ. ಒಬ್ಬರ ಮನೆಯಬಾಗಿಲನ್ನು ಮೆಟ್ಟುವುದು ಎನ್ನುವುದೇ ಅಪರೂಪವಾಗಿದ್ದವಳು ಇಂದು ತನ್ನ ಮನೆಗೆ ತಾನಾಗಿ ಬಂದುದನ್ನು ಕಂಡು, ನಾಯಕನು ತೃಪ್ತಿಗೊಂಡನು. ಅದೊಂದು ಗೌರವವೆಂದುಕೊಂಡನು. ಬಸವಿಯಂತಹ ವೀರಶಿವಭಕ್ತಳು ಕರೆಯಿಸಿಕೊಳ್ಳದೆ ಮನೆಗೆ ಬಂದುದು ಶಿವನ ಅನುಗ್ರಹವೆಂದಿತು ಆತನ ಹೃದಯ. "ಶಿವಸ್ವರೂಪರಾದ ಅಯ್ಯನವರು ಬಂದರು. ಅವರ ಜೊತೆಯಲ್ಲಿ ಶಿವಕರಣಳೂ ಬಂದಳು'' ಎಂದು ಅವನಿಗೆ ಬಹುಸಂತೋಷವಾಯಿತು. ಇದು ತನ್ನ ಮುಂದಿನ ಮಂಗಳದ ಸೂಚನೆಯೆಂದು ಹಿಗ್ಗಿದನು.

ಭಟ್ಟರ ಮೇಲಿದ್ದ ಎಲ್ಲರ ಕಣ್ಣುಗಳೂ ಒಂದುಗಳಿಗೆ ಬಸವಿಯ ಕಡೆಗೆ ಹೊರಳಿದುವು. ಮನೆಯವರು ಅವಳನ್ನು ಗೌರವದಿಂದ, ಅತ್ಯಾದರದಿಂದ, ಆಂತರಿಕವಾದ ವಿಶ್ವಾಸದಿಂದ ಬರಮಾಡಿಕೊಂಡರು. ಮರ್ಯಾದೆಯಾಗಿ ಕರೆದು ಕುಳ್ಳಿರಿಸಿಕೊಂಡರು. "ಅಪರೂಪವಾಗಿ ಬಂದೆಯಲ್ಲ" ಎಂದು ಬಾಯಿತುಂಬ ಮಾತನಾಡಿ, ಕೇಳಿ, ವಿಚಾರಿಸಿದರು. ಆದರೂ ಪ್ರಸಂಗವಶದಿಂದ, ಎಲ್ಲರ ಗಮನವೂ ಮತ್ತೆ ಭಟ್ಟರ ಕಡೆಗೇ ಹೊರಳಿತು. ಬಸವಿಯೂ ನಗುತ್ತ ನಲಿಯುತ್ತ ಆ ಭಕ್ತಬೃಂದದಲ್ಲಿ ತಾನೂ ಒಬ್ಬಳಾದಳು.

ನಾಯಕನು ಪಿಸುಮಾತಿನಲ್ಲಿ ಭಟ್ಟರನ್ನು ಕುರಿತು "ಅವಳು ಮನೆಬಾಗಿಲು ದಾಟಿ, ಹೊಸಲು ಮೆಟ್ಟಿ, ಎಷ್ಟೋ ದಿನವಾಗದೆ. ಅವಳಾಯಿತು. ಗುಡಿಯಾಯಿತು. ಅದೇನೋ ಬಂದವಳೆ! ನೀವು ಬಂದಿರಿ ಎಂತಲೋ ಏನೋ?" ಎಂದನು. ಭಟ್ಟರ ಎಳೆಗೆಂಪಿನ ಬಣ್ಣದ ಮುಖವು, ಹೊದೆದಿದ್ದ ಶಾಲಿಗಿಂತಲೂ ಕೆಂಪಾಯಿತು. ಅದನ್ನು ಕಂಡರೂ ನಾಯಕನು ಅದಕ್ಕೆ ಅರ್ಥಮಾಡಲಿಲ್ಲ. ತನ್ನ ಮಾತಿನಿಂದ ಅವರಿಗೆ ಅತೃಪ್ತಿಯಾಗಿದ್ದೀ

ತೆಂದು ಕೊಂಡು, “ ಒಳ್ಳೆಯವರು ಮನೆಗೆ ಬಂದರೆ, ದೇವರು ಬಂದ ಹಾಂಗಲ್ಲವಾ? ಅದಕ್ಕಂದ್ರೆ, ಅವಳು ಬಸವೀ ಅಂತ ಯಾರಾದರೂ ಒಂದು ತಪ್ಪು ಮಾತಾಡೋಕುಂಟಾ? ಅವಳು ದೇವರನ್ನು ಕಂಡ ದಿಂಡಳು ಕಣಪ್ಪ !” ಎಂದು ಸಮಾಧಾನ ಹೇಳಿದನು.

ಅದನ್ನು ಕೇಳಿ ಅವರ ಮನಸ್ಸು ಬಹು ಸಮಾಧಾನಗೊಂಡಿತು. ಶಾಂತಚಿತ್ತರಾಗಿ, “ ಆಕೆಯೇನು ಬಂದುದು ಅದನ್ನು ವಿಚಾರಿಸು. ಆ ಮೇಲೆ ಇದಾಗಲಿ ” ಎಂದರು.



## ಹದಿನಾಲ್ಕನೆಯ ಪರಿಚ್ಛೇದ.



ನಾಯಕನೂ ವಿಚಾರಿಸಿದನು. ಬಸವಿಯೂ ನಿರರ್ಗಳವಾಗಿ, ಏನೊಂದು ತಡೆಯೂ ಇಲ್ಲದ ಮಾತಿನಿಂದ ಹೇಳಿದಳು. “ ಮಾವ ! ನಮ್ಮವ್ವ ನಿನ್ನಕೈಯಲ್ಲಿ ಕೊಟ್ಟಿದ್ದ ಒಡವೆಯೆಲ್ಲ ನಂದೇತಾನೇ?” ಎಂದಳು. ಎಲ್ಲವನ್ನೂ ಬಿಟ್ಟವಳು ಬಸವಿಯೆಂದು ಎಲ್ಲರ ನಂಬಿಕೆ. ಅದರಿಂದ ಎಲ್ಲರಿಗೂ ಆಶ್ಚರ್ಯವಾಯಿತು. ನಾಯಕನು, “ ಇದೇನು ಹಿಂಗೆ ಕೇಳುತೀ ! ಎಲ್ಲನಿಂದೇ ! ಇನ್ನಾರಿಗೆ ಬೇಕದು ?” ಎಂದನು.

“ ಹಾಗಾದರೆ ನಾನು ಅದನ್ನು ಏನು ಬೇಕಾದರೂ ಮಾಡಬಹುದು?”

“ ಓ ! ಬೇಕಾದರೆ, ತಕೊಂಡು ಹೋಗಿ ಆ ದೈಯ್ಯದ ಕಡುವಿನಲ್ಲಾದರೂ ಎಸ್ತುಬುಡಬೋದು. ”

“ ಹಾಗಾದರೆ ಅದನ್ನಿಲ್ಲಿ ತರಿಸು ಮತ್ತೆ !”

ನಾಯಕನ ಹೆಂಡತಿಯು ಹೋಗಿ, ಒಂದು ಸಣ್ಣ ಪೆಟ್ಟಿಯನ್ನು ತಂದುಕೊಟ್ಟಳು. ಬಸವಿಯು ನಾಯಕನನ್ನು “ಮಾವ ! ಇದನ್ನ ನಾನು ಬೇಕಾದ್ದು ಮಾಡಬೋದಾ ?” ಎಂದು ಮತ್ತೆ ಕೇಳಿದಳು.

ಅವನೂ “ ಹೂಂ ಕಣವ್ವ ! ನಿನಗೆ ತೋರಿದಂಗೆ ಮಾಡಿಕೋ ” ಎಂದು, ಸರಳವಾಗಿ, ಖಂಡಿತನಾಗಿ, ಹೇಳಿದನು.

ಬಸವಿಯು “ ಹಂಗಾದರೆ, ಮಾವ ! ಇದನ್ನ ನಾನು ಮುಟ್ಟೋಕಿಲ್ಲ. ನೀನೇ ತೆಗೆದು ಇವರಿಗೆ ಕೊಟ್ಟುಬುಡು, ” ಎಂದಳು. ಮಾತಿನಲ್ಲಿ ಯಾವ ತೆರದ ಉದ್ರೇಕವೂ ಇರಲಿಲ್ಲ. ಶಾಂತಿಯಿತ್ತು, ಸಮಾಧಾನವು ತುಂಬಿತ್ತು. ತಾನು ಮಾಡುತ್ತಿರುವುದು ಸರಿ ಎಂಬ ದೃಢವಿರುವವರಿಗೆ ಮಾತ್ರ ಇರುವ, ಆತ್ಮವಿಶ್ವಾಸದ ಫಲವಾದ, ಸಂತೃಪ್ತಿಯು ಮನೆ ಮಾಡಿತ್ತು.

ಎಲ್ಲರಿಗೂ ಇನ್ನೂ ಒಮ್ಮೆ ಆಶ್ಚರ್ಯವಾಯಿತು. ಜೊತೆಯಲ್ಲಿ ಕುತೂಹಲವೂ ಹೆಚ್ಚಿತು. “ ನಾಯಕನು ಕೊಟ್ಟುದನ್ನೇ ಬೇಡವೆಂದವರು ಇವಳು, ಹೆಂಗಸು, ಕೊಟ್ಟುದನ್ನು ತೆಗೆದುಕೊಳ್ಳುವರೆ ? ” “ ಇಷ್ಟೆಲ್ಲಾ ಬಂದಿತೆಂದು ಆಗಬೇಡವೆಂದವರು, ಈಗ, ಕೊಂಚ ಬಲವಂತ ಮಾಡಿಸಿ ಕೊಂಡು ತೆಗೆದುಕೊಳ್ಳುವರೇನೋ?” “ಈ ಅಯ್ಯನವರು ಎಲ್ಲರ ಹಂಗಲ್ಲ” “ ಏನೋ ನೋಡಬೇಕು ” ಮೊದಲಾದ ಪ್ರಶ್ನೆ, ಸಮಾಧಾನಗಳು ಎಲ್ಲರ ಮನಸ್ಸಿನಲ್ಲಿಯೂ ನಡೆದುವು.

ನಾಯಕನು, ಎದ್ದು ಗಂಡುಹಜ್ಜೆಯಿಂದ ನಡೆದು ಬಂದು, ಆ ಪೆಟ್ಟಿಯನ್ನು ತೆಗೆದುಕೊಂಡು ಹೋಗಿ, ಹಾಗೆಯೇ ಮುಂದಿಟ್ಟು “ ಬಾ ! ಗೌರಿ ! ನೀನೇ ಅಡ್ಡಬಿದ್ದು ಒಪ್ಪಿಸಿಬಿಡು. ” ಎಂದನು. ಅವಳೂ ಎದ್ದು ಬಂದು, ಭಟ್ಟರು “ಹಾ ! ಹಾ !” ಎನ್ನುತ್ತಿರುವ ಹಾಗೆಯೇ, ಅಡ್ಡಬಿದ್ದು “ಒಡೆಯಾ ! ಒಪ್ಪಿಸಿಕೊಳ್ಳಿ,” ಎಂದಳು.

ಭಟ್ಟರಿಗೆ ಆ ‘ಒಡೆಯ’ ಎಂಬ ಮಾತನ್ನು ಕೇಳಿ ಸಾವಿರಚೇಳು, ಒಂದೇಸಲ ಕುಟುಕಿದಂತಾಯಿತು. ಬೆಚ್ಚಿಬಿದ್ದರು. ಸೂಕ್ಷ್ಮಭಾವಪರಾಮರ್ಶೆ ಯಿಲ್ಲದ ಗ್ರಾಮಿಕರ ಗುಂಪು ಅವರ ಬೆದರಿಕೆಯ ಕಾರಣವನ್ನು ಅರಿಯಲಿಲ್ಲ.

ಅವರು ಮತ್ತೆ ಮೊದಲಿನಂತೆ “ನನಗೆ ಬೇಡ. ಬೇಕಾಗಿಲ್ಲ. ಈಶ್ವರನು ಕೊಟ್ಟಿದ್ದಾನೆ. ನನಗಿದು ಬೇಡ” ಎಂದು ಖಂಡಿತವಾಗಿ ಹೇಳಿದರು,

ಬಸವಿಯು, ಎಷ್ಟುನಿಂತು ಒಂದುಗಳಿಗೆ ಅವರನ್ನೇ ಸ್ಥಿರಳಾಗಿ, ವ್ಯಾಕುಲಳಾಗಿ, ನೋಡುತ್ತಿದ್ದು, "ಇದು ನಮ್ಮವ್ವ ನನಗೆ ಕೊಟ್ಟದ್ದು. ಇದು ಯಾರದೂ ಅಲ್ಲ ನಂದು. ಒಳಗಿರುವ ಶಿವನಪ್ಪಣೆಯಾಯ್ತು ತಂದು ಪಾದಕ್ಕೊಪ್ಪಿಸಿದ್ನಿ—ತಾವು ಒಪ್ಪಿಸಿಕೊಳ್ಳಿ" ಎಂದಳು. ಆ ಮಾತಿನಲ್ಲಿ ವಿನಯದೊಡನೆ, ಖಂಡಿತವಾದದ ಗಡುಸೂ ಇತ್ತು.

ಅವರು ಮತ್ತೆ, ಅಷ್ಟೇ ಖಂಡಿತವಾಗಿ, "ಉಹುಂ, ಸಾಧ್ಯವಿಲ್ಲ, ಸಾಧ್ಯವಿಲ್ಲ," ಎಂದರು.

ಬಸವಿಗೆ ಕಣ್ಣಿನಲ್ಲಿ ನೀರುಬಂತು. ಕೈಮುಗಿದುಕೊಂಡು, ಮುಚ್ಚಿದ ಕಣ್ಣಿನಿಂದ ನೀರು ಸುರಿಯುತ್ತಿರಲು, ಹೇಳಿದಳು. ಭಟ್ಟರು ಅವಳಾ ಅತ್ಮಾರ್ಪಣದ ಭಾವವನ್ನು ಕಂಡು ಚಕಿತರಾದರು. ಸುಸಂಸ್ಕೃತವಾದ ಅವರ ಅಂತರಂಗವು ಕೂಡಲೇ, ಅದನ್ನು ಪರಾಭಕ್ತಿ ಎಂದಿತು ಆದರೂ ಅವರ ಮನಸ್ಸು ಚಲಿಸಲಿಲ್ಲ: ತಾರಸ್ವರವನ್ನು ನುಡಿಯುವ ತಂತ್ರಿಯಂತೆ ಸ್ಥಿರವಾಗಿ, ದೃಢವಾಗಿ, ಬಿಗಿಯಾಗಿ, ಸೆಡೆದು ನಿಂತುಕೊಂಡಿತು. "ಸೋಮಿ! ಬಸವಿ ಕೊಟ್ಟಿದ್ದನ್ನ ಬೇಡ ಅನ್ನಬೇಡ ನಮ್ಮಪ್ಪ. ಶಿವ ನಪ್ಪನಿಗೆಂತ ಕೊಟ್ಟೆನ್ನಿ ಎಲ್ಲವೂ ಕೊಟ್ಟು ಆಯಿತು. ಉಳಿದದ್ದು ಈ ಮುಕ್ಕ ಯಾಕೆ ನನಗೆ? ತಕೊ" ಎಂದಳು. ಅವಳ ಭಾವವನ್ನು ಕಂಡರೆ ಇನ್ನೂ ಏನೋ ಹೇಳಬೇಕು ಎಂದಿರುವಂತೆ ತೋರುತ್ತಿತ್ತು. ಆದರೆ ಅಷ್ಟ ರಲ್ಲಿಯೇ, ಅವಳಿಗೆ ಏಕೋ, ಏನೋ, ದುಃಖವು ಉಕ್ಕಿಬಂದು, ತಡೆಯ ಲಾರದಷ್ಟು ಅಳುಬಂದು, ಗಟ್ಟಿಯಾಗಿ ಅಳುತ್ತಾ ಹೊರಟುಹೋದಳು ಅವಳ ಕಾರ್ಪಣ್ಯದ ಕಿಚ್ಚಿನಿಂದ ನೊಂದ ಹೃದಯದಲ್ಲಿ, ಒಂದು ಮಾತು ಮೊಳಗುತ್ತಲಿತ್ತು. "ಆಶಿಪಟ್ಟರೆ ಕೆಟ್ಟೆವು." ಎಲ್ಲೋ ಯಾವುದೋ ಇನ್ನೊಂದು ಸಣ್ಣ ಧ್ವನಿಯು "ಹೌದು, ಹೌದು" ಎನ್ನುತ್ತಿತ್ತು.



*

# ಹದಿನೈದನೆಯ ಪರಿಚ್ಛೇದ.



ಎಲ್ಲರೂ ಅವಾಕ್ಕಾಗಿ, ಬೆರಗುಪಟ್ಟಂತೆ ಇದ್ದುಬಿಟ್ಟರು. "ಶಿವನಪ್ಪ ಣೇಂತ ಕೊಟ್ಟಿದೀನಿ. ಬೇಡವೆನ್ನಬೇಡ, ತಕೋ" ಎಂದ ಬಸವಿಯೊಂದು ಕಡೆ. "ಬೇಡ. ನನಗೆ ಬೇಡ" ಎಂಬ ಹಾರುವಯ್ಯನೊಂದುಕಡೆ, ಈ ಇಬ್ಬರ ತುಯ್ಯಾಟದಲ್ಲಿ, ಅವರ ಬಗೆಯು ದಣಿದುಹೋಯಿತು.

ನಾಯಕನೂ ಬಗೆಬಗೆಯಾಗಿ ಹೇಳಿನೋಡಿದನು. ಅವರೊಪ್ಪಲಿಲ್ಲ. ಅವನಿಗೆ ಏನು ತೋರಿತೋ ಏನೋ, "ಹೋಗಲಿ ಬಿಡಪ್ಪ" ಎಂದು, ಹೆಂಡಿತಿಯನ್ನು ಕರೆದು, "ಇದೆಲ್ಲ ತೆಗೆದು ವಳಗಿಡು" ಎಂದನು. ಆ ಅಜ್ಞಾಕಾಲದಲ್ಲಿ ಹಾರಿಸಿದ ಹುಬ್ಬು, "ಪ್ರತ್ಯೇಕವಾಗಿಡು ಜೋಕೆ!" ಎಂಬ ಕಟ್ಟಪ್ಪಣೆಯನ್ನು ಕೊಟ್ಟಿತು.

ಭಟ್ಟರು ಇನ್ನೂ ಎರಡುದಿನವಿದ್ದರು ಅಲ್ಲಿ. ಆದರೆ ಬಸವಿಯು ಮತ್ತೆ ಚಾವಡಿಗೆ ಬರಲಿಲ್ಲ. ಕೆರೆಯ ಬಳಿಯಲ್ಲಿಯೂ ಅವರ ಕಣ್ಣಿಗೆ ಬೀಳಲಿಲ್ಲ. ಅವರೂ ಅಷ್ಟಾಗಿ ಅವಳನ್ನು ಹುಡುಕಲಿಲ್ಲ. ಆದರೂ ಅವರ ಹೃದಯದಲ್ಲಿ ಮಾತ್ರ ಒಂದು ರೂಪರಾಶಿಯು, ಬೀಸುತ್ತಿರುವ ಗಾಳಿಯೊಡನೆ ಮೂಡಿ ಮಾಯವಾಗುವ ತಂಗಾಳಿಯ ತನಿಸೋಂಕು, ಹುಟ್ಟುತ್ತಿರುವಾಗಲೇ ಆಕಾಶದಲ್ಲಿ ಲೀನವಾಗುವ, ಸಣ್ಣದಾದರೂ ಸುಖಕರವಾದ, ಮಧುರ ಕಂಠ ಧ್ವನಿಯು ಅಚ್ಚಳಿಯದಂತೆ, ವಜ್ರಖಚಿತವಾದಂತೆ, ನಿಂತಿತ್ತು. ಹೊರಡುವುದಕ್ಕೆ ಮುಂಚೆ, ಶಿವಾಲಯಕ್ಕೊಮ್ಮೆ ಹೋಗಿ, ಅವಳನ್ನು ಕಂಡು ಹೋಗಬೇಕೆಂದು ಒಂದು ಸಣ್ಣಾಶೆ ಅವರಿಗೆ. ತಿರುಗಿ, "ವಿಷಯೇಂದ್ರಿಯ ಸನ್ನಿಕರ್ಷದಿಂದ ವೃತ್ತಿ, ವೃತ್ತಿಯಿಂದ ವಾಸನೆ." ಬೇಡ ಎಂಬ ಖಂಡಿತವಾದ ಆತ್ಮೋಪದೇಶ.

ಗಂಡಸಿನ ಹಾಳು ಹೃದಯವನ್ನು ಯಾವ ಕೆಟ್ಟವಿಧಿಯು, ಏನು ಗುಣವಿಪಾಕದಿಂದ, ಸೃಷ್ಟಿಸಿದನೋ? ಆ ಗಡುಸುಬಗೆಯನ್ನು ವಿಧಿಯು

ಸೃಷ್ಟಿಸಿದಾಗ, ಅವನಿಗೆ ಯಾರಮೇಲೂ ಕಡು ಕೆಟ್ಟ ಕೋಪಬಂದಿರಬೇಕು. ಇಲ್ಲವಾದರೆ, ಈ ವಿಚಿತ್ರವಸ್ತುವನ್ನು ಹುಟ್ಟಿಸುತ್ತಿರಲಿಲ್ಲ ಬೇಕೆಂದು ಆಶೆಗೊಂಡು ಕೈನೀಡಿ ತೆಗೆದುಕೊಂಡು, ಬೇಡವೆಂದಕೂಡಲೇ ನೂಕಿಬಿಡುವ ನಿಷ್ಠುರಭಾವದ ದುಷ್ಟಹೃದಯವನ್ನು ಹುಟ್ಟಿಸದಿದ್ದರೆ, ಆ ವಿಧಿಗೇನು ನಷ್ಟವಾಗುತ್ತಿತ್ತು?

ಅಳುವವರ ಅಳುವನ್ನು ತಪ್ಪಿಸುವುದು ಪುಣ್ಯವೆನ್ನುವಹಾಗಿದ್ದರೆ, ಅಂತಹ ಪುಣ್ಯವನ್ನು ಭಟ್ಟರು ಕಟ್ಟಿಕೊಳ್ಳಬಹುದಾಗಿತ್ತು. ಒಮ್ಮೆ ಶಿವಾಲಯಕ್ಕೆ, ಶಿವದರ್ಶನದ ನೆಪದಿಂದಲಾದರೂ ಹೋಗಿ ಬಂದಿದ್ದರೆ, ನೋವಿನಿಂದ ನರಳುತ್ತಿದ್ದ ಹೃದಯವೊಂದಕ್ಕೆ ಯಾತನೆಯು ಎಷ್ಟೋ ಕಡಿಮೆಯಾಗುತ್ತಿತ್ತು. ಅಲ್ಲಿಗೆ ಹೋಗದೆ ಇದ್ದುದರಿಂದ ಅವರ ಮನಸ್ಸಿಗೆ ಯಾತನೆಯಾಗಲಿಲ್ಲವೆಂದಲ್ಲ. ಆದರೆ ಅವರು ತಮ್ಮ ಯಾತನೆಯನ್ನು ತಡೆಯಬಲ್ಲವರು, ತಡೆಯಬೇಕೆಂದುಕೊಂಡವರು. ಇಂದಲ್ಲದಿದ್ದರೆ ನಾಳೆಯಾದರೂ ಆ ಯಾತನಾಕಿರಣವನ್ನು ಕಿತ್ತೊಗೆಯಬಲ್ಲವರು. ಆದರೆ, ಅವಳು? ಹೊಳೆಬಂದಿದೆ. ಆದರೇನು? ಬಂದಹೊಳೆ ಇಳಿದುಹೋಗುವುದಿಲ್ಲವೆ? ಹಾಗೆಯೇ ಅವಳಿಗೆ ಇದೊಂದು ಉದ್ವೇಗ ಬಂದಿದೆ ಇಳಿದು ಹೋಗುತ್ತದೆ ಎಂದುಕೊಂಡರು. ಸಾಹಿತಿಗಳಾದರೂ, ಭಾವಸಾಮ್ರಾಜ್ಯದ ರೀತಿನೀತಿಗಳನ್ನು ಅರಿತವರಲ್ಲ ಆ ಭಟ್ಟರು. ಇಲ್ಲವಾದರೆ ಹಾಗೆನ್ನುತ್ತಿದ್ದರೇ? ಮಳೆಬಂದಾಗ ಬರುವ ರಾಡಿಯನೀರೂ, ಒಳಗಿಂದ ಉಕ್ಕಿ ಉಕ್ಕಿ, ಬರುವುದಕ್ಕೆ ಆರಂಭಿಸಿರುವ ಬುಗ್ಗೆಯ ನಿರ್ಮಲೋದಕವೂ ಎರಡೂ ಒಂದೇ ಎನ್ನುತ್ತಿದ್ದರೆ?

ಭಟ್ಟರು ಹೊರಟರು ಆಗಲೂ, ಎಲ್ಲರನ್ನೂ ಬೀಳ್ಕೊಂಡು ಹೊರಟಾಗಲೂ, ಭಟ್ಟರ ಅಂತರಾಂತರವು ಯಾರನ್ನೋ ಹುಡುಕಿತು. ಅಲ್ಲಿ ಅವರು ಇರಲಿಲ್ಲ. ಭಟ್ಟರು ಗಾಡಿಯಮೇಲೆ ಒಂದು ಕಾಲನ್ನಿಟ್ಟು ಹತ್ತುವುದಕ್ಕೆ ಸಿದ್ಧವಾಗಿದ್ದವರು, ಮತ್ತೆ ಕಾಲನ್ನು ಹಿಂದಕ್ಕೆ ತೆಗೆದರು. ಒಂದುಗಳಿಗೆ ಯೋಚಿಸಿದರು ಕೊನೆಗೆ ಹೋಗಿಯೇಬರಬೇಕೆಂದು ನಿಶ್ಚಯಮಾಡಿ ಶಿವಾಲಯಕ್ಕೆ ಹೋದರು. ಅಲ್ಲಿ ಯಾರೂ ಇರಲಿಲ್ಲ.

ಅವರಿಗೂ ಒಂದು ರೀತಿಯಾದ ಸಮಾಧಾನವಾಗಿ, "ಹೋಗಲಿ, ಒಳ್ಳೇ
ದಾಯಿತು" ಎಂದುಕೊಂಡು, ಒಮ್ಮೆ ನಿಟ್ಟುಸಿರುಗರೆದರು. ಆದ
ಓಟೆಯನ್ನು ತೆಗೆದು ರೊಯ್ಯನೆ ನೀರೊಳಕ್ಕೆ ಎಸೆಯುವಾಗ, ಆ ಬೀಜದ
ಗಿಡವಾಗುವ ಚೇತನವಿದೆಯೆಂದರಿಯದ ಹುಡುಗನಂತೆ, ಮೇಲೆ ತೋರಿಕ
ಸಮಾಧಾನವಾಗಿ ಕಾಣುವ ಆ ಭಾವದಲ್ಲಿ ಅಡಗಿರುವ ಅಸಮಾಧಾನವನ
ಅವರು ಕಾಣಲಿಲ್ಲ.

ಗಾಡಿಯಲ್ಲಿ ಕುಳಿತು ಅವರು ಹೊರಟರು. ಗಾಡಿಯು ಊರಬಾ
ಲಿಂದ ಅಷ್ಟುದೂರ ಬಂತು. ಹಿಂದೆಬಂದಿದ್ದ ಜನರೆಲ್ಲರೂ ಉಳಿ
ಕೊಂಡರು. ಗಾಡಿಯು ಇನ್ನಷ್ಟುದೂರಬಂತು. ಆಗ, ಒಂದು ವ್ಯಕ್ತಿಓ
ಬಂದು, ಗಾಡಿಯ ಬಳಿಯಲ್ಲಿ ನಿಂತಿತು. ಗಾಡಿಯವನು, ಬಂದವ
ಬಸವಿಯೆಂದು ಗುರುತಿಸಿ, ಗಾಡಿಯನ್ನು ನಿಲ್ಲಿಸಿದನು. ಅದನ್ನರಿತ
ಭಟ್ಟರೂ ಕೆಳಗಿಳಿದುಬಂದರು. ಬಸವಿಯು ಬಂದು ಅವರ ಕಾಲುಮ
ಅಡ್ಡಬಿದ್ದಳು. ಕಣ್ಣಿಂದ ಹರಿಯುತ್ತಿದ್ದ ನೀರು ಅವರ ಕಾಲಮೇ
ಬಿದ್ದು, ಅವರಿಗೂ ಅದರ ಅರಿವಾಯಿತು.

ಕೂಡಲೇ ಭಟ್ಟರು ಅಧೀರರಾಗಿ, ಅವಳನ್ನು ಹಿಡಿದೆತ್ತಿ, ಸಮಾಧಿ
ಚಿತ್ತದಿಂದ, ಸಮಾಧಾನಪಡಿಸುವ ಶಾಂತರೀತಿಯಿಂದ, "ಅಳದಿರ
ಈಶ್ವರನಿದ್ದಾನೆ" ಎಂದರು. ಅವರು ಹೇಳಿದ ಮಾತಿನ ಅರ್ಥವೇನೆ
ಅವರಿಗೇ ತಿಳಿಯದು. ಆದರೂ ಬಸವಿಗೆ ಮಾತ್ರ ಏನೋ ಸಮಾಧಾ
ನವಾಯಿತು. ಅವಳೂ ಶಾಂತಳಾಗಿ ಹಿಂತಿರುಗಿಹೋದಳು.

ಗಾಡಿಯೂ ಮುಂದಕ್ಕೆ ಹೋಯಿತು. ಆದರೆ ಮುಂದಕ್ಕೆ ಹೋಗಿ
ಭಟ್ಟರ ಆ ಯು ಮಾತ್ರ ಹಿಂತಿರುಗಿತು.



# ಹದಿನಾರನೆಯ ಪರಿಚ್ಛೇದ



ಈ ಸಲ ಗಾಡಿಯು ಭಟ್ಟರ ಮನೆಯವರೆಗೂ ಬಂತು. ತಂಗಿದ ಕಡೆಯಲ್ಲಿಯೂ ಗಾಡಿಯವನು ತಲೆಮರೆಸಿಕೊಳ್ಳಲಿಲ್ಲ. ತ್ಯಾಗಿಯನ್ನು ನಂಬದವರಾರು? ಆದರೆ ಗಾಡಿಯವನು ಎಷ್ಟು ಹೇಳಿದರೂ, ಊಟಕ್ಕೆ ಮಾತ್ರ, ನಿಲ್ಲಲಿಲ್ಲ.

ಮನೆಯಲ್ಲಿ ಪಾತಮ್ಮನವರು ಭಟ್ಟರು ಬಂದಾರೆ ಎಂದು ಕಾದಿದ್ದರು. ಬಂದು ಕೊಂಚಹೊತ್ತಾಗಿ, ತುಸು ಹಳದಾಗುತ್ತಲೂ, "ನೀವು ನೇರವಾಗಿ ಸುಬ್ರಹ್ಮಣ್ಯಕ್ಕೆ ಹೋಗಿ ಬಂದಹಾಗಿಲ್ಲ?" ಎಂದರು. ಭಟ್ಟರಿಗೆ ಆಕಾಶವೇ ಕಳಚಿ ತಲೆಯ ಮೇಲೆ ಬಿದ್ದಂತಾಯಿತು. ಒಂದುಗಳಿಗೆ ಯೋಚಿಸಿ, "ಇಲ್ಲ ನಿನಗೆ ಹೇಗೆ ತಿಳಿಯಿತು?" ಎಂದು ಕೇಳಿದರು.

"ನೀವು ಕಳುಹಿಸಿದ ಒಡವೆ, ವಸ್ತು, ಹಣಗಳೇ ಹೇಳಿದವು. ಇದರೂ ನಿಮ್ಮ ಧೈರ್ಯ ಎಷ್ಟು? ಅವನು ಯಾರೋ ಏನೋ? ಅಪ್ಪನ ಕಾಲದಿಂದಲೂ ಗುರುತಿಲ್ಲ. ಅವನ ಕಯ್ಯಲ್ಲಿಕೊಟ್ಟು ಕಳುಹಿಸಿದ್ದೀರಲ್ಲ?"

"ಏನು ಒಡವೆ, ವಸ್ತು, ಹಣ? ಯಾರ ಕಯ್ಯಲ್ಲಿ ಕೊಟ್ಟುಕಳುಹಿಸಿದ್ದು? ಏನು?"

"ನನಗೆ ಗೊತ್ತು. ನೀವು ಹೀಗೇ ಎಂದೀರಿ ಅಂತ ನಾನು ಆಗಲೇ ಊಹಿಸಿದೆ. ನಿಮಗೆ ಯಾರೋ ಶಿಷ್ಯರು ಸಿಕ್ಕಿದ್ದಾರೆ. ಅವರು ಎಲ್ಲಿಗೋ ಕರೆದುಕೊಂಡು ಹೋಗಿದ್ದಾರೆ. ಅಲ್ಲಿ ಬೇಕಾದ ಹಾಗೆ ಮರ್ಯಾದೆಯಾಗಿದೆ. ಅದೆಲ್ಲ ಸರಿ. ಆದರೆ ಆ ಹಳೆಯಪೆಟ್ಟಿ ಅದೇನು?"

“ ಹಳೆಯ ಪೆಟ್ಟಿ ? ಯಾವುದು ? ಒಂದೂ ಅರ್ಥವಾಗುವುದೇ ಇಲ್ಲ ವಲ್ಲ ? ”

ಪಾತಮ್ಮನವರಿಗೆ ಕೊಂಚ ಕೋಪವು ಬಂತು. ಭಟ್ಟರ ಹಾಸ್ಯವು ಬಹಳವಾಯಿತೆಂದು ಅವರ ಅಭಿಪ್ರಾಯ. “ ಬನ್ನಿ ತೋರಿಸುತ್ತೇನೆ. ” ಎಂದು ಕರೆದುಕೊಂಡು ಹೋಗಿ, ಎಲ್ಲವನ್ನೂ ತೆಗೆದು ಮುಂದಿಟ್ಟರು. ಭಟ್ಟರು ನೋಡಿದರು. ಎಲ್ಲವೂ ನೆನಪಾಯಿತು.

“ ಸರಿ ಸರಿ. ತಂದವನು ಹೇಗಿದ್ದ ? ”

“ ಗೊತ್ತೇ ಇಲ್ಲದ ಹಾಗೆ ಮಾತನಾಡುತ್ತೀರಿ? ಕಪ್ಪು, ಕುಳ್ಳು, ಒಂದೂ ವರೆ ಗೇಣುದ್ದ ? ಸರಿಯೋ ? ”

ಭಟ್ಟರಿಗೆ ಹೆಂಡತಿಯ ಹಾಸ್ಯದಲ್ಲಿ ಬಹು ಆಶೆ ಆದರೂ ಈ ಸಲ ಏಕೋ ಅಷ್ಟು ಜೋಕಾಗಲಿಲ್ಲ. ಸಾವಧಾನವಾಗಿ, ಶಾಂತರಾಗಿ, ಹೇಳಿದರು.

“ ಅಲ್ಲ ಕಣೆ ! ಹೇಗಿದ್ದ ಹೇಳೇ ? ”

“ ಎತ್ತರವಾಗಿದ್ದ ಒಳ್ಳೆ ದುಂಡು ದುಂಡುಗಿದ್ದ, ಗಿರಲುಮೀಸೆ, ಕಣ್ಣು ದೊಡ್ಡದು, ಬಣ್ಣ ಅಷ್ಟು ಕಪ್ಪೂ ಅಲ್ಲ. ಕೆಂಪೂ ಅಲ್ಲ. ಅವನ ಹೆಸರು ‘ ದಾಸ ’ ಎಂತಲಂತೆ ! ”

“ ಸರಿ. ಹುಬ್ಬು ದಪ್ಪವಾಗಿ ಪೊದೆಯ ಹಾಗಿತ್ತು ಅಲ್ಲವೆ ? ”

“ ಹೌದು. ”

“ ಸರಿ. ಅರ್ಥವಾಯಿತು ”

ಭಟ್ಟರಿಗೆ ಈಗ ತಿಳಿಯಿತು. ಅಲ್ಲಿ ತಾವು ಬೇಡವೆಂದುದನ್ನು ನಾಯಕನು ಇಲ್ಲಿಗೆ ಕಳುಹಿಸಿಕೊಟ್ಟಿದ್ದಾನೆ. ಅದಕ್ಕಾಗಿಯೇ ತಮ್ಮನ್ನು ಎರಡು ದಿನ ಹೆಚ್ಚಾಗಿ ನಿಲ್ಲಿಸಿಕೊಂಡುದು. ಸಂದೇಹ ನಿವೃತ್ತಿಗಾಗಿ, ಇನ್ನೊಂದು ಪ್ರಶ್ನೆ ಕೇಳಿದರು.

" ಇದೆಲ್ಲ ತಂದುಕೊಟ್ಟು ಎಷ್ಟುದಿನವಾಯಿತು ?"

" ಮೊನ್ನೆಯಲ್ಲ, ಆಚೆಯ ಮೊನ್ನೆ ಸಾಯಂಕಾಲ"

ತಾಳಿ ಬಿತ್ತು. ತಾವು ಹೊರಟಾಗ ದಾಸನನ್ನು ಅವರು ನೋಡಲಿಲ್ಲ.

ಎಲ್ಲವನ್ನೂ ನೋಡುತ್ತಲೂ ಭಟ್ಟರು ಗಂಭೀರವಾಗಿ, ಅವಾಕ್ಕಾಗಿ, ಏನೋ ಯೋಚಿಸುತ್ತ ಕುಳಿತರು. ಯಾವಾಗಲೂ ಭಟ್ಟರು, ಕೆಲವು ದಿನ, ಹೊರಗೆ ಹೋಗಿದ್ದು ಬಂದರೆ, ಹೆಂಡತಿಯೊಡನೆ, ಅಲ್ಲಿಯ ಕಥೆಯನ್ನೆಲ್ಲ ಹೇಳಬೇಕು; ಎಷ್ಟೋ ಮಾತನಾಡಬೇಕು. ಹುಡುಗರಂತೆ ಹಾಸ್ಯವಾಡಿ ಆಕೆಯನ್ನು ಎರಡು ಗಂಟೆಯ ಹೊತ್ತು ಗೋಳು ಹುಯ್ದುಕೊಳ್ಳಬೇಕು. ಈ ಸಲ ಅದೊಂದೂ ಇಲ್ಲ. ಮಾತನಾಡಿದರೆ ಮುತ್ತು ಒಡೆಯಿತೆಂಬ ಭಾವ. ಪಾತಮ್ಮನವರಿಗೆ ಅರ್ಥವಾಗಲೊಲ್ಲದು.

ಭಟ್ಟರು, ಬಿಟ್ಟವನ್ನು ಅಗೆದು, ಕಡಲನ್ನು ತುಂಬುವ ಯೋಚನೆಯನ್ನು ಮಾಡುತ್ತಿದ್ದಂತೆ, ಒಂದಷ್ಟು ಹೊತ್ತು ಸುಮ್ಮನೆ ಇದ್ದು, ಒಂದು ಗಳಿಗೆಯಾಗುತ್ತಲೂ, ಹೆಂಡಿತಿಯನ್ನು ಕರೆದು, " ನಾನು ಒಂದು ಮಾತು ಹೇಳುತ್ತೇನೆ ಕೇಳುತ್ತೀಯಾ?" ಎಂದರು.

ಅವರಿಬ್ಬರಲ್ಲಿ ಈ ಪ್ರಶ್ನೆ ಬೇಕಾಗಿರಲಿಲ್ಲ. ಬೇಕಿಲ್ಲದ ಒಂದು ಪ್ರಶ್ನೆಯು ತಲೆಯೆತ್ತಿದರೆ, ಅಲ್ಲೊಂದು ಸಂದೇಹವೂ ಜೊತೆಯಲ್ಲಿಯೇ ಹುಟ್ಟಬೇಕಷ್ಟೆ? ಪಾತಮ್ಮನವರು, ಕೂಡಲೇ ಸಂದೇಹಪಟ್ಟು " ಅದೇನು ಇದುವರೆಗೂ ನಾನು ನೀವು ಹೇಳಿದ ಮಾತನ್ನು ಕೇಳದೆ ಇರುವುದು ? ಇವೊತ್ತು ಹೀಗೆ ಕೇಳುತ್ತೀರಲ್ಲ?" ಎಂದರು.

ಭಟ್ಟರಿಗೆ ಬೇಸರವಾಯಿತು. ಆದರೂ ಅದನ್ನು ನುಂಗಿಕೊಂಡು, " ಈ ಒಡವೆಗಳನ್ನು ನೀನು ಇಟ್ಟುಕೊಳ್ಳಬೇಡ. ಅವು ಮನೆಯಲ್ಲೂ ಬೇಡ. ದೇವಸ್ಥಾನಕ್ಕೆ ಕೊಟ್ಟುಬಿಡು." ಎಂದರು.

ಪಾತಮ್ಮನವರು " ಏಕೆ ?" ಎಂದು ಕೇಳಿದ್ದರೆ ಚೆನ್ನಾಗಿತ್ತು. ಕೇಳ ಲಿಲ್ಲ. ಬಹುದಿನದ ಸದರ, (ಸಾದರ ?) ಅಲ್ಲದೆ, ಹೆಣ್ಣಿಗೆ ಸಹಜವಾಗಿ

ಬಂದ ಒಡವೆಯೂಸೆ, "ಅಲ್ಲವೇ ಮತ್ತೆ? ಮಕ್ಕಳನ್ನೆಲ್ಲ ಬಿಚ್ಚಾಟಲಿ ಗೌರಿಯನ್ನು................"

ಗೌರಿಯೆನ್ನುತ್ತಲೂ ಭಟ್ಟರು "ಎಲ್ಲಿ?" ಎಂದು ತಟ್ಟನೆದ್ದರು. ಏನೋ ಯೋಚನೆಯಲ್ಲಿದ್ದ ಭಟ್ಟರಿಗೆ ಹಿಂದಿನ ಮಾತಾವುದೂ ಅರಿಕೆ ಯಾಗಿರಲಾರದು. ಪಾತಮ್ಮನವರಂತೂ ಏನೂ ತಿಳಿಯದೆ ಮೊಂಕಾಗಿ ಹೋದರು. "ಗೌರಿಯೆಂದರೆ ಇವರೇಕೆ ಹೀಗೆ ಕಕ್ಕುಬಿಕ್ಕಾದರು?" ಎನ್ನಿಸಿತು. ಮೊದಲಿನ ಪತ್ನೀ ಸ್ನೇಹದ ಪವಿತ್ರ ಪ್ರವಾಹದಿಂದ ಪತಿಯನ್ನು ಆರಾಧಿಸಿದ್ದರೆ, ಆ ಉಪಚಾರದಿಂದ ತೃಪ್ತವಾದ ಅವರ ಅಂತರಂಗದಲ್ಲಿ ಏನು ಭಾವ ಹುಟ್ಟುತ್ತಿತ್ತೋ? ಆದರೆ ಪಾತಮ್ಮನವರು ಹಾಗೆ ಮಾಡಲಿಲ್ಲ ಸ್ನೇಹಕ್ಕೆ ಬದಲಾಗಿ ಸಂದೇಹಕ್ಕೆಡೆಗೊಡುತ್ತ, ನಂಬುಗೆಯನ್ನು ತೋರಿಸಿ, ಗೆಲ್ಲುವುದನ್ನು ಬಿಟ್ಟು, ಸಿಡಿದು ನಿಂತು ಸೋತರು, ಆ ಮಾತು ಮುಂದಕ್ಕೆ ಆಡದೆ, ಅಲ್ಲಿಗೇ ಬಿಟ್ಟು, ಒಡವೆ ವಸ್ತುಗಳನ್ನೆಲ್ಲ, ಹಾಗೆಯೇ ಹಾಕಿಬಿಟ್ಟು ಹೊರಟುಹೋದರು.

ಭಟ್ಟರು ಕೂಗುತ್ತಿದ್ದರೂ, ಲಕ್ಷಿಸದೆ, ಹೊರಟುಹೋದರು. ಭಟ್ಟರ ಮನಸ್ಸಿಗೆ ಕತ್ತಿಯಿಂದ ಇರಿದು ಗಾಯದಮೇಲೆ ಉಪ್ಪಿನ ನೀರು ಸುರಿ ದಂತಾಯಿತು.



## ಹದಿನೇಳನೆಯ ಪರಿಚ್ಛೇದ.



ಗಂಡಹೆಂಡಿರಿಗೆ ದೂರದೂರವಾಗುತ್ತಬಂತು. ಭಟ್ಟರಿಗೆ, ಕುಟುಂಬವು ತಮ್ಮಮಾತು ಕೇಳಲಿಲ್ಲವೆಂದು ಕೋಪ. ಪಾತಮ್ಮನವರಿಗೆ ಅಲ್ಲಿ ನಡೆದು ದನ್ನೆಲ್ಲವನ್ನೂ, ಒಡವೆಗಳೂ ಹಣವೂ ಎಲ್ಲಿಂದಬಂದವೆಂಬುದನ್ನು—ಎಂದಿ ನಂತೆ ಹೇಳಲಿಲ್ಲವೆಂದು ಕೋಪ. ಕೋಪವನ್ನು ಕೂಡಲೇ ಕಳೆಯದೆ

ಬಿಟ್ಟರೆ, ಅದು, ನಿಂತರೆ ಕೊಳೆತು, ಕೊಳೆತರೆ ಕೀವಾಗುವ ರಕ್ತದಂತೆ, ಅನರ್ಥಕಾರಿಯಾಗುವುದು ಎಂಬುದನ್ನು ಇಬ್ಬರೂ ಗಮನಿಸಲಿಲ್ಲ.

ಎಂಟುದಿನಗಳು ಎನ್ನುವುದರೊಳಗಾಗಿ ಇಬ್ಬರ ಅಸಮಾಧಾನವೂ ಒಂದು ರೂಪಿಗೆ ಬಂದು ಪ್ರಕಟವಾಗುತ್ತ ಬಂತು. ಪಾತಮ್ಮನವರು ಯಾವುದೋ ಮಾತಿಗೆ, ಯಾವುದೋ ಸಂದರ್ಭದಲ್ಲಿ, ಅಪ್ರಸಕ್ತವಾಗಿ, ಏನಾದರೂ ಅಡ್ಡಮಾತಾಡುವರು. ಭಟ್ಟರು ಮೌನವಾಗಿದ್ದು ಮಾಡುತ್ತಿದ್ದ ಕೆಲಸವನ್ನು ಬಿಟ್ಟು, ಹೇಗಿದ್ದರೆ ಹಾಗೇ ಎದ್ದು ಹೊರಟುಹೋಗುವರು. ಅಂತೂ ಗಂಡಹೆಂಡಿರ ಜಗಳದಲ್ಲ ಮನೆಯಲ್ಲಿ ಎಲ್ಲರಿಗೂ "ಇರಸು ಮುರಸು" ಎಲ್ಲರಿಗೂ ಅನಾನುಕೂಲ. ಅದರಲ್ಲೂ ಹುಡುಗರಿಗಂತೂ ಏಕೋ ಬಲು ಮುಜಗರವಾಯಿತು. ಯಾರಾದರೂ ಹೊರಗಿಂದ ಬಂದವರು, ದೀಪಾವಳಿಯ ಮುಂದಿನ ಗದ್ದೆಗಳ ಹಾಗೆ ನಲವಿನ ಬೀಡಾಗಿದ್ದ ಪಾತಮ್ಮನವರ ಮನೆಯು, ಕಲ್ಲುಹೊಲದ ಹಾಗೆ ಆಗಿರುವುದನ್ನು ಕಂಡು ಹತಾಶರಾಗುವರು. "ಎಲ್ಲರೂ ಆರೋಗ್ಯವಾಗಿದ್ದಾರೋ ಇಲ್ಲವೋ?" ಎಂದು ಕುಶಲ ಪ್ರಶ್ನೆಯನ್ನು ಮಾಡಿದರೆ, ಪಾತಮ್ಮನವರಿಗೆ, ದುಃಖದ ಕಟ್ಟೆಯು ಒಡೆದು ಬಿಕ್ಕಿಬಿಕ್ಕಿ ಅಳುವು ಬಂದುಬಿಡುವುದು. ಆಕೆಯು ಬಹುಕಷ್ಟದಿಂದ ಸಂವರಣಮಾಡಿಕೊಂಡು, ಅಳುವನ್ನು ನುಂಗಿದರೂ, ಕಣ್ಣಿನ ನೀರು ಮಾತ್ರ ಈಚೆಗೆ ಬಂದೇಬಿಡುವುದು. ಇದನ್ನು ನೋಡಿದವರು ಏನೋ ಎಂತೋ ಎಂದುಕೊಂಡು, "ಹೋಗಲಿ ಬಿಡೀಮ್ಮಾ! ಪಾಪ! ಏನೋ! ನಿಮ್ಮಂಥ ಒಳ್ಳೆಯವರಿಗೆ ಹೀಗಾಗಬಾರದಾಗಿತ್ತು," ಎನ್ನುವರು. ಪಾತಮ್ಮನವರಿಗೆ ಅದೇ ಒಂದು ಹಿತ. ಆಪ್ಯಾಯನ. ಆಕೆಯ ಮನಸ್ಸಿನಲ್ಲಿ ಎಲ್ಲರಿಗೂ ತಮ್ಮ ಗಂಡಹೆಂಡಿರ ಅಸಮಾಧಾನ ತಿಳಿದಿದೆಯೆಂದೂ, ಅದಕ್ಕಾಗಿ ಹೀಗೆ ಸಮಾಧಾನಮಾಡುವರೆಂದೂ ನಂಬಿಕೆ. ಪ್ರಪಂಚದಲ್ಲಿ ಪ್ರತಿಯೊಬ್ಬರಿಗೂ ತಮ್ಮ ತಮ್ಮ ದುಃಖವೇ ಹೆಚ್ಚು, ಇತರರ ದುಃಖವನ್ನು ಗಮನಿಸುವುದಕ್ಕೆ ಅವಕಾಶವೂ ಇಲ್ಲ, ಇಷ್ಟವೂ ಇಲ್ಲ ಎಂಬುದನ್ನು ಪಾತಮ್ಮನವರು ಕಾಣರು.

ಭಟ್ಟರಿಗೂ ಪ್ರಕೃತಿಯು ನೆಟ್ಟಗಿಲ್ಲ ಮೂಗು ಸೊರವಾಗಿದ್ದರೂ' ಶೀತವಾದವರಿಗಿಂತ ಹೆಚ್ಚಾಗಿ ಒರೆಸಿಕೊಳ್ಳುವರು. ಕಣ್ಣು ನೀರವಾಗಿದ್ದರೂ

ಏಕೋ ಉರಿಯುವ ಹಾಗಿದೆ ಯೆಂದುಕೊಳ್ಳುವರು. ಅಂತೂ ಒಂದುಮಾತ್ರ ಆಯಿತು. ಮನಸ್ಸುಮಾತ್ರ ಶಾಸ್ತ್ರಚಿಂತನವನ್ನು ದೂರಮಾಡಿ, ಆತ್ಮ ವರ್ತನವನ್ನು, ತಾನು ಮಾಡುತ್ತಿರುವುದು ಸರಿಯೋ ತಪ್ಪೋ ಎಂಬುದನ್ನು ಕುರಿತು ಯೋಚಿಸತೊಡಗಿತು ಪ್ರಪಂಚದಲ್ಲಿ ಇಷ್ಟು ವಿಷಯಗಳಿದ್ದರೂ ಮನಸ್ಸು ಅವೆಲ್ಲವನ್ನೂ ಬಿಟ್ಟು ಇಬ್ಬರ ವಿಚಾರವಾಗಿ ಮಾತ್ರ ಯೋಚಿಸು ತ್ತಿರುವುದು.

ಒಬ್ಬಳು ವಿರಕ್ತೆಯಾಗಿ ಗುಡಿಯನ್ನು ಸೇರಿದ್ದರೂ ತನ್ನ ವಿಷಯ ದಲ್ಲಿ ಅನುರಕ್ತೆ. ಮತ್ತೊಬ್ಬಳು ತನ್ನ ಮನೆಯಲ್ಲಿ ಸಂಸಾರಮಾಡಿ ಕೊಂಡಿದ್ದರೂ ತನ್ನ ವಿಷಯದಲ್ಲ ಸದ್ಯದಲ್ಲಿ ವಿರಕ್ತೆ. ಈ ಇಬ್ಬರ ನಡುವೆ, ಅನುರಕ್ತರೋ ವಿರಕ್ತರೋ ಅದನ್ನು ಹೇಳಿಕೊಳ್ಳಲು ಸಾಧ್ಯವಿಲ್ಲದ ತಾವು ಎಷ್ಟು ಯೋಚಿಸಿದರೂ ಬಗೆ ಹರಿಯದ ಈ ವಿಷಯದಲ್ಲಿ, ಭಟ್ಟರ ಮನಸ್ಸು ಅಜ್ಞಾತವಾಗಿ ಒಂದನ್ನು ಮಾತ್ರ ಇತ್ಯರ್ಥವಾಡಿಬಿಟ್ಟಿತು. ವಾದಿ ಪ್ರತಿ ವಾದಿಗಳ ಹೇಳಿಕೆಯನ್ನೆಲ್ಲ ಕೇಳಿ, ಸಿದ್ಧಾಂತವನ್ನು ಹೇಳುವ ನ್ಯಾಯಾಧಿ ಪತಿಯಂತೆ, ಭಟ್ಟರ ಮನಸ್ಸೂ ಗೊತ್ತುಮಾಡಿಬಿಟ್ಟಿತು. ಆದರೆ ಅದು ನಿಷ್ಪಕ್ಷಪಾತವಾಗಿತ್ತೊ ಇಲ್ಲವೋ ಅದನ್ನು ನಾವು ಕಾಣೆವು ಒಗೆಗಣ್ಣಿನ ಎದುರಿಗಿದ್ದ, ಎರಡು ವ್ಯಕ್ತಿಗಳಲ್ಲಿ "ಅದು ಚಿನ್ನ, ಇದು ಹಿತ್ತಾಳೆ," ಎಂದು ಅವರ ಸಿದ್ಧಾಂತ ಆದರೂ ಮನಸ್ಸಿನಲ್ಲಿಯೇ ಆ ಸಿದ್ಧಾಂತವೂ ಪದೇ ಪದೇ "ರಿವಿಜ಼ನ್" ಆಗುತ್ತಲೇ ಇತ್ತು. ಅದು ಇನ್ನೂ ಖಂಡಿತವಾಗಿ, ಸ್ಥಿರವಾಗಿದ್ದಂತೆ ತೋರಲಿಲ್ಲ.

ಭಟ್ಟರ ಮನಸ್ಸು ಒಂದು ಬಗೆಯದು. ಅದಕ್ಕೆ ದುಃಖದಲ್ಲ ಅಭಿರುಚಿ ಯಿಲ್ಲ. ಇರುವ ಎರಡು ದಿನವೆಲ್ಲ ಒದ್ದಾಟ ಗುದ್ದಾಟಗಳೇ ಆಗಿಹೋದರೆ ಹೇಗೆ? ಎಂಬ ಜಾತಿಗೆ ಸೇರಿದುದು. "ಮರವು ಕಡಿದರೂ ಚಿಗುರು ವುದು. ದೂರದ ಗಾಯವನ್ನು ಮಾಯಿಸಿಕೊಂಡು ಹೊಸದಾಗಿ ಕೊನರಿಡು ವುದು. ನೀರು ಕಲಕಿದರೂ ತಿಳಿದುಕೊಳ್ಳುವುದು. ನಾವು ಅದಕ್ಕಿಂತಲೂ ಕಡೆಯೇ? ಸಂತೋಷವೇ ಜೀವನ ಗುಣ. ಅದನ್ನು ಪ್ರದರ್ಶಿಸುವುದೇ ಅಂತಃಕರಣದ ಧರ್ಮ. ಅದಕ್ಕೆ ಎಷ್ಟು ವಿಘ್ನಗಳು ಬಂದರೂ, ಅದನ್ನೆಲ್ಲ

ನಿವಾರಿಸಿಕೊಂಡು, ಸಂತೋಷವಾಗಿರಬೇಕಾದುದೇ ಮಾನವನ ಧರ್ಮ" ಎನ್ನುವವರು ಅವರು. ಆದರಿಂದ ಬರುಬರುತ್ತಾ ಎಂದರೆ ಅಮಾವಾಸ್ಯೆಯೊಳಗಾಗಿ ಮನಸ್ಸು ಪೂರ್ವಸ್ಥಿತಿಗೆ ಬಂದು, ಬರುವ ಪಾಡ್ಯದಿಂದ ಬೆಳೆಯುವ ಚಂದ್ರನೊಡನೆ ತಾನೂ ಕಳಾಪೂರ್ಣವಾಗಲು ಸಿದ್ಧವಾಯಿತು.

ಪಾತಮ್ಮನವರದು ಹೆಣ್ಣು ಮನಸ್ಸು. ಇಲ್ಲದ ಚಿಂತೆಯನ್ನು ಕಟ್ಟಿಕೊಂಡು, ಕಟ್ಟಿಕೊಂಡ ಚಿಂತೆಯಲ್ಲಿ ಕುಳಿತುಕೊಂಡು, ಜಿನುಗಿ ಜಿನುಗಿ, ಅದನ್ನೇ ಒಂದು ರೋಗವಾಗಿ ಮಾಡಿಕೊಳ್ಳುವ ಜಾತಿಯದು. ಅವರಿಗೆ ಅದೇ ಒಂದು ಪ್ರಬಲ ರೋಗವಾಗಿ ಹೋಯಿತು. ಹದಿನೈದು ದಿನವೆನ್ನುವುದರೊಳಗಾಗಿ, ಅವರ ಬಣ್ಣವು ಒಂದಿಳಿತ ಇಳಿಯಿತು. ಮನಸ್ಸು ಚಿಂತೆಯಲ್ಲಿ ಮುಳುಗಿ ತೇಲುತ್ತಿರಲು, ಮುಖವು ಮೊಂಕಾಗಿಹೋಯಿತು ಗಂಡನೊಡನೆ ಮಾತನಾಡಬೇಕೆಂಬ ಆಶೆ. ಆದರೆ ಅದೇಕೋ ಸಾಧ್ಯವಾಗಲೊಲ್ಲದು. ನಿತ್ಯವೂ ತಾವೇ ಅಡಕೆಲೆಯನ್ನು-ಎಂದಿನಂತೆ-ತೆಗೆದುಕೊಂಡು ಹೋಗಬೇಕೆನ್ನುವರು. ತಟ್ಟೆಯನ್ನು ಚೊಕ್ಕಟವಾಗಿ ತೊಳೆದು ಅದರಲ್ಲಿ ಎಲೆಯಡಿಕೆ ಸುಣ್ಣದ ಕಾಯ್ಗಳನ್ನು ಸೇರವಾಗಿಟ್ಟುಕೊಂಡು ಹೊರಡಬೇಕೆನ್ನುವುದರೊಳಗಾಗಿ, ಏನೋ ಭಾವಾಂತರಕ್ಕೆ ಎಡೆಗೊಟ್ಟು ನಿಂತುಬಿಡುವರು. ಬೇಕು-ಬೇಕು-ಎಂದು ಹಾತೊರೆಯುತ್ತಿದ್ದ ಮನವು ಇದ್ದಕ್ಕಿದ್ದ ಹಾಗೆಯೇ ಬೇಡವೆಂದುಬಿಡುವುದು. ಆರು ಹೆಜ್ಜೆಗಳಿಡುವವರೆಗೂ ಬೇಕೆಂಬ ಭಾವವಿದ್ದು ಏಳನೆಯ ಹೆಜ್ಜೆಯಲ್ಲಿ ಬೇಡವೆನ್ನಿಸಿಬಿಡುವುದು. ಬೆಳಗಿಂದ ವಿವೇಕವು ವಿಚಾರದ ಬಲದಿಂದ ಕಟ್ಟಿದ್ದ ದೊಡ್ಡ ಕರುಮಾಡವನ್ನು, ಒಂದು ಸಣ್ಣ, ಸಂಶಯವೆಂಬ ಪಿಶಾಚವು ತಟ್ಟನೆ ಒದ್ದು ಉರುಳಿಸಿಬಿಡುವುದು. ಪಾತಮ್ಮನವರು ತಟ್ಟನೆ ತಟ್ಟೆಯನ್ನು ಅತ್ತಿಟ್ಟು, ಸುಮ್ಮನೆ ಕುಳಿತುಕೊಳ್ಳುವರು. ಇದೆಯಲ್ಲ ಹೆಂಗಸರಿಗೆ, ಅದರಲ್ಲೂ ಅನಾಥೆಯುರ ತಾವು ಎಂದುಕೊಂಡ ಹೆಂಗಸರಿಗೆ ಶರಣೆಂದು ಬ್ರಹ್ಮನು ಸೃಷ್ಟಿಸಿರುವ "ಅನಾಥ ರಕ್ಷಕ" ಕಣ್ಣೀರು! ಅದು ಬಂದು, ಕೋಡಿಗಟ್ಟಿಕೊಂಡು ಹರಿದು ಅವರಿಗೆ ಸಮಾಧಾನವಾಗುವುದು.

---

# ಹದಿನೆಂಟನೆಯ ಪರಿಚ್ಛೇದ



ಹೀಗೆಯೇ ಇನ್ನೂ ಒಂದು ವಾರ ಕಳೆಯಿತು ಮತ್ತೂ ಒಂದು ವಾರ ಕಳೆಯಿತು ಹರಿಯುತ್ತಿರುವ ನದಿಯ ಪಾತ್ರವು ವಿಶಾಲವಾಗುತ್ತ ಬಂದಂತೆ, ಪತಿಪತ್ನಿಯರ ವೈಮನಸ್ಯವು ದೊಡ್ಡದಾಗುತ್ತ ಬಂತು. ಬರು ಬರುತ್ತ ಪತಿಯು ಅಪರಾಧಿಯೆಂದು ಪಾತಮ್ಮನವರ ಮನಸ್ಸಿಗೆ ದೃಢವಾ ಗುತ್ತ ಬಂದು, ಅವರನ್ನು ಕಂಡರೆ ಸಿಡಿಮಿಡಿಗುಟ್ಟುವುದಕ್ಕೆ ಆರಂಭವಾ ಯಿತು. ಮೊದಲಿಂದಲೂ ಮನೆಯಲ್ಲಿ ಅಪ್ರತಿಹತವಾಗಿ ಅಧಿಕಾರ ನಡೆಸು ತ್ತಿದ್ದ ಸ್ವಭಾವ ಈಗಲೂ ಹಾಗೆಯೇ ನಡೆಯಬೇಕೆಂಬ ಆಶೆ. ಆದರೆ ಪ್ರತಿಪಕ್ಷವು ತಮ್ಮ ಅಧಿಕಾರ ಕ್ಷೇತ್ರದಿಂದ ಹೊರಕ್ಕೆ ಹೊರಟುಹೋಗಿದೆ ಯೆಂಬ, ಎದುರಾಳಿನ ಮೇಲೆ ತಮಗಿದ್ದ ಅಧಿಕಾರದ ಹಿಡಿತವು ತಪ್ಪಿ ಹೋಯಿತೆಂಬ ನಂಬಿಕೆಯು ಬಂದಮೇಲೆ ಹುಟ್ಟುವ, ಒಂದು ವಿಧ ದಾನವ ದರ್ಪವು, ಪ್ರತಿಭಟಿಸಿದವರನ್ನು ಹಾಕಿ ತುಳಿದುಬಿಡಬೇಕೆಂಬ ನಿಷ್ಠುರ ಭಾವನೆಯು ಪಾತಮ್ಮನವರ ಮೃದು ಮನಸ್ಸಿಗೂ ವ್ಯಾಪಿಸುತ್ತ ಬಂತು ಆದರೂ ಪಾತಮ್ಮನವರಿಗೆ "ತಮ್ಮ ಹಿಂದಿನ ಅಧಿಕಾರವನ್ನು ಗೆದ್ದುಕೊಳ್ಳುವ ಸಾಧನವು ತಮ್ಮ ಕಟಾಕ್ಷದಲ್ಲಿ ಅಡಗಿದೆ. ತಮ್ಮ ಸವಿಮಾತಿನ ನಯದಲ್ಲಿ ಅದು ಅವಿತು ಕುಳಿತಿದೆ" ಎಂಬುದು ತೋರಲಿಲ್ಲ. ಯಾವುದೋ ರೋಗಕ್ಕೆ ಏನೋ ಮದ್ದು ಮಾಡುವ ಅಪ್ರಬುದ್ಧವೈದ್ಯನಂತೆ, ಯಾರದೋ ತಪ್ಪಿಗೆ ಇನ್ನಾರಿಗೋ ಶಿಕ್ಷೆಯನ್ನು ವಿಧಿಸುವ ದುರಾಗ್ರಹಿಯಾದ ಅಧಿಕಾರಿಯಂತೆ ಪಾತಮ್ಮನವರ ಕೋಪವು ಮಕ್ಕಳ ಕಡೆಗೆ ತಿರುಗಿತು.

ಭಟ್ಟರ ಮನೆಯಲ್ಲಿ ಮಕ್ಕಳಿಗೆ ಸ್ವಾತಂತ್ರ್ಯವಿಲ್ಲದಿದ್ದರೂ, ಪ್ರೀತಿಯು ಬೇಕಾದಷ್ಟಿತ್ತು. ಶಿಕ್ಷೆಯ ಭೀತಿಯ ಅಭಾವವಿಲ್ಲದಿದ್ದರೂ, ಶಿಕ್ಷಕರ ಕ್ರೋಧದ ಗುರುತಾದ ದುಷ್ಟ ಕಷ್ಟ ಶಿಕ್ಷೆಯ ಹೆಸರಿರಲಿಲ್ಲ. ಗಂಡನು ಕೋಪವನ್ನು ನಟಿಸಿದಾಗ ಹೆಂಡತಿಯೂ, ಪತ್ನಿಗೆ ಕೋಪಬಂದಿತೆಂದು ತೋರಿದಾಗ ಪತಿಯೂ ಬಾಯಿಹಾಕಿಕೊಂಡು ಬಂದು ಶಿಕ್ಷೆಯನ್ನು ತಪ್ಪಿಸು

ತ್ತಿದ್ದರು ಅಂತೂ ಮಕ್ಕಳಿಗೆ, ಶಿಕ್ಷೆಯ ಕಾರ್ಮೋಡದ ಆರ್ಭಟದ ಪರಿಚಯವಾಗುತ್ತಿದ್ದಿತೇ ಹೊರತು ಶಿಕ್ಷೆಯ ಸಿಡಿಲಿನ ಪರಿಚಯವಾಗುತ್ತಿರಲಿಲ್ಲ

ಒಂದು ದಿನ ಮಗುವು-ಸುಮಾರು ಆರುವರುಷದ್ದು-ಹೊರಗಿನಿಂದ ಬಂದು "ಅಮ್ಮಾ! ಹಸಿವು" ಎಂದಿತು. ಪಾತಮ್ಮನವರು ಅಡಿಗೆಯನ್ನು ಮಾಡುತ್ತಿದ್ದವರು ಹಿಂದಿರುಗಿ ನೋಡಿದರು. ಅಂದು ಎಲ್ಲಿಯೋ ಒಂದೆರಡು ಹಸಿಯ ಸೌದೆ ತುಂಡುಗಳಿದ್ದು ಒಲೆಯು ಧಾರಾಳವಾಗಿ ಉರಿಯದೆ ಕೊಂಚ ತಂಟೆಯಾಗಿದ್ದು, ಪಾತಮ್ಮನವರ ಕಣ್ಣು ಮೂಗುಗಳಲ್ಲಿ ಅವರ ಮನಸ್ಸಿನಂತೆಯೇ ಉದ್ರೇಕವಾಗಿತ್ತು. ಮಗುವೇನು ಬಲ್ಲದು ಆ ವಕ್ರವನ್ನು? ಮಗುವಿನ ಸರಳ ಪ್ರಾರ್ಥನೆಗೆ ಋಜುವಾಗಿ ಉತ್ತರ ಕೊಡುವುದಕ್ಕೆ ಪ್ರತಿಯಾಗಿ, ವಕ್ರವಾಗಿ, "ಆಗಿದೆ ಬಾ. ತೋರಿಸುತ್ತೇನೆ" ಎಂದರು. ಅಭ್ಯಾಸವಿಲ್ಲದ, ಅಪರಿಚಿತವಾದ ಆ ವಕ್ರತೆಯನ್ನು ಕಂಡು, ಮಗುವು ಬಹಳ ನೊಂದುಕೊಂಡು, ಈಚೆಗೆ ಬಂದು ಮೂಲೆಯಲ್ಲಿ ಕುಳಿತು ಅಳುವುದಕ್ಕೆ ಆರಂಭಿಸಿತು. ಕೊಂಚ ಹೊತ್ತಿನೊಳಗೆ ಭಟ್ಟರೂ ಹೊರಗಿನಿಂದ ಬಂದರು.

ಸುಮಾರು ಹನ್ನೆರಡು ಗಂಟೆ ಇರಬಹುದು. ಬಿಸಿಲಿನಲ್ಲಿ ಅಲೆದುಕೊಂಡು ಬಂದ ಭಟ್ಟರು ಆಯಾಸದಿಂದ, ಕುಳಿತುಕೊಂಡು, ಕಾಲುಧೂಳಿ ಒದರಿಕೊಳ್ಳುತ್ತಿದ್ದಾರೆ. ಅತ್ತಿತ್ತ ತಿರುಗುವುದರೊಳಗಾಗಿ, ಮಗುವು ಅಳುತ್ತಿರುವುದು ಕಣ್ಣಿಗೆ ಬಿತ್ತು. ಅವರು ಅದನ್ನು ಬಳಿಗೆ ಕರೆದು "ಏನು?" ಎಂದು ವಿಚಾರಿಸುತ್ತಿರುವಾಗ ಪಾತಮ್ಮನವರು ಒಳಗಿನಿಂದಲೇ "ಏನೇ? ಬಿತ್ತರಿ! ಆಗಲೇ ಹೋಗಿ ಚಾಡಿಯನ್ನು ಹೇಳಿದೆಯೋ?" ಎಂದು ಬಂದುಬಿಟ್ಟರು.

ಭಟ್ಟರು "ಅವಳೇನು ಹೇಳಿದಳು ಎಂದು ಅವಳನ್ನು ಬಯ್ದೆಯೇ" ಎಂದರು. ಮೊದಲಾಯ್ತು. ಬೇಡವೆಂದುಕೊಂಡ ಮೇಲೆ ಹುಟ್ಟಿನ ಬಿರುಸಿನಿಂದ ಅಸ್ತವ್ಯಸ್ತವಾಗಿ, ಅರ್ಥವಿಲ್ಲದೆ, ಅವರೆರಡು ಇವರೆರಡು ಮಾತ

ನಾಡಿದರು. ಒಬ್ಬರಿಗೆ ರೇಗು, ಇನ್ನೊಬ್ಬರಿಗೆ ಬೇಸರ. ಕೊನೆಗೆ ಭಟ್ಟರಿಗೂ ಕೋಪ ಬಂದು "ಅವಿವೇಕಕ್ಕೂ ಮಿತಿಯಿರಬೇಕು. ಇಲ್ಲವಾದರೆ ಬದುಕುವುದೇ ಕಷ್ಟ !" ಎಂದರು.

ಪತಿಯ ಭರ್ತ್ಸನೆಗಳ ಪರಿಚಯವಿಲ್ಲದ ಪಾತಮ್ಮನವರಿಗೆ ಅದಷ್ಟು ಸಹಿಸದೆ ಹೋಗಿ ಅವರೂ, "ಹೌದು. ಒಲ್ಲದ ಗಂಡನಿಗೆ ಮೊಸರಲ್ಲಿ ಕಲ್ಲು" ಎಂದರು. ಮಧ್ಯಾಹ್ನದ ಕಾಲದಲ್ಲಿ, ಅದೂ ಹೊರಗಿನಿಂದ ಬಂದು ಮೈಬೆವರಿನ್ನೂ ಆರದಿರುವ ಸಮಯದಲ್ಲಿ, ಮಾತಿಗೆ ಮಾತು ಜೋಡಿಸುವ ಹೆಂಗಸನ್ನು ಯಾರು ಸಹಿಸಬಹುದು ? ಅದರಲ್ಲೂ ಮನಸ್ಸಿನ ಮೋಹವು ಸಡಲಿರಲು, ಇಂದ್ರಿಯಗಳು ವಿಷಯಾಂತರವನ್ನು ಬಯಸಿರಲು, ಕಾರಣಾಂತರಗಳಿಂದ ಉದಾಸೀನತೆಯು ಹೆಚ್ಚು ಹೆಚ್ಚುತ್ತಿರಲು, ಮುನಿಸು ಮಟ್ಟುಮೀರದಿರುವುದೆಂತು ? ಹಾಗೆಯೇ ದುಡುಕಿ ಮಾತನಾಡಿಯಾಡಿ ಅಭ್ಯಾಸವಾಗಿದ್ದ ಮಡದಿಯು ಗಂಡನ ಮನಸ್ಸಿನಲ್ಲಿ ಆಗಿರುವ ಕ್ಷೋಭವನ್ನರಿಯದೆ ಇರುವಾಗ, ತನಗೆ ಅಪರಾಧವಾಯ್ತೆಂದು ನಂಬಿರುವಾಗ, ಅದೆಂತು ಸುಮ್ಮನಿರುವುದು?

ಇಬ್ಬರಿಗೂ ಹತ್ತಿತು. ಭಾವಜ್ಞನಾದ ಚತುರನಿದ್ದಿದ್ದರೆ, "ನೀರು ತುಂಬಿದ ಕಾರ್ಮೋಡಗಳೆರಡೂ ಮಸೆಯುತ್ತಿವೆ. ಬಿರುಸಿಡಿಲು ಹೊಡೆಯುವುದು" ಎನ್ನಬೇಕು. ಅಷ್ಟು ಬಿಗಿಯಾದವು ಅವರ ಬಗೆಗಳು. ಆದರೆ, ಆಡಿದ ಮಾತೊಂದೊಂದಕ್ಕೂ ಒಂದೊಂದು ಮುತ್ತು ಒಡೆಯಿತು ಎಂಬ ಗಂಡ; ತಾನು ವಿದ್ಯಾವತಿಯಲ್ಲದಿದ್ದರೂ, ವಿದ್ಯಾವಂತನ ಮೋಹದ ಮಡದಿಯಾಗಿದ್ದುಕೊಂಡು, ಕೆರೆಯ ಮಗ್ಗುಲಿನ ಭಾವಿಯಂತೆ, ವಿದ್ಯಾಸಾರವನ್ನು ಗ್ರಹಿಸಿರುವ ಹೆಂಡತಿ. ವಿಕಟವಾದ, ಸ್ಫುಟಕೋಪಗಳ ಅಟ್ಟಹಾಸವೆಲ್ಲಿಂದ ಬರಬೇಕು?

ಎರಡು ನಿಮಿಷದೊಳಗಾಗಿ, ಭಟ್ಟರು ಕೋಪವನ್ನೆಲ್ಲ ನುಂಗಿಕೊಂಡು, ಬಿರುಗಣ್ಣಿಂದ ದುರದುರನೆ ನೋಡಿ, "ಇಷ್ಟುಬೇಗ ಋಣಾನುಬಂಧ ತೀರಿ ಹೋಗುತ್ತದೆಂದುಕೊಂಡಿರಲಿಲ್ಲ. ಕಣ್ಣೆದುರಿದ್ದು, ಕಿಡಿ ಕಾರುವುದಕ್ಕಿಂತ ಕಣ್ಮರೆ

ಯಾಗಿ ತೆಪ್ಪಗಿರುವುದು ಲೇಸು" ಎಂದು, ಬಿರುಸಾಗಿ ನುಡಿದು, ನಿಂತಿದ್ದವರು ಹಾಗೆಯೇ ಹೊರಟುಹೋದರು. ಪಾತಮ್ಮನವರಿಗೆ ಮಾತಿನ ಒಂದೊಂದಕ್ಷರವೂ ಒಂದೊಂದು ಸಬಳವಾಗಿ ತಿವಿದುವು. ಮೃದುವಾಗಿದ್ದರೂ, ಸಂಸ್ಕಾರಾಂತರಗಳಿಂದ ಕಾಠಿಣ್ಯವನ್ನು ಹೊಂದಿರುವ ಮೇಣದಂತಿದ್ದ ಅವರ ಮನಸ್ಸು, "ತನ್ನಲ್ಲಿ ಪ್ರಣಯವಿಟ್ಟುಕೊಂಡು, ತನ್ನನ್ನು ಆರಾಧಿಸುತ್ತಿರುವ ಪತಿಯು ತಿರಸ್ಕರಿಸುವುದಿಲ್ಲ" ಎಂಬ ನಂಬಿಕೆಯಿಂದ, ಶಿಲೆಮ್ಮನೆ ಇದ್ದ ಮನಸ್ಸು, ಋಣಾನುಬಂಧವು ತೀರಿತೆಂಬ ಮಾತನ್ನು ಕೇಳಿ ಬೆಚ್ಚಿತು. ಕಿವಿಯು ಜಾರಿದರೆ ಕುಸಿದುಬಿದ್ದು ಸಡಿಲವಾಗುವ ವೀಣೆಯ ತಂತಿಯಂತೆ, ಆಕೆಯ ಮನಸ್ಸು ಜೋತುಬಿತ್ತು. ತನ್ನದು ಅಪರಾಧವೆಂದು ತಿಳಿಯಿತು. ತಾನಷ್ಟು ಮಾತನಾಡಬಾರದಾಗಿತ್ತು ಎನ್ನಿಸಿತು. ಕೂಡಲೇ ಏರುತ್ತಿದ್ದ ಕೋಪವು ತಗ್ಗಿ, ಸಂತಾಪದ ಕುದಿಗೆ ಮೊದಲಾಯ್ತು.

ಆದಿನ ಹೆಚ್ಚುತ್ತಿರುವ ಸಂತಾಪದಿಂದ, ಹಣ್ಣಾಗಿದ್ದ ಪಾತಮ್ಮನವರಿಗೆ, ಸಂಜೆಯು ಸಮೀಪಿಸುತ್ತಬಂದಹಾಗೆಲ್ಲ, ಕಳವಳವು ಹೆಚ್ಚಾಯಿತು. ಭಟ್ಟರು ಲೋಕವ್ಯವಹಾರಗಳಲ್ಲೆಲ್ಲ, "ಒಂದುಮಾತು" ಆಡಿಮುಗಿಸತಕ್ಕವರು. ಅವರ ಇತರ ವ್ಯವಹಾರಗಳಲ್ಲಿ ಕಂಡುಬರುತ್ತಿದ್ದ, ಕ್ಲಿಪ್ತಿಯು ತಮಗೂ ಅನ್ವಯಿಸುವುದೋ? ಇನ್ನು ಭಟ್ಟರು ತಮ್ಮ ಮುಖವನ್ನೇ ನೋಡುವುದಿಲ್ಲವೋ?" ಎಂಬ, ಸಂಶಯವು ಹುಟ್ಟುವಷ್ಟು ಹೆಚ್ಚಾಯಿತು. "ಇನ್ನೇನುಗತಿ" ಎನ್ನಿಸಿ ದಿಗಿಲೂಲಿಯ್ತು. ಆಟವಾಡುತ್ತ ಆಡುತ್ತ ಅರಿಯದೆ ಪುಡಕೆಯನ್ನೊಡೆದು ಮಂಕಾದ ಮಗುವಿನಂತೆ, ಪಾತಮ್ಮನವರು ಬೆಪ್ಪಾಗಿಹೋದರು. ಏನುಮಾಡಿದರೂ ಬಗೆಹರಿಯಲಿಲ್ಲ. ಅತ್ತರು. ಉಪವಾಸದ ಸಂಕಟದ ಜೊತೆಗೆ, ಅಳುವಿನ ಎದೆಯುರಿಯೂ ಸೇರಿ, ಅವರು ಬೆಂದ ಸೊಪ್ಪಿನಂತೆ ಹಿಡಿಯಾಗಿ ಹೋದರು.

---

# ಹತ್ತೊಂಭತ್ತನೆಯ ಪರಿಚ್ಛೇದ

ಸಂಜೆಯಾದರೂ ಭಟ್ಟರು ಮನೆಗೆ ಬರಲಿಲ್ಲ. ಪಾತಮ್ಮನವರಿಗೆ ಏನೋ ಭಯ, ಏನೋ ದಿಗಿಲು, ಏನೋ ಆಕಾಶವೇ ಕಳಚಿಕೊಂಡ ತಲೆಯಮೇಲೆ ಬೀಳುವುದೆಂಬಂತಹ ಭಾವದ ಭಯ. ಬೇಕಾದಷ್ಟು ಯೋಚಿಸಿ, "ಆದುದಾಗಲಿ. ಅವರು ಬರದಿದ್ದರೆ, ಭಾವಿಯಲ್ಲಿ ಬಿದ್ದುಹೋಗುವುದು" ಎಂದುಕೊಂಡರು ಉತ್ತರಕ್ಷಣದಲ್ಲಿಯೇ, "ಮಕ್ಕಳ ಗತಿಯೇನು?" ಎನ್ನಿಸಿತು. ಎರಡನೆ ಯೋಚನೆಯು ಮೊದಲನೆಯ ಯೋಚನೆಯ ತಿನ್ನಲು ಮೂರನೆಯ ಯೋಚನೆಯು ಹುಟ್ಟಿತು. "ಮಕ್ಕಳನ್ನು ಬಿಟ್ಟು ಒರುವ ನೆಪದಿಂದ ತವರು ಮನೆಗೆ ಹೋಗುವುದು. ಅವರು ಬೇಕಾದರೆ ಬಂದು ಕರೆದುಕೊಂಡು ಬರಲಿ. ಇಲ್ಲವಾದರೆ ಅಷ್ಟುದಿನ ನೋಡಿ, ಭಾವಿಯಲ್ಲಿಯೋ ಕೆರೆಯಲ್ಲಿಯೋ,—" ಆಕೆಯ ಮನಸ್ಸು ಅಳುಕಿತು. ತುಂಬಿದ ಮನೆ, ನಗುತ್ತ ನಲಿಯುತ್ತ ನೆಗೆದಾಡುತ್ತಿರುವ ಮಕ್ಕಳು; ಒಗ್ಗಿದ, ಒಪ್ಪಿದ, ಒಲಿದ, ಗಂಡ; ಇದೆಯೆಂದು ಕೊಚ್ಚಿಸುವುದಕ್ಕೆ ಕೊಡುವಷ್ಟು ಇಲ್ಲದಿದ್ದರೂ, ಬಂದವರಿಗೆ ಹಿಡಿಯ ತುಂಬಾದರೂ ಕೊಡಬಲ್ಲಷ್ಟು ಸಂಪತ್ತು, ಇದೆಲ್ಲವನ್ನೂ ಬಿಟ್ಟು, ಭಾವಿ, ಕೆರೆ,..............ಉಹು ; ಆಕೆಗೆ ಮುಂದಕ್ಕೆ ಯೋಚಿಸಲು ಸಾಧ್ಯವಾಗಲಿಲ್ಲ. ಮೃತ್ಯುವಿಗೆ ಆಮಂತ್ರಣಕೊಟ್ಟು ಬರಮಾಡಿಕೊಳ್ಳುವುದಿರಲಿ; ಮೃತ್ಯುವು ಬಂದೀತೆಂಬ ಯೋಚನೆಯೇ ಬೇಕಾದಷ್ಟು ಭಯಪಡಿಸಿಬಿಟ್ಟಿತು.

ದೀಪವು ಹಚ್ಚಿದ ಅಷ್ಟು ಹೊತ್ತಿಗೆ ಭಟ್ಟರು ಮನೆಗೆ ಬಂದರು. ಪಾತಮ್ಮನವರಿಗೆ ಹಾರಿಹೋಗಿದ್ದ ಜೀವವು ಮರಳಿ ಬಂದಂತಾಯಿತು ; ಅಳಿದಿದ್ದ ಧೈರ್ಯವು ಹಿಂತಿರುಗಿತು. "ಆದುದಾಗಲಿ. ಅವರ ಕೈಕಾಲು ಹಿಡಿದುಕೊಂಡು 'ಹಿಂದಿನದೆಲ್ಲ ಮರೆತುಬಿಡಿ ಎಂದರೆ!' ಎಂದು ಹೇಳಿಕೊಳ್ಳಬೇಕೆಂ"ದು ನಿರ್ಧರವಾಯಿತು. "ಏನಾದರೂ ಮಾಡಿ, ಅವರನ್ನು ಮಾತನಾಡಿಸಬೇಕು" ಎಂದು ಖಂಡಿತವಾಗಿ ಹೋಯಿತು.

ಹೆಂಗುಸು ಬೇಕೆಂದ ಕೆಲಸವೇನು ನಡೆಯುವುದಿಲ್ಲ? ಉಪವಾಸದ ಆಯಾಸ, ಅಳುವಿನ ಸಂಕಟ, ಎಲ್ಲವನ್ನೂ, ಅತ್ತಕಟ್ಟಿಟ್ಟು, ತಟಪಟನೆ ರುಚಿಯಾಗಿ, ಶುಚಿಯಾಗಿ, ಸಣ್ಣ ಅಡುಗೆ ಮಾಡಿ ಪೂರಯಿಸಿದರು. ಸಂಧ್ಯಾವಂದನಕ್ಕೆ ಮಣೆಹಾಕಿ, ಮಡಿ, ನೀರು, ವಿಭೂತಿಯಿಟ್ಟಾಯ್ತು. ತಟ್ಟನೆ ಜಂರ್ಝೂ ಮಾರುತವೆದ್ದು, ಎಲ್ಲಿಂದಲೋ ಒಂದು ಮೋಡವನ್ನು ತಂದು ಒಂದು ಗಳಿಗೆಯ ಕಾಲ ಎಲ್ಲೂ ಇಲ್ಲದ ಆರ್ಭಟವಮಾಡಿ, ಮಳೆಗರೆದು ಉತ್ತರಕ್ಷಣದಲ್ಲಿಯೇ ಮೋಡದೊಡನೆ ಮರೆಯಾದರೆ, ಮತ್ತೆ ತಿಳಿಬೆಳಕೆದ್ದಾಗ ನಗುವ ಲೋಕದಂತೆ, ಪಾತಮ್ಮನವರು ಮಧ್ಯಾಹ್ನದ ದುರ್ಘಟನೆಯನ್ನು ಮರೆತು, ನಗುನಗುತ್ತ ಮೊದಲಿನಂತೆ ತಿರುಗಾಡಲಾರಂಭಿಸಿದರು. ಹಿಂತಿರುಗಿದ ಆಕೆಯ ನಗುವಿನೊಡನೆ, ಮನೆಗೊಂದು ಹೊಸಜೀವ ಹುಟ್ಟಿದಂತಾಗಿ, ಕನ್ನಡಿಯನ್ನು ಒರೆಸಿಟ್ಟಂತಾಯ್ತು.

ಭಟ್ಟರು ಆದ ಬದಲಾವಣೆಯನ್ನು ಕಂಡು "ಹಾಳು ಪ್ರಾರಬ್ಧ ತೀರಿತೇನೋ ಮತ್ತೆ ನಗೆಮೊಗವನ್ನು ಕಂಡಂತಾಯ್ತು. ಇದಿಷ್ಟರಲ್ಲಿಯೇ ಕಳೆದು ಹೋಗುವುದು ಎಂದುಕೊಂಡಿದ್ದವರಾರು ? ವಿಪತ್ತು ತೊಲಗಿತಲ್ಲ ?" ಎಂದುಕೊಂಡು ಸಮಾಧಾನ ಚಿತ್ತರಾಗಿ, ಪ್ರಸನ್ನಮನಸ್ಕರಾಗಿ ಅಂದು ಸಂಧ್ಯೆಯನ್ನು ಮಾಡಿದರು. ತಂದೆತಾಯಿಗಳ ಚಿತ್ತವೃತ್ತಿಯು ಮಕ್ಕಳ ಮುಖದಲ್ಲಿಯೂ ನಗೆಯಾಗಿ ಮೆರೆಯಿತು. ಎಲ್ಲರೂ ತಟಪಟನೆ ತಮ್ಮತಮ್ಮ ಕಾರ್ಯಗಳಲ್ಲಿ ತೊಡಗಿದ್ದಾರೆ. ಎಲ್ಲವೂ ವ್ಯವಸ್ಥಿತವಾಗಿ, ನಗುವ, ನಚ್ಚಿನ, ನಂಟನ ನಲವಿನ ವ್ಯಾಪಾರದಂತೆ ಪ್ರಿಯವೂ ಹಿತವೂ ಆಗಿದೆ.

ಇನ್ನೇನು ಎಲ್ಲರೂ ಊಟಕ್ಕೆ ಕುಳಿತುಕೊಳ್ಳಬೇಕು. ಆ ವೇಳೆಗೆ ಸರಿಯಾಗಿ, ಪಾತಮ್ಮನವರ ತವರ್ಮನೆಯಿಂದ ಗಾಡಿಯು ಬಂತು. ಗಾಡಿಯವನು ಬಂದು, ಅಯ್ಯನವರನ್ನು ಕಾಣಿಸಿಕೊಂಡು, ಒಂದು ಪತ್ರವನ್ನೊಪ್ಪಿಸಿದನು ಪತ್ರದಲ್ಲಿ ಬಹಳ ಬರೆದಿರಲಿಲ್ಲ "ತೀರ್ಥರೂಪರವರಲ್ಲಿ ಸಾಷ್ಟಾಂಗ ನಮಸ್ಕಾರಗಳು. ಇಲ್ಲಿ ಮಾತೃಶ್ರೀಯವರಿಗೆ ಇದ್ದಕ್ಕಿದ್ದ ಹಾಗೆಯೇ ಬಹಳ ಹೆಚ್ಚು ಜ್ವರವು ಬಂದು, ವಿಷಮಿಸಿಕೊಂಡಹಾಗಾಗಿದೆ. ಸೌಭಾಗ್ಯ

ಪತಿಯೂ ಹೊರಗಾಗಿದ್ದಾಳೆ. ಈ ಕಾಗದವನ್ನು ಕಂಡಕೂಡಲೇ ಮಾತೃಶ್ರೀ ಪಾತಕ್ಕನವರನ್ನು ಇದೇ ಗಾಡಿಯಲ್ಲಿಯೇ ಕಳುಹಿಸಿಕೊಡುವುದು.

ಇತಿ ಸಾ|| ನಮಸ್ಕಾರಗಳು.

ನಾರಾಯಣ

ಭಟ್ಟರಿಗೆ ಪತ್ರವನ್ನು ನೋಡಿದ ಕೂಡಲೇ ಏನೋ ಸಿಡಿಲು ಹೊಡೆದ ಹಾಗಾಯಿತು. ಪ್ರಿಯಕಲತ್ರರಾದ ಭಟ್ಟರು ಪ್ರಸನ್ನೆಯಾದ ಪತ್ನಿಯೊಡನೆ ಸಂಭವಿಸುವ ಪ್ರಿಯಾಲಾಪವನ್ನು, ಅಜ್ಞಾತವಾಗಿ, ಅಪ್ರಾರ್ಥಿತವಾಗಿ ಸಂಭವಿಸಿದ್ದ ಮನಃಕಷಾಯವನ್ನು ಕಳೆಯುವ ಅವಕಾಶವನ್ನು, ಕುರಿತು ಯೋಚಿಸುತ್ತಿದ್ದರು "ಮೂಲೇಕುಠಾರಃ" ಆದಂತಾಗಿ ಅವರ ಕಲ್ಪನಾ ಸಾಮ್ರಾಜ್ಯವೆಲ್ಲವೂ ಕ್ಷಣಾರ್ಧದಲ್ಲಿ ಧ್ವಂಸವಾಗಿ ಹೋಯ್ತು.

ಭಟ್ಟರ ಮುಖದಲ್ಲಿ ಚಿತ್ರಗೊಂಡು ಪ್ರಕಟವಾಗಿ ಕಾಣುತ್ತಿದ್ದ ನಿರಾಶೆಯ ರೂಪವನ್ನು ಕಂಡು, ಆಕೆಯು ಅಪ್ರತಿಭರಾದರು. ಮನಸ್ಸು ಗಾಬರಿಗೊಂಡಿತು; ವಿಚಾರಿಸಿ, ತಾಯಿಯ ಅನಾರೋಗ್ಯವನ್ನು ಕೇಳಿ, ಅವರೂ ಕಳವಳಗೊಂಡರು. ಅವರೂ ಏನೇನೋ ಯೋಚಿಸಿ, "ಸರಿ ಏನೋ ವಿಪತ್ತು ಬಂತು. ಅಮ್ಮನಿಗೆ ಏನು ಆಗುತ್ತದೆಯೋ ಏನೋ? ನಾಳೆ ಬೆಳಿಗ್ಗೆಯೇ ಹೊರಟುಬಿಡಬೇಕು ಎಂದರೆ! ಈಗಲೇ ಹೊರಟುಬಿಡಬೇಕು. ಆದರೇನು ಮಾಡುವುದು? ಗಾಡಿ ಈಗ ತಾನೆ ಬಂದಿದೆ. ಎತ್ತುಗಳು ಸೋತುಹೋಗಿವೆ." ಎಂದು ಗೊಣಗುಟ್ಟಿಕೊಂಡರು. ಆಡಿದ ಮಾತಿನ ಧ್ವನಿಯಲ್ಲಿ ವೈಚಿತ್ರ್ಯವೇನೂ ತೋರದೆ ಇದ್ದರೂ, ಭಟ್ಟರು ಸಮಾಧಾನದ ಸಂತೋಷದಿಂದ ತಲೆಯೆತ್ತಿ ಹೆಂಡಿತಿಯನ್ನು ನೋಡಿದರು ಆಕೆಯು ಸಣ್ಣನಗು ನಕ್ಕು, ಎಳೆಯ ಹುಡುಗಿಯಂತೆ, ತಲೆಯನ್ನು ಬಗ್ಗಿಸಿದರು.

ಬಾಗಿಲಲ್ಲಿದ್ದ ಗಾಡಿಯಾಳಿನ ಮಾತು ಎಲ್ಲವನ್ನೂ ಇತ್ಯರ್ಥಮಾಡಿಬಿಟ್ಟಿತು. ಅವನು "ಅರಹಾದೀಲಿ ಇನ್ನೊಂದು ಜತೆ ಎತ್ತು ಬಂದಿರು

ತ್ತದೆ ಕಣಮ್ಮಣ್ಣೀ ! ಅಯ್ಯನವರು ಇವತ್ತೇ ಹೊರಡುವ ಹಾಗೆ ಹೇಳಿದ್ದಾರೆ " ಎಂದನು.

ಪಾತಮ್ಮನವರು ಒಂದು ನಿಟ್ಟುಸಿರನ್ನು ಬಿಟ್ಟು, "ಹಾಗೇನು ? ಆಗಲಪ್ಪಾ !" ಎಂದರು. ಭಟ್ಟರು ತಲೆಯನ್ನು ಮೇಲಕ್ಕೆತ್ತಲೇ ಇಲ್ಲ.

ಆ ರಾತ್ರಿ ಸುಮಾರು ಹನ್ನೊಂದು ಘಂಟೆಯ ವೇಳೆಗೆ ಗಾಡಿಯು ಪಾತಮ್ಮನವರನ್ನು ಕರೆದುಕೊಂಡು ಹೊರಟಿತು. ಪಾತಮ್ಮನವರ ಕಣ್ಣಿನಲ್ಲಿ ನೀರು ಸುರಿಯುತ್ತಾ ದೃಷ್ಟಿಯು ಮಂದವಾಗಿತ್ತು. ಚಿಂತಾಜಡವಾದ ಮನಸ್ಸು ಅವರ ಮುಖದಂತೆಯೇ ಕಳೆಗೆಟ್ಟಿತ್ತು. ಗಂಡಹೆಂಡಿರು ಇಬ್ಬರೂ ಏಕಾಂತವಾಗಿ ಕುಳಿತು ಒಂದಷ್ಟು ಹೊತ್ತು ಮಾತನಾಡಿದ್ದರೆ ಚೆನ್ನಾಗಿತ್ತು. ಹಿಂದಿನ ಕೊಳೆಯಲ್ಲವೂ ಕಳೆದು, ಕಳೆಕಿತ್ತ ಕೈತೋಟದಂತೆ ಮುಂದಿನ ಸಂತೋಷದ ಬೆಳೆಗೆ ಅನುಕೂಲವಾಗುತ್ತಿತ್ತು. ಆದರೆ, ಎಲ್ಲವೂ ನಾವು ಹೇಳಿದಂತೆಯೇ ಆಗುವುದೇ ? ಕೇಳಿದಂತೆಯೇ ನಡೆಯುವುದೇ ?

---

## ಇಪ್ಪತ್ತನೆಯ ಪರಿಚ್ಛೇದ.

---

ಪಾತಮ್ಮನವರು ತವರುಮನೆಗೆ ಹೋಗಿ ಒಂದುವಾರವಾಯಿತು. ಮನೆಯಲ್ಲಿ ಭಟ್ಟರನ್ನುಬಿಟ್ಟು ಇನ್ನು ಯಾರೂ ಇಲ್ಲ. ಬೆಳಿಗ್ಗೆ " ಶೂದ್ರರವಳು " ಬಂದು ಮನೆಯೆಲ್ಲವನ್ನೂ ಗುಡಿಸಿ ಸಾರಿಸಿ ರಂಗವಲ್ಲಿ ಹಾಕಿ ಹೊರಟು ಹೋಗುವಳು. ಸಂಜೆಗೆ ಬಂದು ದೀಪವನ್ನು ಹಚ್ಚುವಳು. ಈ ಮಧ್ಯ ಕಾಲದಲ್ಲಿ ಯಾರೂ ಇರುತ್ತಿರಲಿಲ್ಲ. ಹಿಂದೆ ಎಷ್ಟೋಸಲ ಪಾತಮ್ಮನವರು ತವರುಮನೆಗೆ ಹೋಗಿದ್ದರು. ಆಗೆಲ್ಲ ಹೀಗೆಯೇ ನಡೆಯುತ್ತಿದ್ದುದು. ಒದೊಂದುವೇಳೆ ಅಡುಗೆಮಾಡಿಕೊಳ್ಳುವುದು ಬೇಸರವಾದರೆ, ಭಟ್ಟರು ಒಬ್ಬಳು ಅಡಿಗೆಯವಳನ್ನು ಗೊತ್ತುಮಾಡುವರು.

ಈಸಲ ಭಟ್ಟರಿಗೆ ಹೊಸದೊಂದು ಅನುಭವವಾಯ್ತು. ಹೆಂಡಿತಿ ಯನ್ನು ಬಿಟ್ಟಿರುವುದು ಕಷ್ಟವಾದರೂ, ಇದುವರೆಗೂ ಅವರ ನೆಮ್ಮದಿಗೆ ಭಂಗವಾಗುವಷ್ಟು ತೊಂದರೆಯಾಗುತ್ತಿರಲಿಲ್ಲ; ಬರಿಯಕಾಲಿನಲ್ಲಿ ನಡೆದು ಅಭ್ಯಾಸವಿಲ್ಲದವರಿಗೆ, ಬರಿಯಕಾಲಿನಲ್ಲಿ ನಡೆಯಬೇಕಾದ ಸಂದರ್ಭ ಬಂದರೆ ಅಗುವಂತೆ, ಸ್ವಲ್ಪವಾದ ಸಹನೀಯವಾದ ಕಷ್ಟವಾಗುತ್ತಿತು. ಆದರೆ ಅದಕ್ಕಾಗಿ ಅವರು ಎಂದೂ ಅಷ್ಟು ಕಾತರರಾಗುತ್ತಿರಲಿಲ್ಲ ಈಸಲ ಹಾಗಾಗ ಲಿಲ್ಲ. ಪಿಶಾಚಿಗಳಿಂದು ಭ್ರಾಂತಿಗೊಂಡವರು, ಮನಸ್ಸಿನಲ್ಲಿರುವ ಅಳುಕು ಅಂಜಿಸುತ್ತಿರಲು, ಮುಂದಕ್ಕೆ ಅಡಿಯಿಡುವುದಕ್ಕೆ ಹೆದರಿ, ಮತ್ತೊಬ್ಬರ ನೆರ ವನ್ನು ಅಥವಾ ಇರವನ್ನು ಅಪೇಕ್ಷಿಸುವಂತೆ, ಭಟ್ಟರು ಇತರರಿಗೆ ಗೋಚರಿ ಸದ ಯಾವುದೋ ಬೆದರಿಕೆಗೆ ಸಿಕ್ಕಿ, ಅದರಿಂದ ತಪ್ಪಿಸಿಕೊಳ್ಳಲು ಪತ್ನಿಯ ಸಹಾಯವನ್ನು ಕೋರುವವರಾದರು. ಇದ್ದಕ್ಕೆ ಇದ್ದಂತೆಯೇ ನಿಟ್ಟುಸಿರು ಬಿಟ್ಟು ಸುತ್ತಮುತ್ತ ಗಾಬರಿಯಿಂದ ನೋಡಿ, "ಅಯ್ಯೋ! ಅವಳಿದ್ದರೆ ಚೆನ್ನಾಗಿತ್ತು" ಎಂದುಕೊಳ್ಳುವರು. ದಾರಿನಡೆದು ಆಯಾಸಪಟ್ಟುಬಂದವರು ಹಜಾರದಲ್ಲಿ ಬಂದು ಕುಳಿತುಕೊಳ್ಳಬೇಕೆಂದುಕೊಂಡು ಅಭ್ಯಾಸವಶದಿಂದ ಒರಗಿಕೊಳ್ಳಲು ಗೋಡೆಯ ಕಡೆಗೆ ವಾಲಿದರೆ, (?) ಒರಗುದಿಂಬು ಸಿಕ್ಕ ದಿದ್ದರೆ ಆಗುವ ಮನಸ್ಸಿನ ಸ್ಥಿತಿಯಂತೆ ಭಟ್ಟರ ಸ್ಥಿತಿಯಾಯ್ತು.

ಅವರ ನಿತ್ಯನೈಮಿತ್ತಿಕ ಕರ್ಮಗಳಿಗೆ ಲೋಪವಾಗಲಿಲ್ಲ. ದಿನವೂ ಬೆಳಗೆದ್ದು ಅಗ್ನಿಹೋತ್ರಾದಿಗಳನ್ನು ಮುಗಿಸಿ ದೇವರ ಪೂಜೆಯನ್ನು ಮಾಡಿ ಕೊಂಡು, ತಮ್ಮ ವ್ಯವಹಾರಗಳನ್ನು ನೋಡಿಕೊಳ್ಳುದರು. ಮತ್ತೆ ಮಡಿ ಯುಟ್ಟು ಮಾಧ್ಯಾಹ್ನಿಕಾದಿಗಳನ್ನು ಮಾಡಿ ಊಟವನ್ನು ಮುಗಿಸುವರು. ಮಧ್ಯಾಹ್ನದಲ್ಲಿ ಇಳಿಹೊತ್ತಾಗುವವರೆಗೂ ಗ್ರಂಥವ್ಯಾಸಂಗದಲ್ಲಿದ್ದು, ಬಿಸಿಲು ತಂಪಿದಮೇಲೆ ಹೊರಗೆಹೋಗಿ ಸಂಜೆಗೆ ಮುಂಚೆ ಮನೆಗೆ ಬರುವರು. ಅವರಿಗೆ ಇದುವರೆಗೂ ಈ ಕಾರ್ಯಕ್ರಮದಲ್ಲಿ. ಬೇಸರವಾಗಿರಲಿಲ್ಲ ಆದರೆ ಈಸಲ ಹಾಗಾಗಲಿಲ್ಲ. ಮನೆಗೆ ಕಾಲಕ್ಕೆ ಸರಿಯಾಗಿ ಬರುವುದಕ್ಕೆ ಬೇಡ. ಒತ್ತುತ್ತಿರುವ ಮನೋಭಾರದಿಂದ ತಪ್ಪಿಸಿಕೊಳ್ಳಲು ಯಾರಾದರೂ, ಜೊತೆಯಲ್ಲಿರಬೇಕು ಎನ್ನುವರು ಗ್ರಂಥಗಳಲ್ಲಿ ಶಾಸ್ತ್ರಗ್ರಂಥಗಳ ಮೇಲೆ

ಧೂಳು ಕೂರುತ್ತಬಂದು, ಕಾಳಿದಾಸನ ಗ್ರಂಥಗಳು-ಅದರಲ್ಲೂ ಕಾವ್ಯಗಳು ಪ್ರಿಯವಾದವು. ಪುಸ್ತಕಕ್ಕೆಂದು ಕೈನೀಡಿದರೆ, ಯೇಕೋ ಯೇನೋ ಕುಮಾರಸಂಭವ, ಮೇಘಸಂದೇಶಗಳೇ ಸಿಕ್ಕುವವು. ಭಟ್ಟರು, "ಹುಂ! ಈಪೊತ್ತು ಆ ಗ್ರಂಥವನ್ನು ನೋಡಬೇಕೆಂದಿದ್ದೆ! ಇದು ಸಿಕ್ಕಿತು! ಹೋಗಲಿ ಇದನ್ನೇ ನೋಡುವುದು" ಎನ್ನುವರು.

ಇನ್ನೂ ಒಂದುವಾರವಾಯ್ತು. ಅವರ ಮನಸ್ಸು ಏನನ್ನೋ ನೋಡಬೇಕೆಂದು, ಯಾರನ್ನೋ ಕಾಣಬೇಕೆಂದು ಒದ್ದಾಡುತ್ತಿದೆ. ಭಟ್ಟರು ಅದನ್ನು "ಹೆಂಡಿತಿಯಮೇಲೆ ಗೀಳು" ಯಾಕೋ ಹಿಡಿಯಿತು ಎನ್ನುವರು. ಚಿತ್ತವು ಯಾವುದೋ ಪ್ರತಿಮೆಯನ್ನು ಕುರಿತು ಚಿಂತಿಸುವುದು. ಅದನ್ನು ಅವರು ಪಾತಮ್ಮನವರ ಪ್ರತಿಬಿಂಬವೆನ್ನುವರು. ಇನ್ನೊಮ್ಮೆ ಸುಖಸ್ಪರ್ಶದ ಅನುಭವದ ಸುಖಸ್ಮರಣೆಯಲ್ಲಿ ಮನಸ್ಸು ತೇಲಿಹೋಗಿ ಒಂದೊಂದುವೇಳೆ ಹೊರಗಿನ ಪ್ರಪಂಚವು ಮರೆತುಹೋದಾಗ ಮಾತ್ರ, ಭಟ್ಟರು ಪಾತಮ್ಮನವರನ್ನು ಸಂಪೂರ್ಣವಾಗಿ ಮರೆತುಬಿಟ್ಟು, ಆ ಇನ್ನಾವುದೋ ಮೂರ್ತಿಯ ಆರಾಧನೆಯಲ್ಲಿ ಮಗ್ನರಾಗಿ ಹೋಗುವರು. ಆ ಭಾವಸಮಾಧಿಯು ಮುರಿದು, ಬಾಹ್ಯಜ್ಞಾನವಾದಾಗ "ಆ ಮುಗ್ಧೆಯನ್ನು ಕಂಡು ನಾನಿಷ್ಟು ಮುಗ್ಧನಾಗುವುದೇ? ಛೀ! ಛೀ! ಕೂಡದು. ಕೂಡದು." ಎಂದು ನಿವಾರಿಸಿಕೊಂಡು, ಆ ಸ್ಥಳವನ್ನು ಬಿಟ್ಟುಹೋಗುವರು. ಅಥವಾ, ಮಗ್ಗುಲಲ್ಲಿ ಹಾವನ್ನು ಕಂಡವರು ಗಾಬರಿಗೊಂಡು ಜಗ್ಗೆಂದು ಎದ್ದು ಆ ಸ್ಥಳವನ್ನು ಬಿಟ್ಟು ಹೋಗುವಂತೆ ಹೋಗುವರು. ಆದರೆ, ಮೂರ್ತಿಯು ಮಾತ್ರ ಕದಲುತ್ತಿರಲಿಲ್ಲ; ಹೃದಯಪೀಠದಲ್ಲಿ ಅಚ್ಚಳಿಯದೆ, ಅಲ್ಲಾಡದೆ ನಿಂತಿರುವುದು. ಒಳಗಿರುವುದನ್ನು ಬಿಡಬೇಕೆಂದು ಇದ್ದೆಡೆಯಿಂದ ಎದ್ದರೆ, ಇದ್ದುದೆಂತು ದೂರವಾಗುವುದು?

ಅಂತೂ ಭಟ್ಟರಿಗೆ ವಿಚಿತ್ರದನುಭವಗಳಿಗೆ ಮೊದಲಾಯ್ತು. ಅವರು ಒಮ್ಮೊಮ್ಮೆ ತಮಗೆ ದೆವ್ವಹಿಡಿಯಿತೋ ಎಂದುಕೊಳ್ಳುವರು. ಕೂಡಲೆ ಮನಸ್ಸು ಅವಳು ಬಂದರೆ ದೆವ್ವ ಬಿಟ್ಟುಹೋಗುತ್ತದೆ. ಎನ್ನುವುದು .ಒಮ್ಮೆ ಹೌದೆಂದರೂ ಇನ್ನೊಮ್ಮೆ ಉಹುಂ ಎಂದು ಖಂಡಿತವಾಗಿ ತೋರುವುದು. "ಅಂತೂ ಏನಾದರೂ ಆಗಲಿ ಅವಳಿದ್ದರೆ ಒಳ್ಳೆಯದು. ಈಪೊತ್ತು ಅವಳಿಗೆ

ಹೊರಟುಬರುವಂತೆ ಕಾಗದ ಬರೆದುಬಿಡುವುದು.'' ಎಂದು ಗೊತ್ತುಮಾಡು ವರು. ಆದರಂತೆ ಕಾಗದ ಬರೆಯಬೇಕೆನ್ನುವುದರೊಳಗಾಗಿ ಹಗಲೆಲ್ಲ ಮುಗಿದು ಸಂಜೆಯಾಗುವುದು. ಸರಿ ನಾಳೆ ಬರೆಯುವುದೆಂದು ಭಟ್ಟರು ಸುಮ್ಮನಾಗು ವರು ಹೀಗೆಯೇ ಆ ವಾರವೆಲ್ಲ ಕಳೆದು ಹೋಯಿತ್ತು. ಭಟ್ಟರು ಹೆಂಡ ತಿಗೆ ಕಾಗದ ಬರೆಯಲಿಲ್ಲ. ಅವರು ತಮ್ಮ ಮನಸ್ಸನ್ನು ನೇರವಾಗಿ, ನಿಜವಾಗಿ, ಚೆನ್ನಾಗಿ ಅರಿತವರಾಗಿದ್ದರೆ, ''ಹೌದು! ಹೌದು! ನಾನು ಮಾಡಿದುದೇ ಸರಿ. ನಾನು ಬಾಯೆಂದು ಬರೆಯಬೇಕೆಂದಿರುವುದು ಅವಳಿ ಗಲ್ಲ; ಇನ್ನೊಬ್ಬಳಿಗೆ. ಅದರಿಂದ ಬರೆಯಲಿಲ್ಲ'' ಎಂದು ಒಪ್ಪಿಕೊಳ್ಳುತ್ತಿ ದ್ದರು. ಆದರೆ ಹಾಗೆ ಒಪ್ಪಿಕೊಳ್ಳುವ ಸಂಭವವು ಬರಲಿಲ್ಲ

ಪಾತಮ್ಮನವರು ತವರೂರಿಗೆ ಹೋಗಿ ಇಪ್ಪತ್ತು ದಿನವಾಯ್ತು ಭಟ್ಟರ ಕಳವಳವು ಹೆಚ್ಚಾಯ್ತು. ಒಮ್ಮೊಮ್ಮೆ ಯಾರೋ ಜೊತೆಯಲ್ಲಿ ಓಡಾಡಿದಂತಿರುವುದು. ಇನ್ನೊಮ್ಮೆ ಯಾರೋ, ಕಂಬನಿಗಳಿಂದ ಮಲಿನ ವಾಗಿದ್ದರೂ ಕೆಂಪು ಕಾಣಿಸುತ್ತಿರುವ ವಿಶಾಲನಯನಗಳಿಂದ, ಎತ್ತಿದ ಹುಬ್ಬುಗಳಿಂದ ದುರದುರನೆ ನೋಡಿ ಯೇನೋ ಹೇಳಿ ಹೊರಟುಹೋದಂತೆ ಕಾಣಿಸಿದ ಹಾಗಾಗುವುದು. ಮತ್ತೊಮ್ಮೆ ಉದಯಿಸುತ್ತಿರುವ, ಭಗವಂತ ನಾದ ಭಾಸ್ಕರನ ಕಿರಣಜಾಲವು ಪ್ರಪಂಚದ ತಮಸ್ಸನ್ನು ಇಷ್ಟಿಷ್ಟಾಗಿ ಕಳೆ ಯುವ ಪುಣ್ಯಕಾಲದಲ್ಲಿ ನಿತ್ಯಕರ್ಮದಲ್ಲಿ ಮಗ್ನರಾಗಿದ್ದು ತಾವು ಕಣ್ಣು ಬಿಟ್ಟಾಗ ಸ್ನಾನದಿಂದ ಶುದ್ಧಳಾಗಿ ಹೃದಯದ ಪವಿತ್ರತೆಯು ಮುಖದಲ್ಲಿ ತಾಂಡವವಾಡುತ್ತಿರಲು ನಿಂತಿದ್ದ ಕನ್ನೆಯೊಬ್ಬಳ ಪಠವನ್ನು ಚಿತ್ತವು ತಂದು ಕಣ್ಣೆದುರಿಗೆ ಹಿಡಿದು ಮನಸ್ಸನ್ನು ಚಿತ್ರಗತೆಯಾದವಳಲ್ಲಿ ಹೊಂದಿಸಿ ಬಿಟ್ಟು, ತಾನದನ್ನು ನೋಡಿ ಕಲ್ಪನೆಯ ಭೋಗಸಾಮ್ರಾಜ್ಯದ ಸೌಖ್ಯದಲ್ಲಿ ಮಗ್ನವಾಗುವುದು. ಹೀಗೆ ನಾನಾವಿಧವಾದ ಆಶಾತರಂಗಗಳು ಮೇಲಿಂದ ಮೇಲೆ ಎದ್ದೂ ಎದ್ದೂ ಭಟ್ಟರ ಅ ೦ ತ ರ ೦ ಗ ದ ಶಾಂತಿಯು ಅಳಿದು ಹೋಯಿತು.

ಇಂದಿನ ಭಟ್ಟರೇ ಬೇರೆ; ನೋಡುವರ ಕಣ್ಣಿಗೆ ಕಾಣುವುದು ಬಲು ಕೊಂಚ ವ್ಯತ್ಯಾಸ; ಒಂದು ಎರಡು ಸುತ್ತು ಇಳಿದಂತೆ ತೋರುವುದು

ಅಷ್ಟೆ. ಆದರೆ, ಒಳಗೆ ಬೇಕಾದಷ್ಟು ವ್ಯತ್ಯಾಸವಾಗಿ ಹೋಗಿದೆ. ಒಂದಷ್ಟು ಗಾತ್ರ ನೀರು ಹರಿಯುವ ನಿರ್ಝರಿಣಿಯ ಮಾರ್ಗ್ಗದಲ್ಲಿ ಪೈ ಬಗ್ಗಿ ಕೆಲಸಮಾಡುವ ನಿಪುಣನ ಕೈವಾಡದ ಫಲವಾಗಿ ಮೆರೆಯುವ ತೋಟದಂತೆ ಕಳಕಳಿಸುತ್ತಿದ್ದ ಸ್ಥಿತಿಯು ಮಾಯವಾಗಿ, ಹುಚ್ಚು ಹೊಳೆಯು ಹರಿದು ಅತ್ತಿತ್ತ, ಎತ್ತೆತ್ತ ನೋಡಿದರೂ ಹಳ್ಳಗಳು ದಿಣ್ಣೆಗಳು, ಕಲ್ಲುಮರಳು ಕಾಣಿಸುತ್ತ ಅಸ್ತವ್ಯಸ್ತವಾಗಿ, ಭೀಕರವಾಗಿಲ್ಲದಿದ್ದರೆ ಹೋಗಲಿ, ಬಯಲಾಗಿ ಕಾಣುವ ಪ್ರದೇಶದಂತೆ ಆಗಿದೆ.

ಆದರೆ, ಆದನ್ನು ಕಂಡು ಅಯ್ಯೋ ಎನ್ನುವವರಿಲ್ಲ. ದುಃಖವನ್ನು ಕಂಡು ಕನಿಕರಪಟ್ಟು ಮರುಗಿ "ಅದು ಬೇಡ ಇದು ಮಾಡು" ಎಂದು ಹೇಳುವ ಸ್ನೇಹಿತರು ಭಟ್ಟರಿಗೆ ಯಾರೂ ಇರಲಿಲ್ಲ. ಎಲ್ಲರೂ ಭಟ್ಟರು ದೊಡ್ಡವ ರೆಂದು ಅವರ ಹತ್ತಿರ ತಾವು ಬಂದು, ತಮ್ಮ ಕಷ್ಟನಿಷ್ಟುರಗಳನ್ನು ಅರಿಕೆ ಮಾಡಿ ಅವರಿಂದ ಉಪದೇಶಗಳನ್ನು ಪಡೆದು ಹೋಗುವ ವಾಡಿಕೆ. ಭಟ್ಟ ರೆಂದರೆ ಎಲ್ಲರೂ ಕೈಯೆತ್ತಿ ಮುಗಿಯುವ ಪದಾರ್ಥವೆಂದುಕೊಂಡಿದ್ದರಲ್ಲದೆ, ಕನಿಕರಿಸಬೇಕಾದ ವಸ್ತುವೆಂದು ಯಾರ ಮನಸ್ಸಿಗೂ ತೋರಲೇ ಇಲ್ಲ. ತನ್ನ ಸರ್ವಸ್ವವೂ ಪರಬೊಮ್ಮದ ಸೊಮ್ಮೆಂದು ನಂಬಿ, ತ್ರಿಕರಣಶುದ್ಧಿ ಯಿಂದ ಕೊಡುಗೈಯ್ಯಾಗಿ, ಮುಕ್ತಹಸ್ತನಾಗಿ ದಾನಮಾಡುವ ಮಹಾ ಪುರುಷನು ಎಲ್ಲರ ಕಣ್ಣಿಗೂ ತಮ್ಮ ಸಂಕಟವನ್ನು ಕಳೆಯುವ ಪ್ರಭುವಾಗಿ ಮಾತ್ರ ಕಾಣುವಂತೆ, ಭಟ್ಟರು ಎಲ್ಲರ ಕಣ್ಣಿಗೂ ಶಾಂತಿಯ ನಿವಾಸಸ್ಥಾನ, ಜ್ಞಾನದ ವಿಕಾಸಸ್ಥಾನ, ವಿಜ್ಞಾನದ ಉಗಮಸ್ಥಾನ, ಎಂದು ಕಾಣಿಸು ವರಲ್ಲದೆ, ತರಂಗೋಪತರಂಗವಾಗಿ ಎದ್ದು ಹೃದಯವನ್ನು ವಿಕ್ಷೋಭ ಮಾಡುವ ಆಶೋತ್ತರಗಳಿಗೆ ಎದೆಯಲ್ಲಿ ಅವಕಾಶವನ್ನಿತ್ತವರು ಯೆಂದು ಯಾರಿಗೂ ಕಾಣಿಸುತ್ತಿರಲಿಲ್ಲ. ಸುತ್ತುಮುತ್ತಿನ ಗಾಳಿಗೂ ತಂಪನ್ನು ಸಾಲ ಕೊಟ್ಟು ತಾನು ಹರಿಯುವ ಪ್ರದೇಶಕ್ಕೆಲ್ಲ ಸೌಖ್ಯವನ್ನು ಒದಗಿಸುವ ತರಂಗಿಣಿಗೂ ಅಂತರ್ದಾಹ ಹುಟ್ಟುವುದೆಂದು ಯಾರ ಮನಸ್ಸಿಗೆ ಬಂದೀತು?

ಭಟ್ಟರ ಮನಸ್ಸು ವಿಹ್ವಲವಾಯ್ತು. ಸ್ವಾಭಾವಿಕವಾದ ಶಾಂತಿಯು ಳಿಳಿಯಿತು; ಶಾಸ್ತ್ರಾಭ್ಯಾಸಬಲಗಳಿಂದ ಧೃಢಮೂಲವಾಗಿದ್ದ, ಸ್ಥಿತಪ್ರಜ್ಞ

ನಂತೆ ಕಾಣುತ್ತಿದ್ದ ಸಮಭಾವವು ತಿರೋಹಿತವಾಗಿ, ಬಿರುಗಾಳಿಗೆ ಸಿಕ್ಕಿದ ಕಡಲಿನಂತೆ ಹೃದಯವು ಮೊರೆಯಹತ್ತಿತು

ಸೋಲಿಸಬೇಕೆಂದು ದೈವವೇ ಮನಸ್ಸು ಮಾಡಿರುವಾಗ ಆಗುವಂತೆ ಪ್ರತಿಕ್ರಿಯೆಗಳು ಯಾವುದೂ ಅವರ ಮನಸ್ಸಿಗೆ ತೋರದಾದುವು. ಒತ್ತುತ್ತಿರುವ ಆಶೆಗೆ ಎಡೆ ಕೊಟ್ಟೂ ಕೊಟ್ಟೂ ಶ್ರಾಂತವಾಗಿ, ಮನಸ್ಸು ನಿರೋಧಕ್ರಿಯೆಗಳನ್ನು ಚಿಂತಿಸಲು ಅಕ್ಷಮವಾಯಿತು. ಒಮ್ಮೊಮ್ಮೆ ವಿವೇಕವು ತಲೆದೋರುವುದು. ಆದರೆ, ಅದು ಜಂಝೂವಾತವಪ್ಪಟ್ಟ ದೀಪವಂತೆ ಆಗಲೇ ಆಳಿಸಿಹೋಗುವುದು.

ಭಟ್ಟರು ಒಮ್ಮೊಮ್ಮೆ ಸಾಕ್ಷಿಯಂತೆ ಕುಳಿತು ತಮ್ಮ ಅನುಭವವನ್ನು ತಾವೇ ಒರೆಗಿಟ್ಟು "ಇದೇನು ನನಗೀ ಕಾಮವಾಸನೆ?" ಎಂದು ತಿರಸ್ಕರಿ[illegible]ರು; ಇನ್ನೊಮ್ಮೆ "ಹೌದು; ಅಷ್ಟಲ್ಲದೆ ಹೇಳಿದನೆ? ಮಮ ಮಾಯಾ ದುರತ್ಯಯಾ ಎಂದು" ಎಂದು ಸಮಾಧಾನವನ್ನು ಹೇಳಿಕೊಳ್ಳುವರು ಹಾಗೆ ಹೀಗೆ ಅಲೆಯುತ್ತಾ ತೊಳಲುತ್ತ ಬಳಲುತ್ತ ಕೊನೆಗೆ "ಹಾಗೆಂದು ಸುಮ್ಮನಿದ್ದರೆ, ನಮ್ಮ ಪೌರುಷವೇನಾದಹಾಗಾಯಿತು? ಅಂತರಂಗದ ಯುದ್ಧದಲ್ಲಿ ಗಣಿಸಬೇಕಾದುದು ಸೋಲುಗೆಲುಗಳು ಅಲ್ಲ. ಮಾಡಿದ ಪ್ರಯತ್ನ ವೆಂತಹುದು? ಎಷ್ಟು? ಎಂಬುದು. ಆದರಿಂದ ಈ ಹುಚ್ಚು ಹೊಳೆಯನ್ನು ಅಡ್ಡಗಿಸಲು ಇನ್ನೇನೂ ಸಾಧನವಿಲ್ಲದಿದ್ದರೂ ಹೊಗಲಿ ತೋಳಸನ್ನಾದರೂ ಅಡ್ಡವಾಗಿರಿಸಬೇಕು. ಹಾಗಿಲ್ಲದೆ ವೃತ್ತಿಯನ್ನು ಅಂದರೆ ಪ್ರಪಂಚದ ಮುಖವಾಗಿ ಹೋಗುವ ಮನಸ್ಸಿನ ಲಹರಿಯನ್ನು ಹಾಗೆಯೇ ಹರಿಯಬಿಟ್ಟರೆ ಅದು ಕೊನೆಗೆ ವಿವೇಕವನ್ನು ಕೊಂದೇಬಿಡುವುದು ವೃತ್ತಿಯನ್ನು ಅಡ್ಡಗಿಸಿದ ಹಾಗೆಲ್ಲ ವಿವೇಕವು ಬಲಿಯುವುದು. ಆದರಿಂದ ವಿಷಯದ ಯೋಚನೆಯು ಎಷ್ಟು ಬಲವಾಗಿದ್ದರೂ ಆ ವಿಷಯದಲ್ಲಿ ದೇಹೇಂದ್ರಿಯ ವ್ಯಾಪಾರಗಳು ಮಾತ್ರ ನಡೆಯುವುದಕ್ಕೆ ಅವಕಾಶ ಕೊಡಕೂಡದು" ಎಂದು ಇತ್ಯರ್ಥವಾಗಿ ಹೋಯ್ತು.

ಭಟ್ಟರೀಗ ನಗುವಿನ ಮೂರ್ತಿ. ಒಳಗೆ ಕೊಳೆತು ಮೆತ್ತಗಾದ ಕಾಯಿ ಇದರೂ ಮೇಲೆ ಮಾತ್ರ ಕಠಿಣತರವಾದ ಚಿಪ್ಪು ಇರುವ ತೆಂಗಿನ

ಕಾಯಂತೆ ನೋಡುವವರ ಕಣ್ಣಿಗೆ ಭಟ್ಟರ ಶಾಂತಿಯು ಅವತಾರ. ಅವರು ಮೊದಲಿನಷ್ಟು ಧಾರಾಳವಾಗಿ, ಹೆಚ್ಚಾಗಿ ಮಾತೂ ಆಡುವುದಿಲ್ಲ ಈಗ ಆಡುವುದು ಒಂದೆರಡು ಮಾತು. ಅದೂ ಅತ್ಯವಶ್ಯಕವಾದರೆ ಭಟ್ಟರಿಗೆ ಹುಟ್ಟುಗುಣವಾದ ಶಾಂತಿಯು ಹೋಗಿ, ಕಟ್ಟುಬಣ್ಣದ ಪ್ರಯತ್ನ ಪುರಸ್ಸರ ವಾದ ಶಾಂತಿಯು ಹುಟ್ಟಿತು. ಒಳಗೆ ಹೃದಯವು ಅನ್ನದ ತಪ್ಪಲೆಯಂತೆ ಕುದಿಯುತ್ತಿದ್ದರೂ, ಮೇಲೆ ಮಾತ್ರ, ಆಲ್ಪಗದ ಅಲ್ಲಾಡದ ಮಹಾಮೇರು ವಿನಂತಹ ಸ್ಥೈರ್ಯ. ನಟನು ನಗಲಿ, ಅಳಲಿ, ತಾನು ಮಾತ್ರ ಅದನ್ನು ಆನಂದವಾಗಿಯೇ ಕಾಣುವ ರಸಿಕನಾದ ಪ್ರೇಕ್ಷಕನಂತೆ, ಭಟ್ಟರು ಅಂತ ರಂಗದ ವಿಕ್ಷೋಭಗಳಿಗೆಲ್ಲ ಒಂದೇ ಒಂದು ಬಣ್ಣವನ್ನು ಕೊಟ್ಟುಬಿಡುತ್ತಿ ದ್ದರು. ಹೃದಯದ ಕನ್ನಡಿಯಾಗಿರುವ ಮುಖವು, ಬೇರೆ ಬೇರೆ ಭಾವಗ ಳನ್ನು ತೋರಿಸುವುದಕ್ಕೆ ಬದಲಾಗಿ, ಒಂದೇ ಒಂದು ಸಣ್ಣ ನಗೆಯನ್ನೇ ಮೊದಲಿಂದ ಕೊನೆಯವರೆಗೂ ತೋರಿಸುವುದು. ಭಟ್ಟರು ಸ್ವಬಲದಿಂದ, ಇತರರನ್ನು ಕಿರಿಗುಟ್ಟಿಸುವ ಎದೆಯುಳಲನ್ನು ತಮ್ಮನ್ನು ನಗಿಸುವ ರಾಗವ ನ್ನಾಗಿ ಮಾಡಿದರು.

ಲೋಕವು ಅದನ್ನು ಅರಿಯದು ಇಳಿದು, ಮುಳುಗಿ, ಆಳವನ್ನರಿತ ನಲಿಯುವ ಅಭ್ಯಾಸವಿಲ್ಲದ ಜಗತ್ತು, ಮುಟ್ಟಿ ಮುಟ್ಟಿ ಮುಂದೋಡುವ ಈ ಪ್ರಪಂಚವು, ಹೊರಗಿನ ನಗೆಯನ್ನು ಮಾತ್ರ ಕಾಣಬಲ್ಲುದಾಗಿ, "ಭಟ್ಟರು ಸುಬ್ರಹ್ಮಣ್ಯಕ್ಕೆ ಹೋಗಿ ಬಂದುದೇ ಬದಲಾಯಿಸಿ ಬಿಟ್ಟರು. ಶುದ್ಧವಾಗಿ ಅಂತರ್ಮುಖಿಗಳಾಗಿ ಹೋದರು" ಎನ್ನುವುದು. ಭಟ್ಟರೂ ಅದನ್ನು ಕೇಳಿ ದರು. ಆಗ ಮಾತ್ರ ಅವರಿಗೆ ಕಣ್ಣಲ್ಲಿ ನೀರು ಬಂತು.

# ಇಪ್ಪತ್ತೊಂದನೆಯ ಪರಿಚ್ಛೇದ



ಮುಟ್ಟಿದುದನ್ನೆಲ್ಲ ಚಿನ್ನವನ್ನಾಗಿ ಮಾಡುವ ಸ್ಪರ್ಶವೆಂಬ ಜಾತಿಯ ಶಿಲೆಯೊಂದುಂಟಂತೆ. ವೇದದಲ್ಲಿ ಹೇಳಿರುವ ಸೋಮದಂತೆ, ಕಥೆಗಳಲ್ಲಿ ಹೇಳುವ ಎರಡುತಲೆಯ ಗಂಡಭೇರುಂಡದಂತೆ, ಅದೂ ಒಂದು ಕಟ್ಟು ಕಥೆಯೆಂದರೂ ತಪ್ಪಿಲ್ಲ; ಕಂಡುದನ್ನೇ ನಂಬುವುದು ಕಷ್ಟವಾಗಿರುವ ಕಾಲದಲ್ಲಿ, ಕಾಣದುದನ್ನು ನಂಬುವುದಾದರೂ ಹೇಗೆ? ಆದರೆ, ಸ್ಪರ್ಶವುಂಟೋ ಇಲ್ಲವೋ ಸ್ಪರ್ಶವು ಮಾಡುವ ಕೆಲಸವು ಮಾತ್ರ ಉಂಟು ಎಂದು ಒಪ್ಪಿಕೊಳ್ಳಬೇಕು. ಇಲ್ಲವಾದರೆ, ಭಟ್ಟರ ಅಂತರಂಗವು ಅಷ್ಟು ಕಲುಷಿತವಾಗಿದ್ದುದು ಅಷ್ಟು ಕ್ಷತವಿಕ್ಷತವಾಗಿ ಹೋಗಿದ್ದುದು, ಮತ್ತೆ ತಿಳಿಯುತ್ತಿತ್ತೆ? ಮತ್ತೆ ಉಪಹಿತವಾಗುತ್ತಿತ್ತೆ? ಅವರ ಮನಸ್ಸು ನೀರವಾಗುತ್ತ ಬಂತು. ಆದರೆ ಅದು ಹುಟ್ಟಿದ ವೃತ್ತಿಯು ಅಳಿಸಿಹೋದುದರಿಂದ ಆದುದೋ ಅಥವಾ ಕವಿಯೊಬ್ಬನು ಹೇಳುವಂತೆ, "ಸ್ವಾಂತದಲ್ಲಿ ನಿದ್ದೆಗೈಯುತ್ತಿತೋ?" ಅದನ್ನು ಮಾತ್ರ, ಹೇಳಲು ಸಾಧ್ಯವಿಲ್ಲ. ಶಕುನ, ಶಾಸ್ತ್ರವನ್ನು ನಂಬುವ ವರ್ಗದಲ್ಲಿ ಸೇರಿದವರು ಮಾತ್ರ, ಆಗಾಗ ತಪ್ಪಿಸಿಕೊಳ್ಳುವ ಒಂದೆರಡು ನಿಟ್ಟುಸಿರುಗಳಿಂದ; ಏಕಾಂತದಲ್ಲಿ, ಇನ್ನೊಬ್ಬರು ಕಂಡಾರೆಂಬ ಭೀತಿಯೂ ತಲೆದೋರದ ವೇಳೆಯಲ್ಲಿ, ಮತ್ತೊಂದು ಕೆಲಸದ ಆತಂಕವಿಲ್ಲದ ಸಮಯದಲ್ಲಿ, ಉದುರುವ ಎರಡು ತೊಟ್ಟು ಕಣ್ಣು ನೀರಿಂದ; ಅಳೆದು ನೋಡಿ, ಗುರ್ತು ಹಚ್ಚುವುದಾದರೆ, "ಈ ಹುತ್ತದಲ್ಲಿ ಘೋರಸರ್ಪವು ಅಡಗಿರಬೇಕು" ಎಂದಾರು. ಹೆಂಡತಿಯು ತವರು ಮನೆಗೆ ಹೋಗಿ, ಒಂದು ತಿಂಗಳಾಗಿದ್ದರೂ, ಆಕೆಯಿಂದ ಒಂದೆರಡು ಕಾಗದಗಳು ಬಂದಿದ್ದರೂ, ಆಕೆಯು ನೊಂದುಕೊಳ್ಳುವಳೆಂದು ತಿಳಿದಿದ್ದರೂ, ಆಕೆಗೆ ಒಂದು ಕಾಗದವನ್ನೂ ಬರೆಯದೆ ಇರುವುದನ್ನು ತಿಳಿದವರು ಯಾರಾದರೂ ಇದ್ದರೆ, ಅವರು ಸಂಸ್ಕೃತವನ್ನಾಶ್ರಯಿಸಿ "ಭಟ್ಟರು ಅನ್ಯಸಂಕ್ರಾಂತಚಿತ್ತರು" ಎಂದು ಹೇಳಬಹುದಾಗಿತ್ತು. "ಇನ್ನೊಬ್ಬಳಲ್ಲಿ ಆಶೆಯಿಟ್ಟುಕೊಂಡಿದ್ದಾರೆ" ಎಂದು

ಕನ್ನಡದಲ್ಲಿ ಹೇಳಿ ಭಟ್ಟರಿಗೆ ಅಪಮಾನ ಮಾಡಬಾರದೆಂದು ಸಂಸ್ಕೃತ. ಬಯ್ದಾಡಿಕೊಂಡರೂ, ಮೇಲಿನ ಅಂತಸ್ತು ಬಿಟ್ಟು ಕೆಳಗಿಳಿದು ಬೀದಿಗೆ ಹೋಗಬಾರದು.

ಭಟ್ಟರ ಕಾರ್ಯಕಲಾಪಗಳು ನಂಜನಗೂಡಿನ ದೊಡ್ಡತೇರಿನಂತೆ, (ಹಿಂದಿನದು ಈಗಿನದಲ್ಲ.) ಅಂತೂ ಇಂತೂ ಪ್ರಯತ್ನ ಬಲದಿಂದ ನಡೆಯುತ್ತಿವೆ. ಆದರೇನು? ಶಿಸ್ತಿನಿಂದ ಸರಳವಾಗಿ ನಡೆಯುತ್ತಿದ್ದುದನ್ನು ಕಂಡು, ಅದರ ರುಚಿಯನ್ನರಿತಿದ್ದ ಮನಸ್ಸು, ಆ ಸ್ಥಿತಿಯನ್ನು ಕಂಡು ಒಪ್ಪದು. ಆದರೆ ಒಳಗಿನ ಹೊಯ್ದಾಟದಲ್ಲಿ ದಣಿದ ಮನಸ್ಸು ಹೊರಗಿನ ಕೆಲಸಕ್ಕೆ ಅಷ್ಟು ಗಮನಕೊಡಲಾರದು. ಅಂತೂ ನಡೆಯುತ್ತಿತ್ತು.

ಹೀಗೆಯೇ ಅಷ್ಟು ದಿನಗಳು ಕಳೆಯಿತು. ಅತ್ತ ಪಾತಮ್ಮನವರು ಯಜಮಾನರಿಂದ ಕಾಗದ ಬರಲಿಲ್ಲವೆಂದು ಕೊರಗಿ ಸೊರಗುವಷ್ಟು ಆಯ್ತು. ಕೊನೆಗೆ ಅವರಿಂದ ಒಂದು ಕಾಗದವು ಬಂತು ಅದರಲ್ಲಿ ಯೋಗಕ್ಷೇಮ ವಿಚಾರವು ಬರೆದಿದೆ. ಮನೆಯ ಕಡೆ ಎಲ್ಲವೂ ಸಮರ್ಪಕವಾಗಿದೆ ಯೆಂದು ಬರೆದಿದೆ ಆದರೂ, ಸೂಕ್ಷ್ಮವಾದ ತಕ್ಕಡಿಯ ಮುಳ್ಳು ಸ್ವಲ್ಪವಾದರೂ ವ್ಯತ್ಯಾಸವನ್ನು ಸಹಿಸದೆ ಅಲ್ಲಾಡಿಬಿಡುವಂತೆ, ಆಕೆಯ ಮನಸ್ಸು, ಆ ಕಾಗದದಲ್ಲಿ ಏನೋ ಇಲ್ಲವೆಂದು, ಕೊಂಚ ಒದ್ದಾಡಿತು. ಆಕೆಗೆ "ಆದಷ್ಟು ಬೇಗ ಮನೆಗೆ ಹೊರಟುಹೋದರೆ ಒಳ್ಳೆಯದು. ಇಲ್ಲವಿದ್ದರೆ ಏನೋ ಕೆಡಕಾಗುವುದು" ಎಂದು ಅಂಜಿಕೆಯಾಯ್ತು. ಆದರೆ ತಾಯಿಗೆ ಇನ್ನೂ ಗುಣವಾಗಿಲ್ಲ. ಹೊರಡುವುದು ಹೇಗೆ? ಅದಕ್ಕಾಗಿ, ಒಂದು ಉದ್ದವಾದ ಕಾಗದವನ್ನು ಬರೆದರು. "ಕಾಣಬೇಕೆಂಬ ಆಶೆಯು ಬಲವಾಗಿದೆ ಮಕ್ಕಳೆಲ್ಲ ಜರಿದುಕೊಂಡಿದ್ದಾರೆ. ಮಾತೃಶ್ರೀಯವರ ಸದ್ಯದ ಸ್ಥಿತಿಯಲ್ಲಿ ನಾನು ಬರಲು ಸಾಧ್ಯವಿಲ್ಲ. ತಾವಾದರೂ ಒಂದುಸಲ ಬಂದು ದರ್ಶನಕೊಟ್ಟು ಹೋಗಬಾರದೆ?" ಎಂಬುದು ಕಾಗದದ ಅಭಿಪ್ರಾಯ

ಕಾಗದವನ್ನು ಕಂಡು, ಅವರ ಮನಸ್ಸು ಚಂಚಲವಾಯ್ತು. ತುಂಬಿರುವ ಮದ್ದಿನಮನೆಗೆ ಅಕಸ್ಮಾತ್ತು ಬೆಂಕಿಯ ಕಿಡಿಯು ಬಿದ್ದು, ತಟ್ಟನೆ ಆಗ.

ಪುರುಷನ ಆವಿರ್ಭಾವವಾಗುವಂತೆ, ಹೆಂಡತಿಯ ಕರುಣಾಕ್ರಂದನದ ಕಾಗದ ವನ್ನು ಕಂಡು, ಅವರ ಚಿತ್ತವು, ಭಟ್ಟರು ಪ್ರಯತ್ನಪುರಸ್ಸರವಾಗಿ ತನ್ನ ಮೇಲೆ ಹೊರಿಸಿದ್ದ ಸಂಯಮದ ಕಟ್ಟನ್ನು ತಟ್ಟನೆ ಕಿತ್ತೊಗೆದು ಸ್ವತಂತ್ರ ವಾಗಿ ಕಪಿಯಂತೆ ಕುಣಿಯಲಾರಂಭಿಸಿತು. "ಹೋಗಿ ಅವಳನ್ನು ಒಂದು ವೇಳೆ ನೋಡಿಕೊಂಡು ಬರುವುದೇ ಸರಿ" ಎಂದು ಒಂದುಸಲ ಎನ್ನಿಸಿತು. ಇನ್ನೊಮ್ಮೆ ಏಕೋ ಉದಾಸೀನತೆ ಬೇಡ; ಬೆಳದಿಂಗಳೂಟವನ್ನು ಮಾಡ ಬೇಕೆಂದಿರುವವರು ಹಗಲನ್ನು ಕಂಡು ದ್ವೇಷವಾಡದಿದ್ದರೂ, ಏನು ಹಗಲೋ ಎಂದುಕೊಳ್ಳುವಂತೆ; ಭಟ್ಟರು ಪತ್ನಿಯ ವಿಷಯದಲ್ಲಿ ಒಂದು ರೀತಿಯಾಗಿದ್ದಾರೆ.

ಮನಸ್ಸನ್ನು ಕೆಣಕುವುದಕ್ಕೆ ಒಂದು ಸಾಧನವು ಸಿಕ್ಕಿದರೆ ಸಾಕು. ಅದು ಹೇಗೆ ಹೇಗೋ ಎಳೆದುಕೊಂಡುಹೋಗಿ, ತಾನು ಮೊದಲು ಯೋಚಿಸಿ ಯಿಟ್ಟುಕೊಂಡಿದ್ದ ವಿಷಯಕ್ಕೇ ಹೊತ್ತುಕೊಂಡುಹೋಗಿ ನಿಲ್ಲಿಸುವುದು. ನಾವೆಷ್ಟೇ ಜಾಗರೂಕರಾಗಿರಲಿ, ಮನಸ್ಸು ನಮ್ಮ ಅಧೀನದಲ್ಲಿ ಇದ್ದಂತೆಯೇ ಇದ್ದೂ ಇದ್ದೂ ಎಲ್ಲಿಗೋ ಎದ್ದುಬಿಡುವುದು. ನಾವು ಅದಕ್ಕೆ ಹೇಳುವ ಕೆಲಸವೇ ಬೇರೆ; ಅದು ಮಾಡುವ ಕೆಲಸವೇ ಬೇರೆ. ಹಾಗಿಲ್ಲದೆ ಹೋಗಿ ದ್ದರೆ, ಭಟ್ಟರ ಮನಸ್ಸು ಕಾಗದವನ್ನು ಬರೆದು ತನ್ನ ಶಾಂತಿಯನ್ನು ಭಂಗ ಪಡಿಸಿದ ಪಾತಮ್ಮನವರಕಡೆಗೆ ಹೋಗದೆ, ಸಂಬಂಧವಿಲ್ಲದ ಆ ಬಸವಿಯ ಕಡೆಗೇತಕ್ಕೆ ಹೋಗಬೇಕು? ಬಹುದಿವಸದ ಪರಿಚಯವು ಪಕ್ವವಾಗಿ ಸ್ನೇಹ ವಾಗಿ ಅಂತರಂಗಗಳು ಬೆಸುಗೆಬಿದ್ದು ಒಂದಾಗಿರಬೇಕಾಗಿದ್ದ ಆಕೆಯನ್ನು ತೊರೆದು, ರೂಪವತಿಯಾದರೂ ಮೋಹಲೀಲೆಗಳ ಗಂಧವನ್ನೇ ಅರಿಯದ ಹಳ್ಳಿಯ ಹುಡುಗಿಯ ಕಡೆಗೆ ಓಡಬೇಕೇತಕ್ಕೆ?

ಅಂತೂ ಭಟ್ಟರ ಚಿತ್ತವು ಮತ್ತೆ ಬಸವಿಯ ಚಿಂತೆಗೆ ಎಡೆಗೊಟ್ಟಿತು. ಎಳೆದುಬಿಟ್ಟ ರಬ್ಬರು ರಭಸವಾಗಿ ಹಿಂತಿರುಗಿಬಂದು ಹೊಡೆಯುವಂತೆ, ಬೇಡ ವೆಂದು ನೂಕಿದ್ದ ಆ ಯೋಚನೆಗಳೆಲ್ಲವೂ ಮತ್ತೆ ಅಂತರಂಗದಲ್ಲಿ ಎದ್ದು ನರ್ತಿಸಲಾರಂಭಿಸಿದವು ಏಕಾಂಗಿಗಳಾಗಿ ಹೋಗುತ್ತಿರುವಾಗ ಭಾವದಲ್ಲಿ ಅವಳ ವಿಷಯವು ಹುಟ್ಟಿ, ಜೊತೆಯಲ್ಲಿ ಯಾರೋ ಹೋಗುತ್ತಿದ್ದಹಾಗೆ

ಮನಸ್ಸಿಗೆ ಅರಿವಾಗುವುದು; ಕೂಡಲೆ ಭಟ್ಟರು ಗಾಬರಿಯಾಗಿ ಅತ್ತಿತ್ತ ತಿರುಗಿನೋಡಲು, ಆ ಮನಸ್ಸು ತನಗೆ ಬೇಕಾದ ವಸ್ತುವು ಇಲ್ಲವೆಂದು ಕೊಂಡು, ನಿರಾಶೆಯಿಂದ ಹಿಂತಿರುಗುವುದು. ಇನ್ನೊಮ್ಮೆ ಯಾವುದೋ ವಿಚಾರವಾಗಿ ಯೇನೋ ಯೋಚಿಸುತ್ತ ಕುಳಿತಿರುವಾಗ, ಅವಳಾಡಿದ ಮಾತು ಗಳು ಕೇಳಿಸಿದಂತಾಗಿ, ಭಟ್ಟರು ತಟ್ಟನೆ ಹಿಂತಿರುಗಿನೋಡುವರು. ಜಪ ಕ್ಕೆಂದು ಕಣ್ಣುಮುಚ್ಚಿ ಕುಳಿತಿದ್ದರೆ, ಚಿತ್ತವು ಅವಳ ಪ್ರತಿಮೆಯನ್ನು ಮುಚ್ಚಿದ ಕಣ್ಣೆದುರಿಗೆ ತಂದು ನಿಲ್ಲಿಸುವುದು. ಆಗಮಾತ್ರ ಭಟ್ಟರು ಬಹು ಸಂಕಟಪಡುವರು. ಪ್ರಾರಬ್ಧವನ್ನು ಕುರಿತು ಚಿಂತಿಸಿ, ತಮ್ಮ ಅಸಾಮರ್ಥ್ಯ ವನ್ನು ಹಳಿದುಕೊಳ್ಳುವರು. “ ಇಷ್ಟುದಿನ ಮಾಡಿದ ಜಪ, ಪೂಜೆ, ನಿಷ್ಠೆ, ಎಲ್ಲವೂ ಬೂದಿಯಲ್ಲ ಹೋಮಮಾಡಿದಂತಾಯ್ತು. ಇನ್ನು ನಾನು ಬದುಕಿ ದ್ದರೇನು? ಸತ್ತರೇನು? ” ಎಂಬ ವ್ಯಥೆಯು ಅವರನ್ನು ಆಗ ಬಹಳ ಪೀಡಿಸುವುದು.

ಇಷ್ಟಾದರೂ, ತಮ್ಮನ್ನು ತಾವೇ ಹಳಿದುಕೊಳ್ಳುವಂತಹ ವಿಷಮ ಸಂಕಟವು ಪ್ರಾಪ್ತವಾಗಿದ್ದರೂ, ಅವಳ ನೆನೆಹು ಮಾತ್ರ ಏನೋ ಸುಖಕರ ವಾಗಿರುವುದು. ಅದರಲ್ಲಿ ಒಂದು ರುಚಿಯನ್ನು ಕಂಡ ಮನಸ್ಸು, ಅವರು ಬೇಡಬೇಡವೆಂದರೂ, ಬಿಡದೆ ಅದನ್ನೇ ಧ್ಯಾನಿಸುವುದು. ಆ ವೃತ್ತಿಯನ್ನು ಮುರಿಯಬೇಕೆಂದು ಭಟ್ಟರು ಎಷ್ಟೋ ಪ್ರಯತ್ನಮಾಡುವರು. ಆದರೆ ಅವರು ಮಾಡಿದ ಯತ್ನವೆಲ್ಲವೂ, ಆ ಚಿತ್ತವೃತ್ತಿಗೆ ಗೊಬ್ಬರಹಾಕಿದಂತಾಗಿ ಅದು ಬಲಿಯುತ್ತಲೇ ಹೋಯ್ತು. ಮೊಂಡಹುಡುಗರನ್ನು ಅಂಜಿಸಿದರೆ ಅವರು ತಮ್ಮ ಮೊಂಡುತನವನ್ನು ಇನ್ನೂ ಹೆಚ್ಚುಮಾಡುವಂತೆ ಆಯ್ತು.

ಭಟ್ಟರು ಇಂತಹ ಸ್ಥಿತಿಯಲ್ಲಿ ಏನುಮಾಡಬೇಕು ಎಂಬುದನ್ನು ತಿಳಿ ಯದೆ ಹಗಲೂ ಇರುಳೂ ತೊಳಲುತ್ತ ಇದ್ದಾರೆ. ಇಂದ್ರಿಯಗಳಿಗೆ

ಹೋಯಿತು, ವಿಷಯವನ್ನು ಹುಡುಕಿಕೊಂಡು ಹೋಗಿ, ಸರ್ವಸ್ವವನ್ನೂ ಅದ ಕ್ಕೊಪ್ಪಿಸಿ, ಆರಾಧಿಸುವ ಹೀನತನವಿರಲಿ. ತಮ್ಮ ಮನಸ್ಸು ವಿಷಯ ವೊಂದನ್ನು ಕುರಿತು ಧ್ಯಾನಿಸುವುದನ್ನೂ ಒಲ್ಲದವರು ಆ ಭಟ್ಟರು. ಮನಸ್ಸೋ ಅವರು ಹೇಳಿದ ಹಾಗೆ ಕೇಳದು. ಹೀಗೆ ದುಷ್ಟಾಶ್ವಗಳನ್ನು ಕಟ್ಟಿದ ರಥದ ಸಾರಥಿಗೆ ಆಗುವಂತೆ, ವಿವಿಧ ವಿರೋಧ ಭಾವಗಳಲ್ಲಿ ಅಂತ ರಂಗವು ಬಿದ್ದೂ ಎದ್ದೂ ಅವರಿಗೆ ಆಯಾಸವು ಬಹಳವಾಯ್ತು. ರಾತ್ರಿಯಲ್ಲಿ ಕಣ್ಣಿಗೆ ನಿದ್ದೆಯಿಲ್ಲ. ಹಗಲಲ್ಲಿ ಕೆಲಸಮಾಡುವ ಚಟುವಟಿಕೆಯಿಲ್ಲ. ಹೀಗಾಯ್ತು.

ಒಂದು ದಿನ ರಾತ್ರಿಯಂತೂ ಅವರಿಗೆ ಬಹು ವಿಚಿತ್ರವಾದ ಅನುಭವ ವಾಯ್ತು. ಎದ್ದು ಕುಳಿತಿದ್ದರಂತೂ ಯೋಚನೆ. ಅದು ಎಂದಿನಂತೆ. ಹಾಗೂ ಹೀಗೂ ಮಾಡಿ, ನಿದ್ದೆ ಮಾಡಬೇಕೆಂದು ಮಲಗಿಕೊಂಡರೆ, ಅತಿ ಪ್ರಯತ್ನದ ಫಲವಾಗಿ, ಕಣ್ಣು ಮುಚ್ಚಿಕೊಂಡರೆ, ಆಗಲೇ ಯಾರೋ ಮನೆಗೆ ಬಂದಿರುವಂತೆಯೂ, ಅವರಿಗೆ ತಾವು ಉಪಚಾರಮಾಡಲು ಹವ ಣಿಸಿಕೊಂಡು ಓಡಾಡುತ್ತಿರುವಂತೆಯೂ, ಒಂದು ಕನಸು. ಅಷ್ಟರಲ್ಲಿ ಜಾಗ್ರತ್ಪ್ರಪಂಚದಲ್ಲಿ ಯಾರೋ ಒಮ್ಮೆ ಕೂಗಿದ ಹಾಗೆ ಆಗಿ, ಕನಸು ಮುರಿಯುವುದು. ಅವಸರವಸರವಾಗಿ ಎದ್ದು ನೋಡಿದರೆ, ಎಲ್ಲೂ ಯಾರದೂ ಶಬ್ದವೇ, ಸುಳಿವೇ ಇಲ್ಲ.

ಹೀಗೆ ಕೆಲವು ಸರ್ತಿಯಾಯ್ತು. ಒಂದು ಸಲವಂತೂ, ಕನಸಿನಲ್ಲಿ ಕೇಳಿದ ಕೂಗಿನ ಭ್ರಾಂತಿಯು ಜಾಗ್ರತ್ತಿನಲ್ಲಿಯೂ ಬಲವಾಗಿಯೇ ಇದ್ದು ಅವರು ಎದ್ದು ಹೋಗಿ ಬಾಗಿಲನ್ನು ಕೂಡ ತೆಗೆದು ನೋಡುವಷ್ಟಾಯ್ತು. ಬಾಗಿಲಲ್ಲಿ ಯಾರೂ ಇರಲಿಲ್ಲ. ಅಲ್ಲಿ ಕುಳಿತಿದ್ದ ಬೆಕ್ಕುವೊಂದು ಇವರು ಬಾಗಿಲು ತೆಗೆದ ಸದ್ದು ಕೇಳಿ ಓಡಿಹೋಯ್ತು.

ಅಂತೂ ಇಂತೂ ರಾತ್ರಿಯೆಲ್ಲ ಈ ಕಣ್ಣಾಮುಚ್ಚಾಲೆಯಲ್ಲಿ ಕಳೆಯಿತು. ಬೆಳಗಾಗ ಪೂಜ್ರರವಳು ಬಂದು ಬಾಗಿಲಿಗೆ ಹಲವುಸಾರಿ ಕೂಗಿದಳು. ಬಾಗಿಲು ತೆರೆಯಲಿಲ್ಲ. ಅವಳೂ ಆಶ್ಚರ್ಯಪಟ್ಟುಕೊಂಡು ಇನ್ನೆರಡುಸಲ ಗಟ್ಟಿಯಾಗಿ ಕೂಗಿದಳು. ಬಾಗಿಲು ತೆರೆಯಿತು. ಅವಳು ಒಳಕ್ಕೆ ಬಂದು, "ಅವ್ವ್ಯಾರೊ ಬಂದವ್ರೆ ಬುದ್ಧೀ!" ಎಂದಳು.

ಭಟ್ಟರಿಗೆ ಆ ಮಾತುಕೇಳಿ ಎದೆಯು ಡವಡವ ಎಂದಿತು; ಸತ್ಯವಂತನಾದರೂ ಹಣವಿಲ್ಲದೆ ಬಡವನಾದವನು ಸಾಲಗಾರನು ಬಂದಿದ್ದಾನೆಯೆಂದರೆ ಹೆದರುವಂತೆ ಹೆದರಿದರು; ಹೊರಗೆಹೋಗಿ ನೋಡಿದರು ಬಂದಿರುವವಳು ಬಸವಿ.

---

# ಇಪ್ಪತ್ತೆರಡನೆಯ ಪರಿಚ್ಛೇದ.

---

ಅವರಿಗೆ ಅವಳನ್ನು ಕಂಡು ಸಂತೋಷವಿಷಾದಗಳೆರಡೂ ಏಕಕಾಲ ದಲ್ಲಿ ಮೂಡಿದುವು. ಬಂದವಳನ್ನು ಆಲಿಂಗಿಸಿ ಸೋಪಚಾರವಾಗಿ ಮನೆಯಲ್ಲಿ ಕುಳ್ಳಿರಿಸಿ ಕುಶಲಪ್ರಶ್ನೆಮಾಡಬೇಕೆಂದು ಒಂದು ಮನಸ್ಸು. "ಅಯ್ಯೊ ಇವಳು ಬಂದೇಬಿಟ್ಟಳಲ್ಲ! ಇನ್ನು ನೋಡಿದವರು ಏನೆನ್ನುವರೋ?" ಎಂದು ಲೋಕವನ್ನು ಕಂಡಂಜಿದ ಇನ್ನೊಂದು ಮನಸ್ಸು. ಹೀಗೆ, ಆ ಎರಡು ಮನಸ್ಸುಗಳೂ ಏಕಕಾಲದಲ್ಲಿ ಕೆಲಸಮಾಡುತ್ತಿರಲು, ಭಟ್ಟರು, ಬಂದವರು ಯಾರೆಂಬುದನ್ನು ಕಂಡಿದ್ದರೂ, ನೇರವಾಗಿ ತಿಳಿದಿದ್ದರೂ, ಇನ್ನೊಮ್ಮೆ ಕಣ್ಣುಹೊಸಕಿಕೊಂಡು ನೋಡಿದರು. ಕಣ್ಣನ್ನು ಹೊಸಕಿಕೊಂಡು ನೋಡಿ ದರೂ ಅದೇ ಒಸಪಿ

ಏನುಮಾಡಬೇಕೆಂಬುವುದನ್ನು ಇತ್ಯರ್ಥಮಾಡುವುದಕ್ಕೆ ಬಹಳ ಹೊತ್ತು ಹಿಡಿಯಲಿಲ್ಲ ಅವಳನ್ನು 'ಒಳಕ್ಕೆ ಬಾ' ಎಂದರು ಅವಳೂ ಒಳಕ್ಕೆ ಹೋದಳು. ಅವಳನ್ನು ಹಿಂಬಾಲಿಸಿ ತಾವೂ ಒಳಕ್ಕೆ ಹೋಗುವಾಗ, ಏಕೋ, "ಬೀದಿಯಲ್ಲಿ ಯಾರುಯಾರು ಇದ್ದಾರೆ?" ಎಂದು ಅತ್ತಿತ್ತ ನೋಡಿ ಒಳಕ್ಕೆ ಹೋದರು.

ಮಾತನಾಡಿಸದಿರುವುದು ಹೇಗೆ? ಮಾತನಾಡಿಸುವುದು ಹೇಗೆ? ಇಷ್ಟುದಿನವೂ ಬೇಕೆಂದೋ ಬೇಡವೆಂದೋ ಅಂತೂ, ಮನಸ್ಸು ಏಕಸವ್ಯ ವಾಗಿ ಆರಾಧಿಸಿದ ದೇವಿ ಇಂದು ಮನೆಗೆ ಬಂದಿದ್ದಾಳೆ. ಏನುಮಾಡಬೇಕು? ಆಕೆಗೆ ಹೇಗೆ ಉಪಚಾರಮಾಡಬೇಕು? ಅಥವಾ ತನಗೆ ಬೇಕಾದ ವಸ್ತು ವೆಂದು ಉಪಚಾರಮಾಡಿದರೆ, ನೋಡಿದ ಲೋಕವೇನೆಂದುಕೊಂಡೀತು? ಹಾಗೆಂದು ಲೋಕಕ್ಕಂಜಿ, ತನ್ನ ಮನಸ್ಸಿಗೆ ವಿರುದ್ಧವಾಗಿ ನಡೆದು, ಆಗು ತ್ತಿದ್ದ ಸುಖವನ್ನು ನೀಗಿಕೊಂಡು, ಇಲ್ಲದ ದುಃಖವನ್ನೆಂತು ಗಂಟುಕಟ್ಟಿ

ಭಟ್ಟರು ಒಳಕ್ಕೆ ಬಂದಾಗ 'ಶೂದ್ರರವಳು' ಮನೆಯನ್ನು ಗುಡಿಸಲು ಸಾಯುಧಳಾಗಿ ನಿಂತಿದ್ದಳು. ಭಟ್ಟರಿಗೆ, ಇನ್ನೊಬ್ಬ ಹೆಂಗಸು ಕಣ್ಣಿಗೆ ಬಿದ್ದೊಡನೆಯೇ, ಮನಸ್ಸಿನಲ್ಲಿದ್ದ ಮತ್ತೊಬ್ಬ ಸ್ತ್ರೀಯುಳ ಬೋಧೆಯಾಗಿ ಎದೆಯು ನಡುಗಿತು. ಕಡಿದಾದ ಬೆಟ್ಟವನ್ನು ಹತ್ತುತ್ತಿರುವಾಗ, ಹಿಂದಿನಿಂದ ಯಾರಾದರೂ ತಟ್ಟನೆ, "ಜಾರೀತು ! ಎಚ್ಚರಿಕೆ" ಎಂದು ಕೂಗಿದರೆ, ಜಾರದಿದ್ದರೂ ಜಾರಿದಂತಾಗಿ, ಮಗ್ಗುಲಲ್ಲಿದ್ದ ಆಧಾರವನ್ನು ಧೃಢವಾಗಿ ಅವಲಂಬಿಸುವಂತೆ, ಬಂದ ಬಸವಿಯನ್ನು ಕಂಡು ಬೆದರಿದ ಬಗೆಯು "ಅಯ್ಯೊ ! ಅವಳಿದ್ದಿದ್ದರೆ ಚೆನ್ನಾಗಿತ್ತಲ್ಲಾ !" ಎಂದು ಗಾಬರಿಯಿಂದ ಕಾತರಿಸಿತು. ಮತ್ತೆ ಉತ್ತರಕ್ಷಣದಲ್ಲಿಯೇ, ಗಳಿಗೆಗೊಂದು ಬಣ್ಣವಾಗುವ ಓತಿಕ್ಯಾತನಂತೆ, ಬದಲಾಯಿಸಿ, "ಇಲ್ಲ, ಇಲ್ಲ ಅವಳಿದ್ದರೆ, ಏನೇನು ಅನರ್ಥ ನಡೆಯುತ್ತಿತ್ತೋ ? ಅವಳಿಲ್ಲದಿರುವುದೇ ಒಳ್ಳೆಯದಾಯ್ತು" ಎಂದುಕೊಂಡಿತು.

ಭಟ್ಟರು ಹೀಗೆ ಒಳಗೆ ಒಂದು ವಿಧವಾದ ಬೇಗುದಿಯಿದ್ದರೂ, ಹೊರಗಿನ ಲೌಕಿಕವನ್ನು ಬಿಡದೆ ಅವಳನ್ನು ಮಾತನಾಡಿಸಿದರು "ನೀನು ಚೆನ್ನಾಗಿದ್ದೀಯಾ ?" ಎಂದು ಕೇಳಿದರು ; "ನಾಯಕನು ಚೆನ್ನಾಗಿದ್ದಾನೆಯೇ ?" ಎಂದು ವಿಚಾರಿಸಿದರು. ಇನ್ನೂ ಅವರ ವಿಷಯ ಇವರ ವಿಷಯಗಳನ್ನೆಲ್ಲ ಕೇಳುತ್ತ ಬಂದರು. ಬಸವಿಯದು ಮಾತ್ರ ಎಲ್ಲದಕ್ಕೂ ಒಂದೇ ಒಂದು ಉತ್ತರ. ಒಂದೇ ಅಕ್ಷರದ "ಹೂಂ" ; ಎರಡಕ್ಷರದ "ಹೌದು" ಕೂಡ ಇಲ್ಲ. ಹಾಗೂ ಹೀಗೂ ಬೇರೆಬೇರೆ ಮಾತು ಕಥೆಗಳೆಲ್ಲ ಆಡುತ್ತ ಆಡುತ್ತ, ಕೊನೆಗೆ ತಮಗೆ ಬೇಕಾದ ಪ್ರಶ್ನೆಯನ್ನು ಕೇಳಿದರು "ಅದೇನು ? ನೀನು ಬಂದುದು ?"

ಬಸವಿಯು ತಟ್ಟನೆ ಉತ್ತರವನ್ನು ಕೊಡಲಿಲ್ಲ. ಮತ್ತೆಮತ್ತೆ ಕೇಳಿದ ಮೇಲೆ "ಕನಸಾಯ್ತು" ಎಂದಳು. ಬಾಯಲ್ಲಿ ಮಾತು ಮುಂದಕ್ಕೆ ಹೊರಡಲಿಲ್ಲ. ಕಣ್ಣಲ್ಲಿ ನೀರುಬಂದು, ಅವಳು ತಲೆಯನ್ನು ಬಗ್ಗಿಸಿಬಿಟ್ಟ

ಭಟ್ಟರಿಗೆ ಬಹಳ ಸಮಾಧಾನವಾಯಿತು. ಆ ಸಮಾಧಾನದಲ್ಲಿ, ಆ ಸಂತೋಷದಲ್ಲಿಯೂ ಎದೆಯು ಡವಡವ ಎಂದಿತು; ಅವರು ಹಲವು ಸಲ ನೀರು ನುಂಗಿದರು. ಅವರಂತಹ ಸಂಯಮಿಗಳಲ್ಲದಿದ್ದರೆ, ಬಸವಿಯನ್ನು, ಕವಿಯು ಹೇಳುವಂತೆ ' ಜೀವಿತಸರ್ವಸ್ವದಿಂದಲೂ ಆರಾಧಿಸುತ್ತಿದ್ದರು.'' ಆದರೆ ಅವರಿಗೆ ಏನೇನೋ ಅಡಚಣೆಗಳು. ಕೆಲವು ಒಳಗಿನವು ಕೆಲವು ಹೊರಗಿನವು. ಅಂತೂ ಅವರು ಮಾಡಬೇಕೆಂದಿದ್ದುದನ್ನು ಅವರ ಮನಸ್ಸು ಮಾಡಿಬಿಟ್ಟಿತು ಅದಕ್ಕಾಗಿ ಅದಕ್ಕೆ ಬೇಕಾದಷ್ಟು ತಿರಸ್ಕಾರಗಳೂ ಆಯಿತು.

ಇನ್ನು ಬಹಳ ಹೊತ್ತು ಅಲ್ಲಿರುವುದು ಸರಿಯಲ್ಲವೆಂದು ಭಟ್ಟರು, ಶೂದ್ರರವಳನ್ನು ಕರೆದು, ‘‘ ಇವಳನ್ನು ಬಾವಿಯ ಬಳಿಗೆ ಕರೆದುಕೊಂಡು ಹೋಗು '' ಎಂದು ಹೇಳಿ, ತಾವೂ ಸ್ನಾನಕ್ಕೆ ಹೋದರು. ಅವರು ಬೇಕಾದಷ್ಟು ಯತ್ನಿಸಿದರೂ ಸಫಲವಾಗದೆ, ಮನಸ್ಸು ಸ್ವತಂತ್ರವಾಗಿ ಕುಣಿಯ ತೊಡಗಿತು ಅದರ ಮೇಲೆ ದಾಸ್ಯಭಾರವನ್ನು ಹೊರಿಸಬೇಕೆಂದು ಹೆಣಗಿದ ಅವರ ಕಷ್ಟಗಳೆಲ್ಲ ವಿಫಲವಾದುವು

ಶೂದ್ರರವಳಿಗೆ ಬಹಳ ಕುತೂಹಲ ಹೆಂಡತಿಯನ್ನುಳಿದು ಇನ್ನಾವ ಹೆಂಗಸರೊಡನೆಯೂ ಮಾತನ್ನೇ ಆಡದ ಭಟ್ಟರು ಮಾತನಾಡಿಸಿದವಳು ಇವಳು ಯಾರಿರಬಹುದು? ಎಂದು ಕುತೂಹಲ. ಕೇಳಿದರೇನು ? ಬಿಟ್ಟರೇನು ? ಎಂಬ ಸಂಶಯವೇ ಬರಲಿಲ್ಲ. ಬಸವಿಯು ಸ್ನಾನಮಾಡುವ ಯತ್ನದಲ್ಲಿರುವಾಗ ಉಪಾಯವಾಗಿ, ‘‘ ಅಮ್ಮಾ! ನೀನು ಯಾವೂರಮ್ಮಾ''! ಎಂದು ಕೇಳಿದಳು

ಬಸವಿಯು ಉತ್ತರಕೊಡುವುದಕ್ಕೆ ನಿಧಾನಿಸಿ, ಕೊನೆಗೆ, ‘‘ ಶಿವಪುರ. ಇಲ್ಲಿಗೆ ಬಹಳದೂರ. '' ಎಂದಳು.

ಇವಳು ಅದನ್ನು ಯಥಾವತ್ತಾಗಿ ಗ್ರಹಿಸಿ, ‘‘ ನಮ್ಮ ಅಯ್ಯನೋರ್ನ ಕಂಡಿದೆ ?'' ಎಂದು ಇನ್ನೂ ಒಂದು ಪ್ರಶ್ನೆಯನ್ನು ಹಾಕಿದಳು.

ಅವಳು, ಸಾಶಂಕವಾಗಿ, ಸಂಶಯಗೊಂಡವಳಂತೆ, "ಅದೇಕೆ?" ಎಂದು ಕೇಳಿದಳು

ಅದಕ್ಕೆ ಶೂದ್ರರವಳು "ಇನ್ಯಾಕೂ ಇಲ್ಲ ಕಣವ್ವ. ನಮ್ಮ ಅಯ್ಯನೋರು, ಹೆಂಗಸರಕ್ಕೈಲಿ ಮಾತಾಡೋದೆ ಇಲ್ಲ ಅಂಥಾದ್ದರಲ್ಲಿ ನಿನ್ನ ಇಷ್ಟೊತ್ತು ಮಾತನಾಡಿಸಿದರಲ್ಲ ಅಂತ ಕೇಳಿದೆ." ಎಂದಳು.

ಬಸವಿಗೆ ಚೇಳು ಕುಟುಕಿದಂತಾಯ್ತು, ಆ ಮಾತು ಕೇಳಿ, ಬೆಟ್ಟಕ್ಕೆ ಹತ್ತುತ್ತಿದ್ದವರಿಗೆ ಕಾಲುಜಾರಿದಾಗ, ಕೈಗೆ ಏನೂ ಸಿಕ್ಕದಿದ್ದರೆ ಆಗ ವಂತಾಯ್ತು. "ಅಯ್ಯೋ! ನಾನೇಕೆ ಬಂದೆ?" ಎಂದುಕೊಂಡಳು. ಅವಳ ಮನಸ್ಸು ಕಲಿಕಿಹೋಯ್ತು. ಏನೂ ಹೇಳಲಾರದೆ, ಏನೂ ಯೋಚಿಸಲಾರದೆ ಅರೆ ಒದ್ದೆಯ ಸೀರೆಯುನ್ನುಟ್ಟಿದ್ದವಳು ಭಾವಿಯ ಕಟ್ಟೆಯನ್ನು ಒರಗಿಕೊಂಡು ಹಾಗೆಯೇ ನಿಂತುಬಿಟ್ಟಳು.

ಶೂದ್ರರವಳು, ಅಷ್ಟುಹೊತ್ತು ನೋಡಿ, "ಇದ್ಯಾಕವ್ವ? ನೀರು ಮುಳುಗೋಕಿಲ್ಲವಾ?" ಎಂದಳು.

ಬಸವಿಯು, ತನ್ನ ಸ್ಥಿತಿಯನ್ನು ಅರಿತವಳಾಗಿ, "ಇಲ್ಲ ಕಣವ್ವ! ಸೀರೆ ಒಣಗಲೀಂತ ಕಾದಿದ್ನಿ." ಎಂದಳು ಆಡಿದುದು ಸುಳ್ಳೆಂದು ಮನಸ್ಸು ಅರಿಕೆಗೊಟ್ಟಿತು.

ಬಸವಿಯು ಬಂದು ಸುಮಾರು ಒಂದು ವಾರವಾಯ್ತು. ಆದರೂ ಆಚೆಗೇ ಹೋಗಲಿಲ್ಲ ಊರಿನಲ್ಲಿ ನೋಡಬೇಕಾದ ನೋಟಗಳುಂಟು. ಅದನ್ನು ನೋಡಬೇಕೆಂದು ಕೊಳ್ಳಲೂ ಇಲ್ಲ ಬೆಳಗೆದ್ದು ಸ್ನಾನಮಾಡುವಳು. ಅಯ್ಯನವರಿಗಿಂತ ಹೆಚ್ಚಾಗಿ ನಡುಮನೆಯಲ್ಲಿ ಕಣ್ಣುಮುಚ್ಚಿ ಕುಳಿತಿರುವಳು. ಮಧ್ಯಾನ್ಹದ ಒಪ್ಪತ್ತಿನವರೆಗೂ, ಜಪ್ಪಯ್ಯ, ಎಂದರೂ ಏಳಳು. ರಾತ್ರಿಯ ಊಟವಂತೂ ಇಲ್ಲವೇ ಇಲ್ಲ. ಭಟ್ಟರು ಬಲವಂತಮಾಡಿದರು

ಹೊತ್ತು ಹಾಲು ಹಣ್ಣು ಕೂಡ ತೆಗೆದುಕೊಳ್ಳಳು ಶೂದ್ರರವಳಿಗೂ ಅಡುಗೆ ಯವಳಿಗೂ ಅವಳನ್ನು ಕಂಡು ಆಶ್ಚರ್ಯವಾಯ್ತು. ಎಲ್ಲಿಯೋ ಭಟ್ಟರ ಬಳಿ ಯಾವುದೋ ಮಂತ್ರೋಪದೇಶವನ್ನು ತೆಗೆದುಕೊಂಡಿರಬಹುದೆಂದೂ, ಗುರುಪೂಜೆಮಾಡುವುದಕ್ಕೆ ಬಂದಿದ್ದಾಳೆಂದೂ, ಇಬ್ಬರೂ ನಿಶ್ಚಯಿಸಿದರು. ಈ ಎಂಟುದಿನಕ್ಕೆ ಅವಳಿಂದ ಅವರಿಗೆ ತಿಳಿದುದು "ಅವಳ ಹೆಸರು ಗೌರಿ ಅವಳು ಭಟ್ಟರನ್ನು ಕಂಡುದು ಅವಳ ಊರು ಶಿವಪುರದಲ್ಲಿ." ಅಷ್ಟೆ!

ಆದಷ್ಟರಜೊತೆಗೆ ಅವರು ಸ್ವಂತವಾಗಿ ಊಹಿಸಿದ್ದುದು ಇನ್ನಷ್ಟು ಸೇರಿಸಿ ಅಂತೂ ಇಂತೂ ತಾವೆಂದುಕೊಂಡಿದ್ದುದೇ ನಿಶ್ಚಯವೆಂದು ಇನ್ನೊಮ್ಮೆಯೂ ನಿರ್ಧರಿಸಿಕೊಂಡರು ಊರಲ್ಲೆಲ್ಲಾ ಒಳಗೊಳಗೇ ಹಬ್ಬಿತು: "ಭಟ್ಟರು ಯಾರಿಗೋ ಉಪದೇಶಕೊಟ್ಟಿದ್ದಾರೆ ಅವಳು ಬಂದು ಮನೆಯಲ್ಲಿಯೇ ಇದ್ದಾಳೆ. ಚೆಲುವೆ, ಅವಳ ಸ್ನಾನ, ಜಪ, ಭಟ್ಟರಿಗಿಂತಲೂ ಬಲ್ಲ, ಒಂದು ಮಣ ಬೂದಿ ಹುಯ್ದುಕೊಂಡು, ಮೂಗುಹಿಡಿದುಕೊಂಡು, ಸಂಜೆ ಒಪ್ಪತ್ತಿನ ತನಕ ಕುಳಿತುಕೊಂಡಿರುತ್ತಾಳೆ. ತಿನ್ನುವುದು ಅಷ್ಟು ಮಜ್ಜಿಗೆ ಅನ್ನ. ಅದೂ ಒಂದು ಹೊತ್ತು. ಉಪ್ಪು ಹಾಕಿದರೆ ಅದೂ ಇಲ್ಲ."

ಎಲ್ಲರಿಗೂ ಕುತೂಹಲ. ಚೆಲುವೆಯಾದ ಈ ತಪಸ್ವಿನಿಯನ್ನು ನೋಡಬೇಕೆಂದು ಎಲ್ಲರಿಗೂ ಆಶೆ. ಆದರಿದು ಸಾಧ್ಯವಿಲ್ಲ. ಹೆಂಗುಸರು ಯಾರೂ ಭಟ್ಟರಮನೆಗೆ ಹೋಗುವಂತಿಲ್ಲ. ಗಂಡಸರಿಗೆ ಹೋಗಬೇಕಾದ ಪ್ರಮೇಯವಿಲ್ಲ ಅಂತೂ ಬಸವಿಯು ಯಾರ ಕಣ್ಣಿಗೂ ಬೀಳಲಿಲ್ಲ. "ಸಂಜೆಯ ಹೊತ್ತು ದೇವಸ್ಥಾನಕ್ಕಾದರೂ ಹೋದಾಳೇನೋ! ಆಗಲಾದರೂ ನೋಡೋಣ" ಎಂದು ಕೆಲವರು ಅನ್ವೇಷಣಕುತೂಹಲಿಗಳು, ಕಾದು ಕಾದು ನೋಡಿದರು. ಆಶೆಯು ಫಲಿಸಲಿಲ್ಲ.

---